









# ಭರವಸೆಯ ಯುವ ಪ್ರತಿಭೆ ಸುನಿಲ್ ಮಿಶ್ರಾ



ಉಡುಪಿ ಜಿಲ್ಲೆಯ ಶಿರ್ವದವರಾದ ಸುನಿಲ್ ಮಿಶ್ರಾ ಅವರ ಕಲಾ ವ್ಯಾಸಂಗ ಉಡುಪಿ ಹಾಗೂ ಮೈಸೂರಿನಲ್ಲಿ ನಡೆಯಿತು. ಶಿಲ್ಪಕಲಾ ತರಬೇತಿಯನ್ನು ಗುಣವಂತೇಶ್ವರ ಭಟ್ ಕಾರ್ಕಳ ಇವರಿಂದ ಪಡೆದಿರುತ್ತಾರೆ. ಖ್ಯಾತ ರೇಖಾ ಚಿತ್ರ ಕಲಾವಿದರಾದ ಕೆ. ಕೆ. ಹೆಬ್ಬಾರ್‌ರ ಕಟ್ಟಿಂಗೇರಿ ಇವರ ಊರಿಗೆ ಸಮೀಪದಲ್ಲಿ ಇರುವುದರಿಂದ ಅವರ ಪ್ರಭಾವದಿಂದ ಚಿತ್ರಕಲೆಯ ಬಗ್ಗೆ ಆಸಕ್ತಿ ಬೆಳೆಯಿತು. ಇದಕ್ಕೆ ಪ್ರೋತ್ಸಾಹ ನೀಡಿದವರು ಕನ್ನಡ ಉಪನ್ಯಾಸಕರಾದ ಶ್ರೀ ಶ್ರೀಧರ ಮೂರ್ತಿ ಹುಂಚ. ರೇಖಾಚಿತ್ರ, ಕಾಷ್ಠಶಿಲ್ಪ, ಶಿಲೆ, ಟೆರ್ರಾಕೊಟ್ಟ, ಜಲವರ್ಣ ಹಾಗೂ ಅಕ್ರಿಲಿಕ್ ಮಾಧ್ಯಮದಲ್ಲಿ ಹಲವಾರು ಏಕವ್ಯಕ್ತಿ ಹಾಗೂ ಸಮೂಹ ಪ್ರದರ್ಶನಗಳನ್ನು ಮಾಡಿರುತ್ತಾರೆ. ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರ ಕಲಾಕೃತಿಯೊಂದು 'ಯುನೆಸ್ಕೋ'ಗೆ ಆಯ್ಕೆಯಾಗಿರುವುದು ಹೆಮ್ಮೆಯ ವಿಷಯವಾಗಿದೆ.

– ಚಿತ್ರಲೇಖ











# ಹೊಸತು




## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ಸುನಿಲ್ ಮಿಶ್ರಾ, ವಿ. ಗೋಪಾಲ್, ತನು, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ, ಅರುಣ್ ನಂದಗಿರಿ

**ಮುಖಪುಟ :** ‘ಸ್ನೇಹಿತರು’ (ಅಕ್ರಿಲಿಕ್), ಕಲಾವಿದ : ಸುನಿಲ್ ಮಿಶ್ರಾ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಪ್ರಧಾನಿ ಮೋದಿಯವರು ಮತ್ತೆ ವಿದೇಶ ಪ್ರವಾಸ ಮುಗಿಸಿ ಬಂದಿದ್ದಾರೆ. ಅದು ಎಷ್ಟನೆಯ ಬಾರಿಯ ವಿದೇಶ ಪರ್ಯಟನೆಯೋ ತಿಳಿಯದು. ಅಮೆರಿಕಾಕ್ಕೆ ಆಗಲೆ ಮೂರು–ನಾಲ್ಕು ಬಾರಿ ಭೇಟಿ ನೀಡಿದ್ದಾರೆ. ಪ್ರತಿಯೊಂದು ಸಂದರ್ಭದಲ್ಲೂ ಅವರ ಭೇಟಿಯು ಫಲಪ್ರದವೇ ಆಗಿದೆಯೆಂಬ ಹೇಳಿಕೆಗಳು ಬರುತ್ತಿರುತ್ತವೆ. ಅಮೆರಿಕಾದ ಅಧ್ಯಕ್ಷನಂತೂ ಇವರ ಖಾಸಾ ಮಿತ್ರನೇ ಆಗಿಹೋಗಿರುವುದು ಸಾಕಷ್ಟು ಪ್ರಚಾರ ಪಡೆದಿದೆ. ಈ ಬಾರಿ ಪ್ರಧಾನಿ ಅಮೆರಿಕಾದಿಂದ ಹಿಂದಿರುಗಿದ ತರುವಾಯದಲ್ಲಿ ಆ ದೇಶದ ಸೆನೆಟ್ ಒಂದು ತೀರ್ಮಾನ ಕೈಗೊಂಡಿತು : ಭಾರತದೊಡನೆ ತನ್ನ ವ್ಯವಹಾರಗಳಲ್ಲಿ ಅಮೆರಿಕಾ ಯಾವ ವಿಶೇಷ ಸಂಬಂಧವನ್ನೂ ಹೊಂದುವುದಿಲ್ಲ, ಎಂದು. ನಮ್ಮ ದೇಶದ ಮಿಲಿಟರಿ ನೆಲೆಗಳನ್ನು ಧಾರಾಳವಾಗಿ ಅಮೆರಿಕಾಕ್ಕೆ ಬಿಟ್ಟುಕೊಟ್ಟದ್ದಷ್ಟೇ ನಮಗೆ ಲಾಭ. ಪರಮಾಣು ಇಂಧನದ ಸರಬರಾಜಿನ ಒಂದು ಸಮುದಾಯವಿದೆ. ಅದರಲ್ಲಿ ಟರ್ಕಿಯೂ ಸೇರಿದೆ. ಭಾರತವನ್ನು ಆ ಸಮುದಾಯದೊಳಕ್ಕೆ ಬಿಟ್ಟುಕೊಳ್ಳಲು ಟರ್ಕಿ ಸಮ್ಮತಿಸಿಲ್ಲ. ಚೀಣಾ ಸಹ ಅದಕ್ಕೆ ವಿರೋಧ ವ್ಯಕ್ತಪಡಿಸಿದೆ. ಸರ್ವಾನುಮತ ಇಲ್ಲದಿದ್ದರೆ ಆ ಸಮುದಾಯದಲ್ಲಿ ಯಾವ ದೇಶವೂ ಸೇರುವಂತಿಲ್ಲ. ಅಮೆರಿಕಾ ಏನಾದರೂ ಟರ್ಕಿಯ ಮನವೊಲಿಸುತ್ತದೆಯೋ ಕಾದು ನೋಡಬೇಕು. ಭಾರತ–ಅಮೆರಿಕಾ–ಜಪಾನ್ ಚೀಣಾದ ಸನಿಹದಲ್ಲಿ ನೌಕಾಪಡೆಗಳ ಜಂಟೀ ಕಸರತ್ತು ನಡೆಸಿರುವುದರಿಂದ ಆ ಮೂರು ದೇಶಗಳ ಕೆಂಗಣ್ಣಿಗೆ ಪಾತ್ರವಾಗದಿರಲು ಚೀಣಾ ತನ್ನ ವಿರೋಧವನ್ನು ಹಿಂತೆಗೆದುಕೊಳ್ಳುತ್ತದೆ ಎಂಬ ಊಹಾಪೋಹ ಎದ್ದಿದೆ. ಫಲಿತಾಂಶವನ್ನು ಎದುರುನೋಡಲಾಗುತ್ತಿದೆ. ಸ್ವಿಟ್ಜರ್‌ಲೆಂಡ್‌ನಲ್ಲಿ ನಮ್ಮ ದೇಶದ ಕಪ್ಪುಹಣದ ಭಾರಿ ಗಂಟು ಸದ್ದಿಲ್ಲದೆ ಅಡಗಿದೆ. ಸ್ನೇಹದ ಹೆಸರಿನಲ್ಲಿ ಆ ದೇಶವು ಈ ಬಾಬ್ತು ಯಾವ ಸಹಕಾರವನ್ನೂ ನೀಡುವುದಿಲ್ಲ. “ಹೋಗಲಿ, ಪರಮಾಣು ಇಂಧನ ಸರಬರಾಜು ಮಾಡುವ ದೇಶಗಳ ಸಮುದಾಯದಲ್ಲಿ ನಿಮಗೆ ಬೆಂಬಲ ನೀಡುತ್ತೇವೆ” ಎಂಬ ಆಶ್ವಾಸನೆ ನೀಡಿದರೆ ತನ್ನ ಗಂಟೇನೂ ಹೋಗುವುದಿಲ್ಲವಾದ್ದರಿಂದ ಹಸಿರು ನಿಶಾನೆ ತೋರಿಸಿಬಿಟ್ಟಿದೆ. ಟರ್ಕಿ ಮತ್ತು ಚೀಣಾ ಗಟ್ಟಿಯಾಗಿ ನಿಂತು ಭಾರತಕ್ಕೆ ಪ್ರವೇಶ ನೀಡದಿದ್ದರೆ ಅತಿ ಹೆಚ್ಚಿನ ನಷ್ಟ ಅಮೆರಿಕಾ ಮತ್ತು ಫ್ರಾನ್ಸ್‌ಗಳಿಗೆ ಮಾತ್ರ; ಏಕೆಂದರೆ, ಪರಮಾಣು ಇಂಧನ ಬಳಸಿ ವಿದ್ಯುತ್ ಉತ್ಪಾದಿಸುವ ಘಟಕಗಳನ್ನು ಮಾರಲು ಆ ಎರಡು ದೇಶಗಳೂ ಹವಣಿಸುತ್ತಿವೆ. ಆ ಘಟಕಗಳು ಒಂದರ್ಥದಲ್ಲಿ “ಗುಜರಿ ಮಾಲು” ಮತ್ತು ಎಲ್ಲೂ ಗ್ರಾಹಕರಿಲ್ಲದೆ ಅನಾಥವಾಗಿ ಬಿದ್ದುಕೊಂಡಿರುವ ಸಾಮಗ್ರಿ. ಅವುಗಳ ಮಾರಾಟದಿಂದ ಅಪಾರ ಹಣವನ್ನು ಆ ದೇಶಗಳು ನಮ್ಮಿಂದ ಪಡೆಯಲಿವೆ. ವಿಶ್ವದ ಎಲ್ಲೆಡೆ ಪರಮಾಣು ವಿದ್ಯುತ್ ಘಟಕಗಳನ್ನು ತಿರಸ್ಕರಿಸುತ್ತಿರುವಾಗ ನಮ್ಮ ದೇಶ ಅವನ್ನು ಪಡೆಯುವ ತರಾತುರಿಯಲ್ಲಿದೆ. ಟರ್ಕಿ ಮತ್ತು ಚೀಣಾ ತಮ್ಮ ವಿರೋಧವನ್ನು ಹಿಂಪಡೆಯದಿದ್ದರೆ ನಮ್ಮ ದೇಶದ ಜನತೆ ಅವಕ್ಕೆ ಋಣಿಗಳಾಗಿರಬೇಕು. ಏಕೆಂದರೆ ಈ ಪರಮಾಣು ವಿದ್ಯುತ್ ಘಟಕಗಳು ನಮಗೆ ಮಾರಕವಾದಂಥವು. ಸೂರ್ಯನ ಶಾಖದಿಂದ ನಮ್ಮ ದೇಶವು ಯಥೇಚ್ಛವಾಗಿ ವಿದ್ಯುತ್ತನ್ನು ಉತ್ಪಾದಿಸಬಹುದು : ಪರಮಾಣು ಘಟಕಗಳಿಗೆ ತಗಲುವ ಖರ್ಚಿಗಿಂತ ಇವು ಕಡಿಮೆ ಖರ್ಚಿನವು ಎನ್ನುತ್ತಾರೆ. ಅಲ್ಲದೆ ಯಾವ ಅನಾಹುತವನ್ನೂ ಉಂಟುಮಾಡದಿರುವ ಘಟಕಗಳು ಇವು. ಹೆಮ್ಮಾರಿಯನ್ನು ಮನೆಯೊಳಗೆ ಬಿಟ್ಟುಕೊಳ್ಳುವ ಬದಲು ಜನಸ್ನೇಹಿ–ಪರಿಸರಸ್ನೇಹಿ ಸೋಲಾರ್ ವಿದ್ಯುತ್‌ಅನ್ನು ಆಶ್ರಯಿಸುವುದು ಕ್ಷೇಮ. ಹಿಂದೆಲ್ಲಾ ಹಲವು ವಿಜ್ಞಾನಿಗಳು ಪರಮಾಣು ಶಕ್ತಿಯ ಬಳಕೆಯನ್ನು ಸಾರಾಸಗಟಾಗಿ ವಿರೋಧಿಸುತ್ತಿದ್ದುದು ನಮ್ಮ ದೇಶದ ವಿದ್ಯಮಾನವಾಗಿತ್ತು. ಅದೇಕೋ ಈಗ ಮೌನ ಆವರಿಸಿದೆ. ಜನರು ಸಹ ಸುಸ್ತಾದಂತೆ ತೋರುತ್ತಿದ್ದಾರೆ, ಪ್ರತಿಭಟನೆಯ ಮತ್ತು ತಿರಸ್ಕರಿಸುವ ದನಿ ಹ್ರಸ್ವವಾಗಿದೆ. ಈಗಲೂ ಈ ಉಪದ್ರವದ ಘಟಕಗಳನ್ನು ದೇಶದೊಳಕ್ಕೆ ಬಿಟ್ಟುಕೊಳ್ಳದಿರುವ ಛಾತಿಯನ್ನು ನಾವು ಮೈಗೂಡಿಸಿಕೊಳ್ಳಬೇಕು.

ಪ್ರಧಾನಿಯವರ ವಿದೇಶ ಪರ್ಯಟನಕ್ಕೆ ಹಿಂದಿರುಗುವುದಾದರೆ ಒಂದೆರಡು ಮಹಾನ್ ಸತ್ಯಗಳು ನಮ್ಮನ್ನು ಬೆರಗುಗೊಳಿಸುತ್ತವೆ : (ಅ) ೨೦೦೨ರ ನಂತರ ಅವರನ್ನು ದೂಷಿಸುತ್ತಿದ್ದ ದೇಶಗಳ ನಾಯಕರು ಇಂದು ಲಾಭದ ಆಸೆಯಿಂದ ಅವರನ್ನು ಆದರದಿಂದ ಆಲಂಗಿಸುತ್ತಿದ್ದಾರೆ. ಆ ಲಾಭದ ಆಕಾಂಕ್ಷೆಯು

**(೬ನೇ ಪುಟಕ್ಕೆ )**



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ–೧೭ ಸಂಚಿಕೆ–೧೨ ಜುಲೈ ೨೦೧೬

**ಗೌರವ ಸಂಪಾದಕ**
ಜಿ. ರಾಮಕೃಷ್ಣ

**ಸಂಪಾದಕ**
ಸಿದ್ದನಗೌಡ ಪಾಟೀಲ

**ಸಹಸಂಪಾದಕರು**
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೯೪, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**



# ಸಂಪಾದಕೀಯ

## ಕೊಳೆಯನ್ನು ತಿಳಿನೀರಿನಿಂದ ತೊಳೆಯಬೇಕು

ರಾಜ್ಯದಲ್ಲಿರುವ ಕಾಂಗ್ರೆಸ್ ಸರಕಾರ ಹಿಂದಿನ ಬಿ.ಜೆ.ಪಿ. ಸರಕಾರದ ಗಣಿ, ಡಿ–ನೋಟಿಫಿಕೇಶನ್ ಹಗರಣಗಳನ್ನು ವಿರೋಧಿಸಿ ಅಧಿಕಾರಕ್ಕೆ ಬಂದಿತು. ಗಣಿ ಹಗರಣದ ವಿರುದ್ಧ ಅಂದಿನ ವಿರೋಧ ಪಕ್ಷದ ನಾಯಕರಾಗಿದ್ದ ಸಿದ್ದರಾಮಯ್ಯನವರ ನಾಯಕತ್ವದಲ್ಲಿ ಕಾಂಗ್ರೆಸ್ ಪಕ್ಷ ಬಳ್ಳಾರಿಗೆ ಕಾಲ್ನಡಿಗೆ ಜಾಥಾ ನಡೆಸಿತು. ಭ್ರಷ್ಟಾಚಾರದ ವಿರುದ್ಧ ಪ್ರಚಾರ ಮಾಡಿತು. ರಾಜ್ಯದಲ್ಲಿದ್ದ ಆಡಳಿತ ವಿರೋಧಿ ಅಲೆ, ಬಿ.ಜೆ.ಪಿ.ಯಲ್ಲಾದ ವಿಘಟನೆಯ ಲಾಭ ಪಡೆದು ಅಧಿಕಾರಕ್ಕೆ ಬಂದಿತು. ಕಾಂಗ್ರೆಸ್ ಪಕ್ಷವೇನೂ ತಾತ್ವಿಕವಾಗಿ ಭ್ರಷ್ಟಾಚಾರದ ವಿಷಯದಲ್ಲಿ ಬಿ.ಜೆ.ಪಿ.ಗಿಂತ ಭಿನ್ನವಾಗಿರಲಿಲ್ಲ. ಕೇಂದ್ರದ ಯು.ಪಿ.ಎ. ಸರಕಾರ ಭ್ರಷ್ಟಾಚಾರದ ಹಗರಣಗಳಿಂದಲೇ ಅಧಿಕಾರ ಕಳೆದು ಕೊಂಡಿತು. ಸಿದ್ದರಾಮಯ್ಯನವರ ನಾಯಕತ್ವದಲ್ಲಿ ರಾಜ್ಯದಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಪಕ್ಷಕ್ಕೆ ಕೆಲವು ಕನಿಷ್ಠ ಜವಾಬ್ದಾರಿಗಳಿದ್ದವು. ಹಗರಣಮುಕ್ತ ಆಡಳಿತ ನೀಡುವುದು ಅದರ ಪ್ರಮುಖ ಜವಾಬ್ದಾರಿಯಾಗಿತ್ತು. ಹಿಂದಿನ ಸರಕಾರ ಆಡಳಿತ ಹಾಗೂ ರಾಜಕೀಯದಲ್ಲಿ ಸೃಷ್ಟಿಸಿದ್ದ ಕೊಳೆಯನ್ನು ತೊಳೆಯುವುದು ಅದರ ಆದ್ಯ ಕರ್ತವ್ಯವಾಗಿತ್ತು. ಆ ಕರ್ತವ್ಯವನ್ನು ನಿಭಾಯಿಸಬೇಕಾದರೆ ಕನಿಷ್ಠ ಪ್ರಾಮಾಣಿಕತೆ, ಪಾರದರ್ಶಕತೆಯನ್ನು ಈ ಸರಕಾರ ತನ್ನ ಆಡಳಿತದಲ್ಲಿ ಅನುಸರಿಸಬೇಕಿತ್ತು. ಕೊಳೆಯನ್ನು ತಿಳಿನೀರಿನಿಂದ ತೊಳೆಯಬೇಕು. ಕೊಳೆನೀರಿನಿಂದ ಕೊಳೆಯನ್ನು ತೊಳೆಯ ಲಾಗುವುದಿಲ್ಲ ಎಂಬ ಕನಿಷ್ಠ ಪರಿಜ್ಞಾನ ಈ ಸರಕಾರಕ್ಕಿರಬೇಕಿತ್ತು. ಹಿಂದಿನ ಆಡಳಿತಕ್ಕಿಂತ ತಮ್ಮ ಆಡಳಿತ ಭಿನ್ನವೆಂಬುದನ್ನು ಆಚರಣೆಯ ಮೂಲಕ ತೋರಿಸುವ ಹೊಣೆ ಈ ಸರಕಾರದ ಮೇಲಿತ್ತು. ಹಿಂದಿನ ಬಿ.ಜೆ.ಪಿ. ಸರಕಾರದಲ್ಲಾದಂಥ ದೊಡ್ಡ ಹಗರಣಗಳು ಇಂದಿನ ಕಾಂಗ್ರೆಸ್ ಆಡಳಿತದಲ್ಲಿ ನಡೆದಿಲ್ಲ ಎಂಬುದು ವಾಸ್ತವವಾದರೂ ಹಗರಣಮುಕ್ತ ಆಡಳಿತ ನೀಡಲು ಈ ಸರಕಾರಕ್ಕೆ ಸಾಧ್ಯವಾಗಿಲ್ಲ ಎನ್ನುವುದೂ ಅಷ್ಟೇ ವಾಸ್ತವ. ಮುಖ್ಯಮಂತ್ರಿಗಳ ವಾಚ್ ಹಗರಣ, ಅವರ ಪುತ್ರನಿಗೆ ಅನುಕೂಲ ಮಾಡಿಕೊಟ್ಟ ಲ್ಯಾಬ್ ಹಗರಣ, ಕೆಲವು ಮಂತ್ರಿಗಳ ಮೇಲಿನ ಭ್ರಷ್ಟಾಚಾರದ ಆರೋಪಗಳನ್ನು ಹೊರತುಪಡಿಸಿದರೆ ರಾಜ್ಯದ ಬೊಕ್ಕಸಕ್ಕೆ ಅಪಾರ ಹಾನಿಯುಂಟುಮಾಡುವ ಯಾವುದೇ ಹಗರಣ ಈ ಮೂರು ವರ್ಷದ ಅವಧಿಯಲ್ಲಿ ನಡೆದಿಲ್ಲ. ಆದರೆ ಮುಂಬರುವ ಚುನಾವಣೆಯಲ್ಲಿ ಅಧಿಕಾರ ಕಳೆದುಕೊಳ್ಳುವ ಸೂಚನೆಗಳಿರುವಾಗ ಪ್ರಾಮಾಣಿಕ, ಪಾರದರ್ಶಕ ಆಡಳಿತ ನೀಡುವುದು, ಜನಸಾಮಾನ್ಯರ ನಂಬಿಕೆ ಉಳಿಸಿಕೊಳ್ಳುವುದು ಈ ಸರಕಾರದ ಜವಾಬ್ದಾರಿಯಾಗಿತ್ತು. ಯಾವ ಸರಕಾರ ಬಂದರೂ ಭ್ರಷ್ಟಾಚಾರ ನಿರ್ಮೂಲನೆ ಮಾಡುವುದು ಕಷ್ಟದ ಕೆಲಸವೇ. ಪ್ರಮುಖವಾಗಿ ಕಾಂಗ್ರೆಸ್, ಬಿ.ಜೆ.ಪಿ., ಜೆ.ಡಿ.ಎಸ್.ನಂಥ ಪಕ್ಷಗಳು ಉದ್ಯಮಿಗಳಿಂದ, ಕಾರ್ಪೊರೇಟ್ ಕಂಪನಿಗಳಿಂದ ಪಕ್ಷಕ್ಕೆ, ಚುನಾವಣೆಗೆ ದೇಣಿಗೆ ಪಡೆಯುವುದು, ದೇಣಿಗೆ ಹೆಸರಿನಲ್ಲಿ ನಡೆವ ಭ್ರಷ್ಟಚಾರವೇ ಆಗುತ್ತದೆ. ಆಡಳಿತಕ್ಕೆ ಬಂದ ಪಕ್ಷಗಳು ದೇಣಿಗೆ ಕೊಟ್ಟವರಿಗೆ ನೀತಿ ನಿರೂಪಣೆಯಲ್ಲಿ ಮಾಡಿಕೊಡುವ ಅನುಕೂಲತೆಗಳು, ಇದನ್ನು ನೋಡಿಯೂ ನೋಡದಂತಿರುವ ವಿರೋಧಪಕ್ಷಗಳು ದೇಣಿಗೆ ಹೆಸರಿನ ಭ್ರಷ್ಟಾಚಾರಕ್ಕೆ ಪೂರಕವಾಗಿರುತ್ತವೆ. ಮತನೀಡಿ ಗೆಲ್ಲಿಸಿದ ಮತದಾರರ, ಜನಸಾಮಾನ್ಯರ ಹಿತಾಸಕ್ತಿಯನ್ನು ಬಲಿಕೊಟ್ಟು ದೇಣಿಗೆದಾರರಿಗೆ ನಿಷ್ಠರಾಗಿರುವುದು ಉನ್ನತ ಹಂತದ ಭ್ರಷ್ಟಾಚಾರ. ಇದು ಕೇಂದ್ರ ಹಾಗೂ ರಾಜ್ಯ ಸರಕಾರಗಳ ಆಡಳಿತದಲ್ಲಿ ಅವ್ಯಾಹತವಾಗಿ ನಡೆದಿದೆ. ಗಣಿ, ಅರಣ್ಯ ಮುಂತಾದ ನೈಸರ್ಗಿಕ ಸಂಪನ್ಮೂಲಗಳನ್ನು ಖಾಸಗಿ ಕಂಪನಿಗಳ ಲೂಟಿಗೆ ವಹಿಸಿಕೊಡುವುದು, ರೈತರ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ವಿಶೇಷ ಆರ್ಥಿಕ ವಲಯದ ಹೆಸರಿನಲ್ಲಿ ದೇಶಿ, ವಿದೇಶಿ ಕಂಪನಿಗಳಿಗೆ ಕೊಡುವುದು, ಅಭಿವೃದ್ಧಿ ಹೆಸರಿನಲ್ಲಿ ಸಾಮಾಜಿಕ ಅರಣ್ಯ, ರೆವಿನ್ಯೂ ವಲಯದ ಭೂಮಿಯನ್ನು ಕಡಿಮೆ ದರಕ್ಕೆ ಉದ್ಯಮಿಗಳಿಗೆ ಮಾರುವುದು – ಇವೆಲ್ಲ ಕಾನೂನು ಬದ್ಧವಾಗಿಯೇ ನಡೆಯುವ ಭ್ರಷ್ಟಾಚಾರಗಳು. ಇದರಾಚೆಗೂ ಆಡಳಿತ ವ್ಯವಸ್ಥೆಯಲ್ಲಿ ಜನಸಾಮಾನ್ಯರ ಬದುಕಿಗೆ ಧಕ್ಕೆಯಾಗುವಂಥ ನೀತಿಗಳನ್ನು ಕೈಬಿಡಲು ಆಡಳಿತಗಾರರು ಪ್ರಯತ್ನಿಸಬೇಕು. ಇಂಥ ಪ್ರಯತ್ನಗಳನ್ನು ಮಾಡದಿರುವ, ಭ್ರಷ್ಟಾಚಾರಕ್ಕೆ ಅನುಕೂಲವಾಗುವಂಥ ನಡೆ ರಾಜ್ಯದ ಸಿದ್ದರಾಮಯ್ಯನವರ ಸರಕಾರದಿಂದ ನಡೆದಿದೆ.

ಕರ್ನಾಟಕದ ಲೋಕಸೇವಾ ಆಯೋಗ (ಕೆ.ಪಿ.ಎಸ್.ಸಿ) ಭ್ರಷ್ಟಾಚಾರದ ಮೂಲಗಳಲ್ಲಿ ಒಂದು. ಸರಕಾರಿ ನೌಕರರನ್ನು, ಅಧಿಕಾರಿಗಳನ್ನು ಆಯ್ಕೆಮಾಡುವ ಈ ಸಂಸ್ಥೆ ಯಾವತ್ತೂ ಭ್ರಷ್ಟಾಚಾರದ ಆರೋಪಗಳಿಂದ ಮುಕ್ತವಾಗಿಲ್ಲ. ಈ ಆಯೋಗದ ಅಧ್ಯಕ್ಷ ಮತ್ತು ಸದಸ್ಯರ ನಾಮಕರಣದಲ್ಲಿಯೇ ಕೋಟ್ಯಾಂತರ ರೂಪಾಯಿಯ ಹಗರಣ ನಡೆಯುತ್ತದೆ. ೨೦೧೧ರಲ್ಲಿ ನಡೆದ ಹಗರಣಗಳ ವರದಿಗಳು ರಾಜ್ಯವನ್ನೇ ಬೆಚ್ಚಿಬೀಳಿಸಿದ್ದವು. ಮಾಧ್ಯಮಗಳ ಮಾರುವೇಷದ ಕಾರ್ಯಾಚರಣೆಯಲ್ಲಿ ಆಯೋಗದ ಅಧ್ಯಕ್ಷರ, ಸದಸ್ಯರ, ಮತ್ತು ಏಜೆಂಟ್‌ರುಗಳ ಬಣ್ಣ ಬಯಲಾಯಿತು. ತನಿಖೆ ನಡೆಸಿದ ರಾಜ್ಯದ ಸಿ.ಐ.ಡಿ. ಸಂಸ್ಥೆ ವಿವಿಧ ಹುದ್ದೆಗಳಿಗಾಗಿ ನಿಗದಿಯಾಗಿದ್ದ ಭ್ರಷ್ಟಾಚಾರದ ಮೌಲ್ಯವನ್ನೂ ಬಯಲು ಮಾಡಿತ್ತು. 'ಬಿ' ಗ್ರೂಪ್‌ನ ಹುದ್ದೆಗಳಿಗೆ ೨೫ರಿಂದ ೩೦ ಲಕ್ಷ ರೂಪಾಯಿಗಳಾಗಿದ್ದರೆ, ಉನ್ನತ ಹಂತದ ಹುದ್ದೆಗಳಿಗೆ ೭೫ ಲಕ್ಷದಿಂದ ಒಂದೂವರೆ ಕೋಟಿ ರೂಪಾಯಿಗಳವರೆಗೆ ನಿಗದಿಯಾಗಿದ್ದ ಅಕ್ರಮ ವ್ಯವಹಾರಗಳನ್ನು ಬಯಲುಮಾಡಿತ್ತು. ಇದೇ ಕಾಂಗ್ರೆಸ್ ಸರಕಾರ ಅಂಥ ಕೆಲವು ಆಯ್ಕೆ ಪಟ್ಟಿಯನ್ನೂ

ಹಿಂತೆಗೆದುಕೊಂಡಿತ್ತು. ಆಡಳಿತ ವ್ಯವಸ್ಥೆಗಾಗಿ ನೌಕರರನ್ನು, ಅಧಿಕಾರಿಗಳನ್ನು ಆಯ್ಕೆ ಮಾಡುವ ಸಂಸ್ಥೆಯಲ್ಲಿಯೇ ಈ ಪರಿ ಭ್ರಷ್ಟಾಚಾರ ನಡೆದರೆ ಇಂಥ ವ್ಯವಸ್ಥೆಯಲ್ಲಿ ಆಯ್ಕೆಯಾಗಿ ಬಂದ ಅಧಿಕಾರಿಗಳು, ನೌಕರರು ಇನ್ನೆಂಥ ಸೇವೆ ಕೊಡಲು ಸಾಧ್ಯ. ತಮ್ಮ ಆಯ್ಕೆಗಾಗಿ ಸುರಿದ ಲಂಚದ ಹಣವನ್ನು ಅವರು ಸಾರ್ವಜನಿಕರಿಂದ ಹಿಂತಿರುಗಿ ಪಡೆಯುತ್ತಾರೆ. ಸರಕಾರದ ಯೋಜನೆಗಳಿಗೆ ಕನ್ನ ಹಾಕುತ್ತಾರೆ. ಇಷ್ಟೆಲ್ಲ ಗೊತ್ತಿದ್ದೂ ಇತ್ತೀಚೆಗೆ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷ ಸ್ಥಾನಕ್ಕೆ ಪ್ರಾಮಾಣಿಕರನ್ನು ಪರಿಗಣಿಸದೇ ಈಗಾಗಲೇ ಹಲವಾರು ಆರೋಪ ಹೊತ್ತಿರುವ ಶ್ಯಾಂ ಭಟ್ ಎನ್ನುವ ಅಧಿಕಾರಿಯ ಹೆಸರನ್ನು ಶಿಫಾರಸ್ಸು ಮಾಡಿದ್ದಾರೆ. ಮೇಲ್ನೋಟಕ್ಕೆ ಈ ಶಿಫಾರಸ್ಸು ಹಲವಾರು ಪ್ರಶ್ನೆಗಳನ್ನು ಎತ್ತಿದೆ. ಹೈಕೋರ್ಟಿನ ಮೆಟ್ಟಿಲನ್ನೂ ಏರಿದೆ. ಕರ್ನಾಟಕ ಲೋಕಸೇವಾ ಆಯೋಗದ ಅಧ್ಯಕ್ಷರ ಆಯ್ಕೆಯಲ್ಲಿ ಕರ್ನಾಟಕ ಸರಕಾರದ ಅದರಲ್ಲೂ ಮುಖ್ಯಮಂತ್ರಿ ಸಿದ್ದರಾಮಯ್ಯನವರ ನಡೆ ಹಲವಾರು ಸಂಶಯಗಳಿಗೆ ಎಡೆಮಾಡಿದೆ. ಇದರಿಂದ ಸರಕಾರ ಭ್ರಷ್ಟಾಚಾರದ ಕುರಿತು ಎಂಥ ನಿಲುವನ್ನು ಹೊಂದಿದೆ ಎಂಬುದು ಸಾಬೀತಾಗುತ್ತದೆ.

ಕೇಂದ್ರದ ಬಿ.ಜೆ.ಪಿ. ಸರಕಾರ 'ವಿಕಾಸ'ದ ಹೆಸರಿನಲ್ಲಿ ದೇಶವನ್ನು 'ವಿನಾಶ'ದತ್ತ ಕೊಂಡೊಯ್ಯುವ ಸಂದರ್ಭದಲ್ಲಿ, ರಾಜ್ಯದಲ್ಲಿ ಇನ್ನೆರಡು ವರ್ಷ ಕಳೆದರೆ 'ವಿನಾಶ' ಪರ್ವದ ರೂವಾರಿಗಳೇ ಅಧಿಕಾರಕ್ಕೆ ಬರುವ ಸೂಚನೆಗಳಿರುವಾಗ ಇತಿಮಿತಿಯ ಮಧ್ಯೆಯೂ ಪ್ರಾಮಾಣಿಕ ಆಡಳಿತ ಕೊಡಬೇಕಾದ ಜರೂರತ್ತಿರುವ ಇಂಥ ಸಮಯದಲ್ಲಿ ರಾಜ್ಯದ ಕಾಂಗ್ರೆಸ್ ಸರಕಾರ 'ವಿದಾಯ' ಹೇಳುವ ಸ್ಥಿತಿಯಲ್ಲಿದೆ. ಭ್ರಷ್ಟಾಚಾರ ಇಂದು ಕೇವಲ ಚಟುವಟಿಕೆಯಾಗಿ ಉಳಿದಿಲ್ಲ. ಅದೊಂದು ಸಂಸ್ಕೃತಿಯಾಗಿದೆ. ವರದಕ್ಷಿಣೆ ಪದ್ಧತಿಯಂತೆ ಇಲ್ಲಿ ಲಂಚ ತೆಗೆದುಕೊಳ್ಳುವವರೂ ಕೊಡುವವರೂ ಫಲಾನುಭವಿಗಳೇ. ಈ ಅಕ್ರಮ ವ್ಯವಹಾರದಲ್ಲಿ ವ್ಯತ್ಯಾಸವಾದಾಗ ಮಾತ್ರ ಹಗರಣ ಬಯಲಿಗೆ ಬರುತ್ತದೆ. ಇಂಥ ವ್ಯವಸ್ಥೆಯ ವಿರುದ್ಧ ಆಡಳಿತ, ವಿರೋಧ ಪಕ್ಷಗಳು ಕ್ರಮ ಕೈಗೊಳ್ಳದೇ ಇದ್ದಾಗ, ಲಂಚಕೊಡಲೂ ಸಾಧ್ಯವಾಗದೆ, ಅರ್ಹತೆ ಇದ್ದೂ ಅವಕಾಶವಂಚಿತರಾದ ಜನ ಪ್ರತಿಭಟಿಸಬೇಕಾಗುತ್ತದೆ. ಲೋಕಸೇವಾ ಆಯೋಗದ ಅಕ್ರಮಗಳನ್ನು ತಡೆದರೆ ಆಡಳಿತ ವ್ಯವಸ್ಥೆಯಲ್ಲಿನ ಭ್ರಷ್ಟಾಚಾರ ನಿಂತುಹೋಗಲಿಕ್ಕಿಲ್ಲ. ನಿಯಂತ್ರಣಕ್ಕಾದರೂ ಬಂದೀತು. ರಾಜ್ಯದ ಜನತೆ ಅದರಲ್ಲೂ ಕೆ.ಪಿ.ಎಸ್.ಸಿ. ಮೂಲಕ ಉದ್ಯೋಗ ಪಡೆಯಬೇಕೆಂಬ ಆಕಾಂಕ್ಷಿಗಳಾದರೂ ಸಂಘಟಿತರಾಗಿ ಇಂಥ ಭ್ರಷ್ಟಾಚಾರದ ವಿರುದ್ಧ ಹೋರಾಡಬೇಕು.

ಸಿದ್ದನಗೌಡ ಪಾಟೀಲ

## ಬೆಂಗಳೂರಿನ ಕಸದ ರಾಶಿಗೆ ಮುಕ್ತಿಯೇ ಇಲ್ಲ!

ರಾಜಧಾನಿ ಬೆಂಗಳೂರು ನಗರದ ಕಸ ವಿಲೇವಾರಿ ಒಂದು ಬಗೆಹರಿಯದ ಸಮಸ್ಯೆಯಾಗಿಯೆ ಉಳಿದಿದೆ. ಯಾವ ರಸ್ತೆಯ ಮೂಲೆ ಮೂಲೆಯತ್ತ ಕಣ್ಣು ಹಾಯಿಸಿದರೂ ಕಸದ ರಾಶಿಯದೇ ದೃಶ್ಯ. ಪ್ರಧಾನಿ ನರೇಂದ್ರ ಮೋದಿ 'ಸ್ವಚ್ಛ ಭಾರತ' ಎಂದು ಘೋಷಿಸಿದ ಮೇಲೆ ದೇಶದ ಎಲ್ಲ ನಗರಗಳಲ್ಲೂ ಕಸ ವಿಲೇವಾರಿ ಸಮಸ್ಯೆ ಬೃಹದಾಕಾರವಾಗಿ ಬೆಳೆದಿದೆ. ಸಂಪ್ರದಾಯ ಶರಣರಾಗಿದ್ದರೆ ಯಾವ ಘಳಿಗೆಯಲ್ಲಿ 'ಸ್ವಚ್ಛ ಭಾರತ' ಘೋಷಿಸಿದರೋ ಎನ್ನುತ್ತಿದ್ದರು. ಅಂತೂ ಇತರ ಘೋಷಣೆಗಳಂತೆಯೇ ಇದೂ ಕೂಡ ಕಾರ್ಯರೂಪಕ್ಕೆ ಬರಲಾಗದ್ದಾಗಿದೆ.

ಬೆಂಗಳೂರು ನಗರ ಒಂದು ಕಾಲಕ್ಕೆ ಉದ್ಯಾನ ನಗರಿ ಎನಿಸಿಕೊಂಡಿತ್ತು. ಸ್ವಚ್ಛತೆಗೆ ಹೆಸರಾಗಿತ್ತು. 'ಸಿಲಿಕಾನ್ ಸಿಟಿ' ಎಂದು ಕರೆಸಿಕೊಳ್ಳುವ ಈ ನಗರ ಈಗ 'ಗಲೀಜು ನಗರ'ವಾಗಿದೆ. ಇದಕ್ಕೆ ಹೊಣೆ ಯಾರು ? ಖಂಡಿತವಾಗಿ ರಾಜ್ಯ ಸರಕಾರ ಹಾಗೂ ನಗರ ಪಾಲಿಕೆ. ಎಲ್ಲ ನಗರಪಾಲಿಕೆಗಳೂ ಬಜೆಟ್ ಕೊರತೆಯಿಂದ ನಗರಗಳ ನೈರ್ಮಲ್ಯ ಕಾಪಾಡಲಾಗದೆ ಪರದಾಡುತ್ತಿವೆ. ಅದರಲ್ಲೂ ಬೆಂಗಳೂರು ನಗರ ಪಾಲಿಕೆ, ಬೃಹತ್ ಆಗಿರುವುದರಿಂದ ಸಮಸ್ಯೆಗಳು ಮತ್ತಷ್ಟು ಜಾಸ್ತಿ. ಯದ್ವಾತದ್ವಾ ಎಲ್ಲ ಮೂಲೆಗಳಲ್ಲೂ ಹರಡಿಕೊಂಡು ಬೆಳೆದಿರುವ ಈ ನಗರ ಅಗತ್ಯವಾದ ಮೂಲ ಸೌಕರ್ಯಗಳಿಂದ ವಂಚಿತವಾಗಿದೆ. ಇದರ ಮೇಲೆ ಪಾಲಿಕೆ ಮೊದಲಿನಿಂದಲೂ ಅಂಟಿಸಿಕೊಂಡಿರುವ ಭ್ರಷ್ಟಾಚಾರ ನಗರದಷ್ಟೇ ಬೃಹದಾಕಾರವಾಗಿ ಬೆಳೆದಿದೆ.

ಎರಡು ವರ್ಷಗಳ ಹಿಂದೆ ನಗರದ ಹೊರವಲಯದಲ್ಲಿರುವ ಮಂಡೂರು ಗ್ರಾಮದ ಜನರು, ತಮ್ಮ ಗ್ರಾಮದಲ್ಲಿ ತಂದು ಸುರಿಯುತ್ತಿದ್ದ ರಾಜಧಾನಿಯ ಕಸದ ರಾಶಿ ವಿರುದ್ಧ ನಡೆಸಿದ ಹೋರಾಟವನ್ನು ಇಲ್ಲಿ ಗಮನಿಸಬೇಕು. ಇದೇ ಬಗೆಯ ವಿರೋಧ ನಗರದ ಸುತ್ತಮುತ್ತಲ ಎಲ್ಲ ಗ್ರಾಮಗಳಲ್ಲೂ ಎದ್ದಿದೆ. ಇದಕ್ಕೆ ಮುಖ್ಯಕಾರಣ ಸರಕಾರ ಹಾಗೂ ನಗರ ಪಾಲಿಕೆ ಸಂಬಂಧಪಟ್ಟ ಗ್ರಾಮಗಳಿಗೆ ನೀಡಿದ್ದ ಆಶ್ವಾಸನೆಗಳನ್ನು ಪೂರೈಸದೇ ಹೋಗಿರುವುದು. ಇದರ ಜೊತೆಗೆ ವೈಜ್ಞಾನಿಕವಾಗಿ ಕಸವನ್ನು ಸಂಸ್ಕರಿಸುವ ಸ್ಥಾವರಗಳ ನಿರ್ಮಾಣದಲ್ಲಿ ಆಗುತ್ತಿರುವ ಮಂದಗತಿ. ಇದರಿಂದಾಗಿ, ಗ್ರಾಮಸ್ಥರ ಬದುಕು ಹರಡುತ್ತಿರುವ ಗಬ್ಬು ವಾಸನೆ, ಮಾಲಿನ್ಯದಿಂದಾಗಿ ದುಸ್ತರವಾಗಿದೆ. ರೋಗರುಜಿನಗಳು ಈ ಗ್ರಾಮಗಳಲ್ಲಿ ಹರಡುತ್ತಿವೆ. ಕಸವನ್ನು ಕೊಂಡೊಯ್ಯುವ ಲಾರಿಗಳು ಸುರಿದುಹೋಗುವ ಕಸಮಾತ್ರ ಬೆಟ್ಟದಂತೆ ಬೆಳೆಯುತ್ತವೆಯೇ ಹೊರತು ಯಾವುದೇ ಬಗೆಯ ಸಂಸ್ಕರಣ ವ್ಯವಸ್ಥೆ ಇರುವುದಿಲ್ಲ.

ಇದರ ಮೇಲೆ ನಗರಪಾಲಿಕೆ ಕಂಟ್ರಾಕ್ಟುದಾರರಿಗೆ ಪಾವತಿಸಬೇಕಾದ ಹಣಪಾವತಿ ಮಾಡದೆ ಇರುವುದು ಸಮಸ್ಯೆಯನ್ನು ಇನ್ನಷ್ಟು ಬಿಗಡಾಯಿಸಿದೆ. ಗುತ್ತಿಗೆದಾರರು ತಮ್ಮ ಕೆಲಸಗಾರರಿಗೆ ವೇತನಗಳನ್ನು ಕೊಡದೆ




ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸತಾಯಿಸುವುದು ಸಮಸ್ಯೆಯ ಇನ್ನೊಂದು ಮುಖ. ಪಾಲಿಕೆಗಳಲ್ಲಿ ಹಣದ ಕೊರತೆ ಒಂದು ಕಾರಣವಾದರೆ, ಅಧಿಕಾರಿಗಳ ಲಂಚಗುಳಿತನ ಇನ್ನೊಂದು. ಹಾಗಾಗಿ, ಪಾಲಿಕೆ ಟೆಂಡರ್ ಕರೆದರೂ ಗುತ್ತಿಗೆದಾರರು ಬರುತ್ತಿಲ್ಲ. ಸಾಲದಲ್ಲಿ ಮುಳುಗಿರುವ ಬೆಂಗಳೂರ ನಗರಪಾಲಿಕೆ ತನ್ನ ಬಹುತೇಕ ಆಸ್ತಿಪಾಸ್ತಿಗಳನ್ನು ರಾಷ್ಟ್ರೀಕೃತ ಬ್ಯಾಂಕುಗಳಿಗೆ ಅಡಮಾನ ಮಾಡಿರುವುದು ಹೊಸ ವಿಷಯವೇನಲ್ಲ. ವರ್ಲ್ಡ್ ಬ್ಯಾಂಕ್, ರಾಜ್ಯ ಸರಕಾರ, ಹಾಗೂ ಕೇಂದ್ರ ನೀಡುವ ಗ್ರಾಂಟುಗಳು ಏನಾಗುತ್ತವೆ ಎನ್ನುವುದು ಯಾರಿಗೂ ಗೊತ್ತಾಗುವುದಿಲ್ಲ. ನಗರಪಾಲಿಕೆ ಸದಸ್ಯರುಗಳೇ ಹೆಚ್ಚಿನ ಎಲ್ಲ ಕಂಟ್ರಾಕ್ಟುಗಳನ್ನು ಪಡೆದುಕೊಂಡು ಲಪಟಾಯಿಸುವುದು ಹಿಂದಿನಿಂದ ನಡೆದುಬಂದದ್ದು. ಈಗ ಅದು ಇನ್ನಷ್ಟು ಹೆಚ್ಚಾಗಿದೆ. ನಗರಪಾಲಿಕೆ ತನ್ನ ವರಮಾನ ಹೆಚ್ಚಿಸಿಕೊಳ್ಳಲು ಸೂಕ್ತವಾದ ಆಡಳಿತ ವ್ಯವಸ್ಥೆಯನ್ನು ರೂಪಿಸಿಲ್ಲ. ಇದನ್ನು ನಾವು ಆಸ್ತಿ ತೆರಿಗೆ ವಸೂಲಿಯ ವಿಚಾರದಲ್ಲಿ, ಜಾಹೀರಾತು ಫಲಕಗಳ ವಿಷಯದಲ್ಲಿ ಹಾಗೂ ಕಟ್ಟಡಗಳ ಬಾಡಿಗೆ ಪಡೆದು ಕೊಳ್ಳುವುದರಲ್ಲಿ ಮುತುವರ್ಜಿ ತೋರದಿರುವುದನ್ನು ಕಾಣುತ್ತಿದ್ದೇವೆ. ಎಲ್ಲ ಕಡೆಗಳಲ್ಲೂ ಭ್ರಷ್ಟಾಚಾರ ತಾಂಡವವಾಡುತ್ತಿದೆ. ಹಾಗಾಗಿ, ಮಹಾನಗರ ಪಾಲಿಕೆಯೇ ಒಂದು ಬೃಹತ್ ಸಮಸ್ಯೆಯಾಗಿ ಕುಳಿತಿದೆ. ಸರಕಾರ ಇವೆಲ್ಲವನ್ನು ತಿಳಿದಿದ್ದೂ ಏನೂ ಕ್ರಮ ಕೈಗೊಳ್ಳದೆ ರಾಜಕೀಯ ನಡೆಸುತ್ತಿರುವುದು ವಿಪರ್ಯಾಸ. ಮುಖ್ಯಮಂತ್ರಿ ಸಿದ್ದರಾಮಯ್ಯ ಎಲ್ಲಕ್ಕೂ ಮದ್ದು ನಗರಪಾಲಿಕೆಯ ವಿಭಜನೆ ಎಂದುಕೊಂಡಿದ್ದಾರೆ. ಆದರೆ ಇದು ಹೊರೆಯನ್ನು ಮತ್ತಷ್ಟು ಹೆಚ್ಚಿಸಿ, ಹೊಸ ಸಮಸ್ಯೆಗಳು ಹುಟ್ಟುಹಾಕುತ್ತದೆಯೇ ಹೊರತು ಬೇರೇನಿಲ್ಲ. ಅಂತೂ ಇಂತೂ ಬೆಂಗಳೂರಿನ ಕಸದ ರಾಶಿಗೆ ಮುಕ್ತಿ ಇಲ್ಲ.

*(ಈ ತಿಂಗಳು : ೩ನೇ ಪುಟದಿಂದ)*

ಫಲಿಸುವುದಾದರೆ ಯಾವ ಮೌಲ್ಯಕ್ಕೂ ಮೌಲ್ಯವಿಲ್ಲ; (ಆ) ಸ್ವತಃ ನಮ್ಮ ಪ್ರಧಾನಿಯೇ ಎಲ್ಲ ದೇಶಗಳೊಡನೆಯೂ ರಾಜತಾಂತ್ರಿಕ ಸಂಬಂಧದ ವಹಿವಾಟು ನಡೆಸಲು ಸಮರ್ಥರಾದ್ದರಿಂದ ವಿದೇಶಾಂಗ ಸಚಿವರನ್ನೂ ರಾಯಭಾರಿಗಳನ್ನೂ ಕೈಬಿಟ್ಟು ವಿವಿಧ ದೇಶಗಳಲ್ಲಿ ನಮ್ಮ ರಾಯಭಾರ ಕಚೇರಿಗಳನ್ನು ಕಡಿಮೆ ಖರ್ಚಿನಲ್ಲಿ ಸರಿದೂಗಿಸಬಹುದು; ಪ್ರಧಾನಿಯವರ ಪ್ರವಾಸದ ಖರ್ಚನ್ನು ಭರಿಸಿದರೆ ಸಾಕು.

✴ ✴ ✴

ಸತ್ಯವನ್ನು ನುಡಿಯಬೇಕೆಂಬ ಆದೇಶವು ಉಪನಿಷತ್ತಿನಲ್ಲಿದೆಯೆಂದು ನಮ್ಮ ಕವಿಗಳಲ್ಲಿ ಮೊಳಗಿಸುತ್ತಾ ಬರಲಾಗಿದೆ. ಆದಾಗ್ಯೂ ಸತ್ಯ ಭಾವನೆಗಳನ್ನು ಅಭಿವ್ಯಕ್ತಿಸದೆ ಇಟ್ಟುಕೊಳ್ಳುವ ತಂತ್ರವನ್ನೂ ಹೇಗೋ ಕಲಿತುಬಿಟ್ಟಿದ್ದೇವೆ. ವಾಲ್ಮೀಕಿಯ ನಿರ್ದೇಶನವೂ ಒಂದು ಕಾರಣವಿರಬೇಕು : ಸತ್ಯವನ್ನು ನುಡಿ, ಪ್ರಿಯವಾದುದನ್ನು ನುಡಿ; ಆದರೆ ಅಪ್ರಿಯವಾದ ಸತ್ಯವನ್ನು ಹೇಳಹೋಗಬೇಡ. ಅಂತೆಯೇ, ಪ್ರಿಯವಾದ ಸುಳ್ಳನ್ನೂ ಹೇಳಬೇಡ. (ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಂ ಅಪ್ರಿಯಂ । ಪ್ರಿಯಂ ಚ ನ ಅನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ). ಸನಾತನಿಗಳ ಅಪರಾವತಾರ ತನ್ನದೆಂದು ರಾಷ್ಟ್ರೀಯ ಸ್ವಯಂಸೇವಕ ಸಂಘವು ಆಗಾಗ್ಗೆ ಘೋಷಿಸಿಕೊಳ್ಳುತ್ತದೆ. ಸತ್ಯ ಭಾವನೆಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಪ್ರಕಟಿಸುವುದು ಇಲ್ಲವೆ ಅದುಮಿಟ್ಟುಕೊಳ್ಳುವುದು ವಿರಳವಲ್ಲ. ಡಾ॥ ಬಾಬಾಸಾಹೇಬ್ ಅಂಬೇಡ್ಕರರನ್ನು ತುಚ್ಛೀಕರಿಸಿ ಅರುಣ್ ಶೌರಿಯು ಗ್ರಂಥವೊಂದನ್ನು ಪ್ರಕಟಿಸಿದ್ದಾಗ ಆರೆಸ್ಸೆಸ್ ಹುಮ್ಮಸ್ಸಿನಿಂದ ಅದನ್ನು ಸ್ವಾಗತಿಸಿತ್ತು. ಅದು ಸತ್ಯ ಭಾವನೆಯ ಅಭಿವ್ಯಕ್ತಿ, ಸ್ವಾಗತಾರ್ಹವಾದ ಅಭಿವ್ಯಕ್ತಿ; ನಿಜಬಣ್ಣವನ್ನು ಮರೆಮಾಚಿಸದ ಪ್ರಕಟಣೆ. ಅಂದಿನ ಸನ್ನಿವೇಶ ಬದಲಾಗಿದೆ. ಇಂದು ಅಂಬೇಡ್ಕರ್ ಅವರನ್ನು ಆರಾಧ್ಯರನ್ನಾಗಿ ಮಾಡುವ ಅವಶ್ಯಕತೆ ಇದೆ. ಪ್ರಧಾನಿಯವರ ನೇತೃತ್ವದಲ್ಲಿ ಆರೆಸ್ಸೆಸ್ ಅದನ್ನು ಮಾಡಲು ಹಿಂದೇಟು ಹಾಕಿಲ್ಲ. ಅದೂ ಸ್ವಾಗತಾರ್ಹವೇ. "ಪ್ರಿಯಂ ಬ್ರೂಯಾತ್" ಎಂಬುದರಡಿ ಇದಕ್ಕೆ ಮನ್ನಣೆಯುಂಟು. ಇಂದಿರಾ ಗಾಂಧಿ ರಾಷ್ಟ್ರೀಯ ಕಲಾಕೇಂದ್ರಕ್ಕೆ ಅದೇಕೋ ಇನ್ನೂ ಹಳೆಯ ಹೆಸರೇ ಅಂಟಿಕೊಂಡಿದೆ; ಗ್ವಾಲಿಯರ್ ರಾಣಿ ಮಾತೆಯ ಹೆಸರನ್ನು ಇನ್ನೂ ಯಾರೂ ಸೂಚಿಸಿಲ್ಲದಿರಬಹುದು. ಅದರ ಈಗಿನ ಅಧ್ಯಕ್ಷ ರಾಮ ಬಹದ್ದೂರ್ ರಾಯ್ ಎಂಬುವವರು. ಅವರ ಕಲಾಸೇವೆಯ ಮಾಹಿತಿ ಅಷ್ಟಾಗಿ ದೊರೆತಿಲ್ಲ. ಅವರು ಈಚೆಗೆ ಅವರ ಸತ್ಯ ಭಾವನೆಯನ್ನು ಘಂಟಾಘೋಷವಾಗಿ ಪ್ರಕಟಿಸಿದರು. ಹಾಗೆ ಪ್ರಕಟಿಸುವುದು ಅವರ ಹಕ್ಕು. ಅವರ ಸತ್ಯ ಭಾವನೆಯ ಹಿಂದೆ ಸತ್ಯ ಘಟನೆ ಇದೆಯೋ ಇಲ್ಲವೋ ಅದು ಬೇರೆ ಪ್ರಶ್ನೆ. ಅವರ ಸತ್ಯ ಭಾವನೆಯು ನಿಜಕ್ಕೂ ಆರೆಸ್ಸೆಸ್, ಭಾರತೀಯ ಜನತಾ ಪಕ್ಷ ಮತ್ತು ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನದೂ ಇರಬೇಕು; ಇಲ್ಲದಿದ್ದರೆ ಕಲಾಧುರೀಣ ರಾಯ್ ಅವರಿಗೆ ಅದು ಎಲ್ಲಿಂದ ಭಾಸವಾಗುತ್ತಿತ್ತು! ಅವರ ನುಡಿಮುತ್ತು ಸಂಗ್ರಹವಾಗಿ ಹೀಗಿದೆ : ಡಾ॥ ಅಂಬೇಡ್ಕರ್ ಭಾರತದ ಸಂವಿಧಾನದ ಕರಡನ್ನು ಸಿದ್ಧಗೊಳಿಸಲಿಲ್ಲ. ಅವರು ಒಬ್ಬ ಕಾರಕೂನನ ಕೆಲಸ ಮಾಡಿದರು, ಅಷ್ಟೆ. ಐಪಿಎಸ್ ಮಾಡಿರುವ ಒಬ್ಬ ಪೊಲೀಸ್ ಅಧಿಕಾರಿ ಇದ್ದಾನೆನ್ನಿ. ಅವನು ಏನು ಮಾಡುತ್ತಾನೆ ? ದೇಶದ ಪ್ರಧಾನಿಗೆ ಸಂರಕ್ಷಣೆಗೆ ಸಂಬಂಧಿಸಿದ ಟಿಪ್ಪಣಿಗಳನ್ನು ಒದಗಿಸುತ್ತಿರುತ್ತಾನೆ. ಅಂಬೇಡ್ಕರ್ ಮಾಡಿದ್ದೂ ಅಷ್ಟೆ : ಕಾರಕೂನನಂತೆ ಟಿಪ್ಪಣಿ ಒದಗಿಸಿದರು.

ತಮ್ಮ ಮತ್ತು ತಮ್ಮ ಪರಿವಾರದ ನಿಜ ಭಾವನೆಯನ್ನು ಮುಕ್ತವಾಗಿ ತೆರೆದಿಟ್ಟ ರಾಮ ಬಹದ್ದೂರ್ ರಾಯ್ ಅಭಿನಂದನಾರ್ಹರು. "ಸತ್ಯವೇ ನಮ್ಮ ತಾಯಿ ತಂದೆ" ಎಂಬ ನುಡಿಯನ್ನು ತಮಗೆ ತಿಳಿಯದೆಯೇ ಪಾಲಿಸಿಬಿಟ್ಟಿದ್ದಾರೆ !

✴ ✴ ✴

ಕರ್ನಾಟಕದ ಸಚಿವ ಶ್ರೀ. ಶ್ರೀನಿವಾಸ ಪ್ರಸಾದ್ ಮೈಸೂರಿನಲ್ಲಿ ಮಾತನಾಡುತ್ತಾ ತಮ್ಮ ಮನಸ್ಸನ್ನು ಬಿಚ್ಚಿಟ್ಟಿದ್ದಾರೆ. ಪ್ರತಿ ತಿಂಗಳೂ ಪ್ರಧಾನಿ ಮೋದಿ ಜನರೊಡನೆ ಹಂಚಿಕೊಳ್ಳುವ 'ಮನದ ಮಾತು' ಬಹಳ ಸೊಗಸಾಗಿದೆ, ಅವರು ಅಭಿವೃದ್ಧಿಗಾಗಿ ವಿಶೇಷವಾಗಿ ದುಡಿಯುತ್ತಿದ್ದಾರೆ, ಇತ್ಯಾದಿ. ಇದೆಲ್ಲಾ ದಿನಾಂಕ ೧೮ರ 'ಪ್ರಜಾವಾಣಿ'ಯ ವರದಿಯಲ್ಲಿದೆ. ಎರಡು ತೀರ್ಮಾನಗಳು ಸಾಧ್ಯವೆಂದು ತೋರುತ್ತದೆ : (ಅ) ಸಚಿವ ಸಂಪುಟದಿಂದ ಅವರನ್ನು ಮುಖ್ಯಮಂತ್ರಿಗಳು ಕೈಬಿಡುತ್ತಾರೆ, ಮತ್ತು (ಆ) "ಮಾನ್ಯ" ಪ್ರಸಾದ್ ಅವರು ಭಾರತೀಯ ಜನತಾ ಪಕ್ಷದ ಬಾಗಿಲು ಬಡಿಯುತ್ತಿದ್ದಾರೆ.

ಡಾ॥ ಅಂಬೇಡ್ಕರ್ ಅವರನ್ನು ಭಾಜಪ ಈಚಿನ ದಿನಗಳಲ್ಲಿ ಬಹಳ ಕೊಂಡಾಡಿ ದಲಿತರ ಮನಸ್ಸನ್ನು ಹೊಕ್ಕಿದ್ದಾರೆಂದು ಶ್ರೀನಿವಾಸ ಪ್ರಸಾದ್ ಈಗಿನ್ನೂ ಹೇಳಿಲ್ಲ. ಬರುವ ದಿನಗಳಲ್ಲಿ ಅದನ್ನೂ ಹೇಳಿಯಾರು. ತಮ್ಮನ್ನು ಸಂಪುಟದಿಂದ ಕೈಬಿಟ್ಟರೆ ತಾವು ಕಾಂಗ್ರೆಸ್ ವಿರುದ್ಧ ಧಾಳಿಯನ್ನು ಹೆಚ್ಚಿಸುವ ಎಚ್ಚರಿಕೆ ನೀಡಿದ್ದಾರೆ. ಇಂಥವರು ರಾಹುಲ್ ಗಾಂಧಿಯ ನಾಯಕತ್ವವನ್ನು ಒಪ್ಪಿಯಾರೆ, ಮೆಚ್ಚಿಯಾರೆ ! ಕಾಂಗ್ರೆಸ್ ಹುಲ್ಲುಗಾವಲು ಕುರುಚಲ ಗಿಡಗಳಿಂದ ಆವೃತವಾಗಿದೆ, ಸೊಂಪಾದ ಹುಲ್ಲು ಬೇಕಾದರೆ ಮೋದಿಯವರ ಪಕ್ಷಕ್ಕೆ ಹೋಗಬೇಕೆಂಬುದು ಶ್ರೀನಿವಾಸ ಪ್ರಸಾದರ ಎಚ್ಚರಿಕೆ. ಈ ಗಂಟೆಯ ನಿನಾದವು ಬೇರೆಷ್ಟು ಕಾಂಗ್ರೆಸ್ ಸಚಿವರ ಕಿವಿಗೆ ತಟ್ಟುತ್ತದೋ ಕಾದುನೋಡೋಣ.

*(ಜೂನ್ ೧೮ರಂದು ಬರೆದದ್ದು. ಆಗಿನ್ನೂ ಮಂತ್ರಿಮಂಡಲದ ವಿಸ್ತರಣೆಯನ್ನು ಘೋಷಿಸಿರಲಿಲ್ಲ).*

✴ ✴ ✴

ಅಮೆರಿಕದ ಅಧ್ಯಕ್ಷೀಯ ಚುನಾವಣೆಗಳು ಈ ವರ್ಷ ನವೆಂಬರ್ ತಿಂಗಳಲ್ಲಿ ನಡೆಯಲಿವೆ. ವರ್ಷಾರಂಭದಿಂದಲೇ ಅದಕ್ಕೆ ಸಿದ್ಧತೆಗಳು. ಅಭ್ಯರ್ಥಿಗಳ ಆಯ್ಕೆಯ ಪ್ರಕ್ರಿಯೆಯೇ ಒಂದು ವಿಶೇಷ. ಅಲ್ಲಿ ಮೊದಲ ಬಾರಿಗೆ ಮಹಿಳೆಯೊಬ್ಬರು ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿಯಾಗಿ ಆಯ್ಕೆಯಾಗಿದ್ದಾರೆ. ಬರಾಕ್ ಒಬಾಮಾ ಕಳೆದ ಸಲ ಇದೇ ಪಕ್ಷದಿಂದ ಆಯ್ಕೆಯಾದ ಮೊದಲ ಆಫ್ರಿಕನ್ ಅಮೆರಿಕನ್. ಹಾಗಾಗಿ, ಈ ಸಲ ಅಭ್ಯರ್ಥಿಯಾಗಿರುವ ಹಿಲರಿ ಕ್ಲಿಂಟನ್ ಜಯಗಳಿಸಿದರೆ ಅಮೆರಿಕದಲ್ಲಿ ಇತಿಹಾಸ ಸೃಷ್ಟಿಸಲಿದ್ದಾರೆ. ಇವರ ಪ್ರತಿಸ್ಪರ್ಧಿ ರಿಪಬ್ಲಿಕನ್ ಪಕ್ಷದ ಡೊನಾಲ್ಡ್ ಟ್ರಂಪ್. ಈತ ತೊಡಗಿಕೊಂಡಿರುವುದು ರಿಯಲ್ ಎಸ್ಟೇಟ್ ಉದ್ಯಮ. ದ್ವಿಪಕ್ಷೀಯ ವ್ಯವಸ್ಥೆಯನ್ನು ರೂಢಿಸಿಕೊಂಡಿರುವ ಅಮೆರಿಕದಲ್ಲಿ ಇತರ ಪಕ್ಷಗಳನ್ನು ಕೇಳುವವರೇ ಇಲ್ಲ, ಅವೆಲ್ಲ ನಗಣ್ಯ. ಅಮೆರಿಕದ ಚುನಾವಣೆಗಳ ವಿಚಾರದಲ್ಲಿ ನಮ್ಮ ಮಾಧ್ಯಮಗಳಿಗೆ ಎಲ್ಲಿಲ್ಲದ ಕುತೂಹಲ, ಆಸಕ್ತಿ ಎಂದೇ ಸಾಕಷ್ಟು ಪ್ರಚಾರ ನೀಡಲಾಗುತ್ತಿದೆ. ಆದರೆ ಅಮೆರಿಕದ ನಾಗರಿಕರ ಮಟ್ಟಿಗೆ ಎರಡೂ ಪಕ್ಷಗಳಲ್ಲಿ ಯಾರೇ ಬಂದರೂ ಒಂದೇ, ಜೀವನ ಕ್ರಮದಲ್ಲಿ ಯಾವುದೇ ವ್ಯತ್ಯಾಸವಾಗದು. ಕುತೂಹಲಕರ ಸಂಗತಿ ಎಂದರೆ ಅಮೆರಿಕದ ಮತದಾರರಲ್ಲಿ ಹೆಚ್ಚುತ್ತಿರುವ ನಿರಾಸಕ್ತಿ. ಪ್ರತಿ ಚುನಾವಣೆಯಲ್ಲು ಮತದಾನ ಮಾಡುವವರ ಸಂಖ್ಯೆಯ ಪ್ರಮಾಣ ಕಡಿಮೆಯಾಗುತ್ತಲೇ ಇದೆ.

ಬಹಳ ಹಿಂದೆ ಸೋವಿಯೆತ್ ಒಕ್ಕೂಟದ ನಾಯಕ ಕ್ರುಶ್ಚೇವ್ ಎಂಬಾತ ಅಮೆರಿಕದ ಅಧ್ಯಕ್ಷರಾಗಿ ರೊನಾಲ್ಡ್ ರೀಗನ್ ಆಯ್ಕೆಯಾದಾಗ ಯಾವ ಮೂರ್ಖನಾದರೂ ಅಮೆರಿಕದ ಅಧ್ಯಕ್ಷನಾಗಬಲ್ಲ ಎಂದು ಗೇಲಿ ಮಾಡಿದ್ದುದು ನೆನಪಾಗುತ್ತದೆ. ೧೯೭೧ರಿಂದ ಅಮೆರಿಕದಲ್ಲಿ ನೆಲೆಸಿರುವ ಕೊರಿಯನ್ ಮೂಲದ ಲೇಖಕ ನೋಯಂಗ್ ಪಾರ್ಕ್ ಅಮೆರಿಕದ ಅಧ್ಯಕ್ಷೀಯ ಚುನಾವಣೆಗಳನ್ನು ಕುರಿತು ವಿಡಂಬನಾತ್ಮಕವಾಗಿ ಹೇಳಿರುವ ಮಾತುಗಳು ಇಲ್ಲಿ ಉಲ್ಲೇಖನೀಯ. ಈತ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಅಂತರರಾಷ್ಟ್ರೀಯ ಸಂಬಂಧಗಳನ್ನು,

ಮುಖ್ಯವಾಗಿ ಚೀಣಾ ಮತ್ತು ಲೀಗ್ ಆಫ್ ನೇಶನ್ಸ್ ಸಂಬಂಧ ಕುರಿತು ಅಧ್ಯಯನ ಮಾಡಿ ಪಿಎಚ್.ಡಿ. ಪದವಿ ಪಡೆದುಕೊಂಡಿದ್ದಾನೆ. ಈತ ಹೆಚ್ಚು ಕಡಿಮೆ ಕ್ರುಶ್ಚೇವ್ ಅಭಿಪ್ರಾಯವನ್ನೇ ಸಮರ್ಥಿಸಿದ್ದಾನೆ. ಚುನಾವಣೆಗಳ ವಿಚಾರದಲ್ಲಿ ಅಮೆರಿಕದ ನಾಗರಿಕರ ನಿರಾಸಕ್ತಿ ಕುರಿತು ಲೇವಡಿ ಮಾಡಿದ್ದಾನೆ. 'ಆ್ಯನ್ ಓರಿಯಂಟಲ್ ವ್ಯೂ ಆಫ್ ಅಮೆರಿಕನ್ ಸಿವಿಲೈಸೇಶನ್' ಎಂಬ ಕೃತಿಯಲ್ಲಿ. ಅವನ ಪ್ರಕಾರ ಅಮೆರಿಕನ್ನರಿಗೆ ಬದುಕು ವ್ಯಾಪಾರ, ರಾಜಕೀಯ ಒಂದು ಪ್ರಹಸನ. 'ಶಸ್ತ್ರಚಿಕಿತ್ಸೆಗಾಗಿ ಯಾರೂ ಕಸಾಯಿಖಾನೆಗೆ ಹೋಗುವುದಿಲ್ಲ. ಹಾಗೆಯೇ ನಾಯಿ ಲೈಸೆನ್ಸಿಗೆ ಹೇರ್‌ಕಟಿಂಗ್ ಸಲೂನಿಗೆ ಹೋಗುವುದಿಲ್ಲ' ಎಂದು ಹೇಳುವ ಈತ ಅಮೆರಿಕದ ಅಧ್ಯಕ್ಷಗಿರಿಗೆ ವಿದ್ಯಾರ್ಹತೆಯಾಗಲಿ, ಅನುಭವವಾಗಲಿ, ಪರೀಕ್ಷೆಯಾಗಲಿ, ಲೈಸನ್ಸ್ ಆಗಲಿ ಬೇಕಿಲ್ಲ ಎಂದು ಹೇಳಿದ್ದಾನೆ. ಲೇಖಕ ಪಾರ್ಕನ ಅಭಿಪ್ರಾಯದಲ್ಲಿ ಅಮೆರಿಕದಲ್ಲಿ ರಾಜಕೀಯ ಅಧಿಕಾರ ಪಡೆದುಕೊಳ್ಳಲು ಯಾವ ಮೂರ್ಖನಾದರೂ ಸ್ಪರ್ಧಿಸಬಹುದು, ನಿರಾಸಕ್ತರಾದ ಜನ ಅಂಥವನನ್ನು ಆರಿಸಲೂಬಹುದು. ರಿಪಬ್ಲಿಕನ್ ಪಕ್ಷದ ಅಭ್ಯರ್ಥಿ ಡೊನಾಲ್ಡ್ ಟ್ರಂಪ್ ಅದಕ್ಕೆ ಉದಾಹರಣೆ.

✴ ✴ ✴

ರಾಜ್ಯಸಭಾ ಮತ್ತು ವಿಧಾನ ಪರಿಷತ್‌ಗಳಿಗೆ ನಡೆದ ಚುನಾವಣೆಗಳು ನಿರೀಕ್ಷಿತ ಫಲಿತಾಂಶಗಳನ್ನು ನೀಡಿದಾಗ್ಯೂ ಅತ್ಯಂತ ಕುತೂಹಲಕರವಾಗಿತ್ತು. ಅಧ್ಯಾಪಕರ ಕ್ಷೇತ್ರದಿಂದ ಕಾಂಗ್ರೆಸ್ಸಿಗೆ ಎಂದಿನಂತೆ ಆದ ಪರಾಜಯ ಸಿದ್ದರಾಮಯ್ಯನವರ ತಲೆ ಬಿಸಿ ಮಾಡಿದೆ. ಮಾಧ್ಯಮಗಳ ವರದಿ ಪ್ರಕಾರ ಕಾಂಗ್ರೆಸ್ ಹೈಕಮಾಂಡ್ ಮುಖ್ಯಮಂತ್ರಿಯವರನ್ನು ತರಾಟೆಗೆ ತೆಗೆದುಕೊಂಡಿದೆ. ಇದರಲ್ಲಿ ಸತ್ಯ ಎಷ್ಟಿವೆ ಎಂಬುದನ್ನು ನೋಡಬೇಕು. ಕಾಂಗ್ರೆಸ್ ಹೈಕಮಾಂಡೇ ಫಜೀತಿಯಲ್ಲಿದೆ ಹರ್ಯಾಣದಲ್ಲಿ ಬಿದ್ದ ಹೊಡೆತದಿಂದ. ಹದಿನಾಲ್ಕು ಮತಗಳು ಅಸಿಂಧು ಹೇಗಾಯಿತು ಎನ್ನುವುದು ಇನ್ನೂ ನಿಗೂಢ. ಆರೋಪ ಪ್ರತ್ಯಾರೋಪಗಳು ಜೋರಾಗಿವೆ. ನಮ್ಮ ರಾಜ್ಯದಲ್ಲಿ ಮಾತ್ರ ಜೆಡಿಎಸ್ ಮುಳುಗುತ್ತಿರುವ ದೋಣಿಯಾಗಿದೆ. ದೇವೇಗೌಡ-ಕುಮಾರಸ್ವಾಮಿ ವಿರುದ್ಧ ಬಂಡಾಯದ ಬಿರುಗಾಳಿ ಎದ್ದಿದೆ. ಈ ಅಪ್ಪ ಮಗನ ಪಕ್ಷ ಅನುಭವಿಸಿರುವ ಮುಖಭಂಗ ಅಂತಿಂಥದ್ದಲ್ಲ. ಎಂಟು ಮಂದಿ ಶಾಸಕರು ಬಂಡೆದ್ದು ದೇವೇಗೌಡರ ವ್ಹಿಪ್‌ಗೆ ಕ್ಯಾರೇ ಎನ್ನದೆ ಕಾಂಗ್ರೆಸ್ ಅಭ್ಯರ್ಥಿಗೆ ಮತ ಹಾಕಿ ಗೆಲ್ಲಿಸಿದ್ದಾರೆ. ಇದೂ ಕೂಡ ಅನಿರೀಕ್ಷಿತವೇನಲ್ಲ. ಮಾಮೂಲಿನಂತೆ ರಿಸಾರ್ಟ್ ರಾಜಕಾರಣ, ಸುಖಪ್ರಯಾಣ-ಪ್ರವಾಸ ಎಲ್ಲ ಇದ್ದದ್ದೆ. ಫಲಿತಾಂಶ ಹೊರಬಿದ್ದ ಮೇಲೆ ಬೆಂಗಳೂರಿನ ಅರಮನೆ ಮೈದಾನದಲ್ಲಿ ಸಮಾಲೋಚನೆ ನಡೆಸಿ ಭಿನ್ನರನ್ನು ಅಮಾನತು ಮಾಡಿದ್ದೂ ಆಯಿತು. ರಾಜ್ಯದ ರಾಜಕೀಯದ ಮೇಲೆ ಈ ಬೆಳವಣಿಗೆ ಅಂಥ ನಿರೀಕ್ಷಿತ ಪ್ರಭಾವ ಬೀರುವಂತೆ ಕಾಣುತ್ತಿಲ್ಲ.

ಮುಖ್ಯಮಂತ್ರಿ ಸಿದ್ದರಾಮಯ್ಯ ಹೆಚ್ಚುಕಡಿಮೆ ಒಂದು ವರ್ಷದಿಂದ ಮುಂದೂಡುತ್ತ ಬಂದಿರುವ ಸಂಪುಟದ ಪುನಾರಚನೆಗೆ ಈಗ ಕಾಲ ಕೂಡಿಬಂದಿದೆ. ಎಲ್ಲ ಸಚಿವರುಗಳ ರಾಜೀನಾಮೆಯನ್ನೂ ಜೇಬಿನಲ್ಲಿರಿಸಿಕೊಂಡಿದ್ದಾರೆ ಮುಖ್ಯಮಂತ್ರಿಗಳು ಎಂಬ ವದಂತಿ ಇದೆ. ಯಾರು ಇರುತ್ತಾರೆ, ಹೋಗುತ್ತಾರೆ, ಬರುತ್ತಾರೆ ಎನ್ನುವುದು ದೆಹಲಿಯಲ್ಲಿರುವ ಹೈಕಮಾಂಡ್‌ಗೆ, ಅರ್ಥಾತ್ ಸೋನಿಯಾ ಮತ್ತು ರಾಹುಲರಿಗೆ ಬಿಟ್ಟದ್ದು. ಆಕಾಂಕ್ಷಿಗಳೆಲ್ಲ ಈಗ ದೆಹಲಿಗೆ ದೌಡಾಯಿಸಿದ್ದಾರೆ. ಈ ಹೈಕಮಾಂಡ್ ಎನ್ನುವುದು ಎರಡು ವರ್ಷದಿಂದ ಗಾಯಗೊಂಡ ಕುದುರೆ. ಸದ್ಯದಲ್ಲಂತೂ ಚೇತರಿಸಿಕೊಳ್ಳುವ ಸಾಧ್ಯತೆ ಕಾಣುತ್ತಿಲ್ಲ. ತಾಯಿ-ಮಗ-ಮಗಳು ಇವರುಗಳನ್ನು ಬಿಟ್ಟು ಕಾಂಗ್ರೆಸ್ಸನ್ನು ಮೇಲೆತ್ತಲು ಬೇರೇ ಗತಿಯಿಲ್ಲ ಎನ್ನುವ ಸ್ಥಿತಿ ಬಂದಿದೆ. ಅಂತೂ ಭವಿಷ್ಯ ನೆಟ್ಟಗಿಲ್ಲ.

✴ ✴ ✴

ಬಹಳ ಹಿಂದೆ ಜಗತ್ತಿನ ಅತ್ಯಂತ ಚಿಕ್ಕ, ಕೆಲವೇ ಪದಗಳ ಸಣ್ಣಕತೆಯೊಂದನ್ನು ಓದಿದ್ದ ನೆನಪು. ಪ್ರಾಯಶಃ ಅದನ್ನು ಮೀರಿಸುವ ಕತೆ ದುಸ್ಸಾಧ್ಯ ಎಂದು ತೋರುತ್ತದೆ. ಕತೆ ಹೀಗಿತ್ತು. "ನಾಜಿ ಸೆನ್ಸಾರ್ಸ್ ... ಆರ್ ಬ್ಲಾಕ್‌ಹೆಡ್ಸ್ ." ಇದು ನಮ್ಮ ದೇಶದ ಕೇಂದ್ರ ಸೆನ್ಸಾರ್ ಬೋರ್ಡ್‌ಗೆ ಸಂಪೂರ್ಣವಾಗಿ ಅನ್ವಯವಾಗುತ್ತದೆ. ಭಾಜಪ ಸರಕಾರ ನೇಮಕ ಮಾಡಿರುವ ಪಹ್ಲಾಜ್ ನಿಹಲಾನಿ ಪ್ರಧಾನಿ ಮೋದಿಯವರ ಪರಮಭಕ್ತ. ಅವಧಿಗೆ ಮುನ್ನವೇ ಹಿಂದಿದ್ದ ಅಧ್ಯಕ್ಷರು ರಾಜೀನಾಮೆ ನೀಡಿದ್ದರಿಂದ ಆರೆಸ್ಸೆಸ್‌ನ ನಿಹಲಾನಿ ಬಂದು ಕೂತರು. ಒಂದು ಕಾಲದಲ್ಲಿ ಈತ ಚಿತ್ರ ನಿರ್ಮಾತೃ. ಹಿಂದು ಮುಂದು ಏನೂ ಅರಿಯದ ಈತನ ದರ್ಬಾರೇ ದರ್ಬಾರು. ಚಿತ್ರರಂಗದ ಅನೇಕರು ಆತನ ನೇಮಕವನ್ನು ವಿರೋಧಿಸಿದ್ದರು. ಭಾರತೀಯ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಹೆಸರಿನಲ್ಲಿ ಈತ ಕತ್ತರಿ ಪ್ರಯೋಗಿಸುವುದರಲ್ಲಿ ನಿಪುಣ. ಈಚೆಗೆ 'ಉಡ್ತ ಪಂಜಾಬ್' ಎಂಬ ಚಿತ್ರಕ್ಕೆ ೮೯ ಕಡೆ ಕತ್ತರಿ ಪ್ರಯೋಗಿಸಿದ್ದ ಈತ. ಚಿತ್ರ ತಯಾರಕರು ಮುಂಬಯಿ ಹೈಕೋರ್ಟಿನ ಮೊರೆ ಹೊಕ್ಕರು. ಹೈಕೋರ್ಟ್ ಸೆನ್ಸಾರ್ ಬೋರ್ಡನ್ನು ಹಿಗ್ಗಾಮುಗ್ಗಾ ತರಾಟೆಗೆ ತೆಗೆದುಕೊಂಡು, ಒಂದನ್ನು ಬಿಟ್ಟು ಉಳಿದೆಲ್ಲ ಕಟ್‌ಗಳನ್ನು ರದ್ದುಗೊಳಿಸಿದೆ. ಚಿತ್ರ ನಿರ್ದೇಶಕನಿಗೆ ಏನು ಮಾಡಬೇಕು, ಹೇಗೆ ಮಾಡಬೇಕು, ಯಾವ ಮಾತು ಬಳಸಬೇಕು ಎನ್ನುವ ಹಕ್ಕು ಯಾರಿಗೂ ಇಲ್ಲ. ನಿಜವಾಗಿ ನೋಡಿದರೆ ಫಿಲಂಗಳನ್ನು ಸೆನ್ಸಾರ್ ಮಾಡುವ ಅಗತ್ಯವೇ ಇಲ್ಲ ಎಂದು ಹೈಕೋರ್ಟ್ ತನ್ನ ತೀರ್ಪಿನಲ್ಲಿ ತೀಡಿದೆ. ಇಷ್ಟಾದರೂ ಕೇಂದ್ರ ಸೆನ್ಸಾರ್ ಬೋರ್ಡ್ ತನ್ನ ಕತ್ತರಿ ಪ್ರಯೋಗದ ಚಾಳಿ ಬಿಟ್ಟಿಲ್ಲ. ಗುಜರಾತ್‌ನ ಪಟಿದಾರ್ ಮೀಸಲಾತಿ ಕುರಿತ 'ಮೀಸಲಾತಿ : ಜ್ವಲಂತ ಸಮಸ್ಯೆ' ಎಂಬ ಗುಜರಾತಿ ಸಾಕ್ಷ್ಯಚಿತ್ರಕ್ಕೆ ಸೆನ್ಸಾರ್ ಬೋರ್ಡ್ ೧೦೦ ಕಟ್‌ಗಳನ್ನು ಸೂಚಿಸಿದೆ. ಚಿತ್ರ ತಯಾರಕರು ಕೋರ್ಟ್ ಮೆಟ್ಟಿಲೇರುವುದು ಖಚಿತ. ಪಂಜಾಬಿನಲ್ಲಿ ಭಾಜಪದ ಮಿತ್ರಪಕ್ಷ ಅಧಿಕಾರದಲ್ಲಿದ್ದರೆ, ಗುಜರಾತಿನಲ್ಲಿ ಭಾಜಪ ಸರಕಾರ. ಸೆನ್ಸಾರ್ ಬೋರ್ಡ್‌ನ ಅಧ್ಯಕ್ಷ ನಿಹಲಾನಿ ಭಾಜಪವನ್ನು ಟೀಕಿಸುವ ಯಾವುದೇ ಭಾಗವನ್ನು ಚಿತ್ರದಿಂದ ತೆಗೆದುಹಾಕಲು ಆದೇಶಿಸುತ್ತಾರೆ. ಸೆನ್ಸಾರ್ ಬೋರ್ಡ್ ಈಗ ಚಿತ್ರ ತಯಾರಕರಿಗೆ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ. ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಎಲ್ಲ ಕೇಂದ್ರೀಯ ಸಂಸ್ಥೆಗಳಲ್ಲೂ ತನಗೆ ಬೇಕಾದವರನ್ನು ನೇಮಕ ಮಾಡಿದೆ. ಉದಾಹರಣೆಗೆ, ಇಂಡಿಯನ್ ಕೌನ್ಸಿಲ್ ಆಫ್ ಹಿಸ್ಟಾರಿಕಲ್ ರಿಸರ್ಚ್, ಪೂನಾದ ಫಿಲಂ ಇನ್ಸ್ಟಿಟ್ಯೂಟ್, ನ್ಯಾಷನಲ್ ಮ್ಯೂಸಿಯಂ ಇತ್ಯಾದಿ ಸಂಸ್ಥೆಗಳು. ಮುಂದೆ ಎಲ್ಲ ಸ್ವಾಯತ್ತ ಸಂಸ್ಥೆಗಳೂ ಕೂಡ ಸರಕಾರಿ ಕೃಪಾಪೋಷಿತ ಸಂಘಟನೆಗಳಾಗುವ ಸಾಧ್ಯತೆ ಇದೆ. ಎಲ್ಲ ಸಂಘಪರಿವಾರದ ಆಣತಿಗಳನ್ನು ಪಾಲಿಸುವಂತಾಗುವ ಅಪಾಯ ಸನ್ನಿಹಿತವಾಗಿದೆ.

✴ ✴ ✴

ಅಮೆರಿಕಾದ ಫ್ಲಾರಿಡಾ ರಾಜ್ಯದ ಆರ್ಲಾಂಡೋದ ಸಲಿಂಗಕಾಮಿಗಳ ನೈಟ್ ಕ್ಲಬ್ ಮೇಲೆ ಬಂದೂಕು ಧಾರಿಯೊಬ್ಬ ನಡೆಸಿದ ದಾಳಿಯಲ್ಲಿ ಜೂನ್ ೧೨ರಂದು ರಾತ್ರಿ ಐವತ್ತಮೂರು ಜನ ಅಸುನೀಗಿದರು, ಅಷ್ಟೇ ಮಂದಿ ಗಾಯಗೊಂಡರು. ಇದು ಅಮೆರಿಕದ ಇತಿಹಾಸದಲ್ಲಿ ನಡೆದಿರುವ ಅತಿ ದೊಡ್ಡ ಹತ್ಯಾಕಾಂಡ. ವಯಸ್ಸಿಗೆ ಬಂದ ಯಾರು ಬೇಕಾದರೂ ಬೇಕಾದ ಬಂದೂಕುಗಳನ್ನು ಖರೀದಿಸಲು ಮುಕ್ತ ಅವಕಾಶ ಇರುವ ದೇಶ ಎಂದರೆ ಅಮೆರಿಕ. ಇದನ್ನು ನಿಷೇಧಿಸಲು ಇದುವರೆಗೆ ಯಾವ ಅಧ್ಯಕ್ಷರಿಗೂ ಸಾಧ್ಯವಾಗಿಲ್ಲ. ಇತ್ತೀಚಿನದು ಎಂದರೆ ಕೆಲವು ನಿರ್ಬಂಧಗಳನ್ನು ವಿಧಿಸಲು ಬರಾಕ್ ಒಬಾಮಾ ಮಾಡಿದ ಪ್ರಯತ್ನ ಫಲಕಾರಿಯಾಗಲಿಲ್ಲ. ಏನೂ ಅರಿಯದ ಬಾಲಕರು ಬಂದೂಕು ಹಾರಿಸಿ ಹತ್ಯೆಗೈದಿರುವ ಪ್ರಕರಣಗಳೂ ದಾಖಲಾಗಿವೆ. ಅಮೆರಿಕದಲ್ಲಿ ಮತಿಗೆಟ್ಟವರು ಹಲವೆಡೆ ದಾಳಿ ನಡೆಸಿದ್ದಾರೆ. ಶಾಲೆಗಳು, ಕ್ಲಬ್ಬುಗಳು, ಮಾಲ್‌ಗಳು ಯಾವುದೂ ಕೂಡ 'ಬಂದೂಕು ಸಂಸ್ಕೃತಿ'ಯಿಂದ ಮುಕ್ತವಾಗಿಲ್ಲ. ಯಾವ ಸಮಯದಲ್ಲಿ ಯಾರು ಗುಂಡಿನ ದಾಳಿ ನಡೆಸುತ್ತಾರೆ ಎನ್ನುವುದು ಗೊತ್ತಾಗದಿರುವುದರಿಂದ ಭಯದಿಂದಲೇ ಜನಜೀವನ ಸಾಗಬೇಕಾಗಿದೆ. ಇಷ್ಟಾದರೂ ಅಮೆರಿಕದಲ್ಲಿ ಬಂದೂಕು ಮಾರಾಟದ ಮೇಲೆ ನಿಯಂತ್ರಣ ಇಲ್ಲ.

ಫ್ಲಾರಿಡಾದ ಘಟನೆಯಲ್ಲಿ ಬೇಕಾಬಿಟ್ಟಿಯಾಗಿ ನೈಟ್ ಕ್ಲಬ್‌ನಲ್ಲಿದ್ದವರ ಮೇಲೆ ಗುಂಡಿನ ದಾಳಿ ನಡೆಸಿದ್ದು ಒಮರ್ ಮತೀನ್ ಎಂಬಾತ. ಈತ ಏಕಾಂಗಿಯಾಗಿ ಈ ಕೃತ್ಯ ಎಸಗಿ ಪೊಲೀಸರ ಗುಂಡಿಗೆ ಬಲಿಯಾದ. ಈತ ಭಯೋತ್ಪಾದಕನೇ, ಇಸ್ಲಾಮಿಕ್ ರಾಜ್ಯದ ಏಜೆಂಟೇ, ಎನ್ನುವುದು ಇನ್ನೂ ನಿರ್ಧಾರವಾಗಿಲ್ಲ. ತನಿಖೆ ಮುಗಿದ ಮೇಲೆ ಗೊತ್ತಾದೀತು. ೨೦೧೪ರಲ್ಲಿ ಅಮೆರಿಕದಲ್ಲಿ ಸಂಭವಿಸಿದ ೫೧,೮೨೦ ಬಂದೂಕು ಸಂಬಂಧಿತ ಘಟನೆಗಳಲ್ಲಿ ೨೮೦ ಸಾಮೂಹಿಕ ಹತ್ಯೆಯಲ್ಲಿ ಪರ್ಯವಸನವಾಯಿತು. ೨೦೧೫ರ ಅಂಕಿ-ಅಂಶಗಳ ಪ್ರಕಾರ ೫೩,೨೭೨ ಘಟನೆಗಳಲ್ಲಿ ೩೩೦ ಸಾಮೂಹಿಕ ಹತ್ಯೆಗೆ ಸಂಬಂಧಿಸಿದ್ದಾಗಿತ್ತು. ೨೦೧೬ರಲ್ಲಿ ಆರು ತಿಂಗಳಲ್ಲೆ ೧೩೬ ಸಾಮೂಹಿಕ ಗನ್ ಷೂಟಿಂಗ್ ಸಂಭವಿಸಿವೆ.

✴ ✴ ✴

'ಹೊಸತು' ಸಂಪಾದಕೀಯ ಟಿಪ್ಪಣಿಗಳಲ್ಲಿ ಕೆಲವನ್ನು ಹೆಸರಿಸಿ ಮಾನ್ಯ ಓದುಗರೊಬ್ಬರು ಆಕ್ಷೇಪವೆತ್ತಿ ಒಂದೆರಡು ಸೂಚನೆಗಳನ್ನು ನೀಡಿದ್ದಾರೆ. ಅದಕ್ಕಾಗಿ ಅವರಿಗೆ ವಂದನೆಗಳು. ಆದರೆ ಈ ಮಾನ್ಯರ ಆಕ್ಷೇಪವು ನಿರಾಧಾರವೆಂದು ತಿಳಿಯುತ್ತೇವೆ. ಮಾಹಿತಿಯ ಲೋಪವಿದ್ದರೆ ಅದನ್ನು ಸರಿಪಡಿಸಿಕೊಳ್ಳಲು ನಾವು ಬಾಧ್ಯರು, ಆದರೆ ವಿಮರ್ಶೆ ಮತ್ತು ಶೈಲಿಯಲ್ಲಿ ಪತ್ರಿಕೆಯು ಸೀಮೋಲ್ಲಂಘನ ಮಾಡಿಲ್ಲ ಮತ್ತು ಮಾಡುವುದಿಲ್ಲ ಎಂಬ ಭರವಸೆಯನ್ನು ಓದುಗರಿಗೆ ವಿನಯದಿಂದಲೇ ನೀಡುತ್ತೇವೆ. ■




## ✉ ಮಹಿಳಾ ದೌರ್ಜನ್ಯದ ಹೊಸ ಮುಖ

ಇಂದು ಕಛೇರಿಗಳಲ್ಲಿ ಮಹಿಳಾ ದೌರ್ಜನ್ಯಗಳು ವಿಪರೀತವಾಗುತ್ತಿವೆ. ಸ್ವತಃ ಮೇಲಧಿಕಾರಿಯೇ ಇದರಲ್ಲಿ ಪಾಲ್ಗೊಂಡಿದ್ದರೆ ಅಂತಹ ಮಹಿಳೆಯರ ರಕ್ಷಣೆ ಬಹಳ ಕಷ್ಟ. ಅಂತಹ ಪ್ರಕರಣಗಳು ದಾಖಲಾಗುವುದೇ ಇಲ್ಲ. ದಾಖಲಾದರೂ ಕಛೇರಿಯಲ್ಲಿ ಮೇಲಧಿಕಾರಿಯ ವಿರುದ್ಧ ತೀರ್ಪು ಬರುವುದಿಲ್ಲ. – ಹೀಗೆಂದವರು ಕಛೇರಿಗಳಲ್ಲಿ ಮಹಿಳಾ ದೌರ್ಜನ್ಯದ ವಿರುದ್ಧ ಹೋರಾಡುತ್ತಿರುವ ಒಬ್ಬ ಮಹಿಳೆ. ಅವರು ಮಹಿಳಾ ದೌರ್ಜನ್ಯವನ್ನು ತಡೆಗಟ್ಟುವುದಕ್ಕಾಗಿ ಬೆಂಗಳೂರಿನ ಕೆಲ ಕಾರ್ಪೊರೇಟ್ ಕಛೇರಿಗಳಲ್ಲಿ ರಚಿಸಲಾಗಿರುವ ಸಮಿತಿಗಳಲ್ಲಿ ಸದಸ್ಯರೂ ಆಗಿದ್ದಾರೆ. ಈ ಕಛೇರಿಗಳಲ್ಲಿ ಅವರ ಮುಂದೆ ಬಂದ ಪ್ರಕರಣಗಳು ದಿಗಿಲು ಹುಟ್ಟಿಸುವಂಥವು.

ಮಹಿಳೆ ಕಛೇರಿಗಳಲ್ಲಿ ಓಡಾಡುವಾಗ ಎಲ್ಲರಿಂದ ಏನನ್ನಾದರೂ ಹೇಳಿಸಿಕೊಳ್ಳಬೇಕಾಗುತ್ತದೆ. ಧೈರ್ಯವಾಗಿ ಎದುರಿಸುವ ಕೆಲವು ದಿಟ್ಟ ಮಹಿಳೆಯರನ್ನು ಇಂತಹ ಮಾತುಗಳಲ್ಲಿ ಗೋಳಾಡಿಸುವ ತಂಡವೇ ಕಛೇರಿಗಳಲ್ಲಿ ಹುಟ್ಟಿಕೊಳ್ಳುತ್ತದೆ. ಇದರಲ್ಲಿ ಕೆಲ ಮಹಿಳೆಯರೂ ಸೇರಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ಗಮನಿಸಬಹುದು. ಆ ದಿಟ್ಟ ಮಹಿಳೆ ಯಾವುದಾದರೂ ಪಂಗಡಗಳಿಗೆ ಸೇರಿದ್ದರೆ ಅವಳ ವಿರುದ್ಧ ಸೊಲ್ಲೆತ್ತಲು ಹೆದರುವ ಮಂದಿಯೆ ಆಕೆ ಸಾಮಾನ್ಯ ವರ್ಗದವಳಾದರೆ ಎಗ್ಗಿಲ್ಲದೆ ಎಗರಾಡುತ್ತಾರೆ. ಆಕೆಯನ್ನು ಮಾನಸಿಕವಾಗಿ ಹಿಂಸಿಸುತ್ತಾರೆ. ಒಂದು ವೇಳೆ ಆ ದಿಟ್ಟ ಮಹಿಳೆ ಸಾಮಾನ್ಯ ವರ್ಗದವಳಾಗಿದ್ದು, ಅವಳು ಆರೋಪವನ್ನು ಯಾವುದಾದರೂ ವರ್ಗಕ್ಕೆ ಸೇರಿದ ಪುರುಷನ ಮೇಲೆ ಮಾಡಿದರೆ ಅದು 'ಮಾನಸಿಕ ಕಿರುಕುಳ'ದ ಹಣೆಪಟ್ಟಿಯನ್ನು ಹೊರಬೇಕಾಗುತ್ತದೆ. ಅವರು ಹೇಳುವ ಪ್ರಕಾರ ಹೆಚ್ಚು ವಿದ್ಯಾವಂತರಿರುವ ಕಡೆಗಳಲ್ಲೆ ಇದು ಹೆಚ್ಚಾಗಿ ಕಂಡುಬರುತ್ತಿದೆ. ಅತ್ಯಾಚಾರದಂಥ ಆಘಾತಕಾರಿ ಪ್ರಕರಣಗಳ ಬಗ್ಗೆ ಕಾನೂನಿನಲ್ಲಿ ಶಿಕ್ಷೆ ಇದ್ದರೂ ಅದು ಅವ್ಯಾಹತವಾಗಿ ನಡೆದಿದೆ.

ಅವಕಾಶವಾದಿ ಆಡಳಿತ, ಜಾತಿ–ಮತ, ಪಂಗಡಗಳೇ ಮೊದಲಾದ ಹತ್ತು ಹಲವು ಜಾಲಗಳಲ್ಲಿ ಅವಳು ಬಂಧಿಯಾಗುತ್ತಿದ್ದು ಬಿಡಿಸಿಕೊಳ್ಳಲಾರದೆ ಹೆಣಗುತ್ತಿದ್ದಾಳೆ. ಅಂತಹ ಪ್ರಸಂಗಗಳು ಸುತ್ತ ನಡೆದಾಗ ಕುಹಕ, ಕಟುಕಿ, ಅಪಹಾಸ್ಯಗಳ ಬದಲಾಗಿ ಕನಿಷ್ಠ ಬೆಂಬಲವನ್ನು ಸೂಚಿಸುವ ಮನಸ್ಸನ್ನಾದರೂ ಸಹೋದ್ಯೋಗಿ ಮಹಿಳೆಯರು ಮಾಡುವಂತಾದರೆ ಸಂತ್ರಸ್ತರಿಗೆ ಪರಿಸ್ಥಿತಿಯನ್ನು ಎದುರಿಸುವ ಧೈರ್ಯವಾದರೂ ಬರುತ್ತದೆ.

ದೆಹಲಿಯ 'ನಿರ್ಭಯಾ' ಹತ್ಯೆ ಪ್ರಕರಣ ನಡೆದು ಮೂರು ವರ್ಷಗಳು ಕಳೆದವು! ಅಂದು ಇಡೀ ದೇಶ ಒಂದಾಗಿ ಒಕ್ಕೊರಲಿನಿಂದ ಈ ಹತ್ಯೆಯನ್ನು, ಅದರ ಹಿಂದಿನ ಪಾಶವೀ ಮನಸ್ಸನ್ನು ಖಂಡಿಸಿದ್ದವು. ವಿಶೇಷವೆಂದರೆ ಯುವಜನತೆ ಇದನ್ನು ಪ್ರತಿಭಟಿಸಲು ಸಂಘಟಿತರಾಗಿದ್ದು. ಕಳೆದ ೩೫ ವರ್ಷಗಳಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಯುವಜನತೆ ಒಂದಾಗಿ




ಯಾವುದೇ ಸಾಮಾಜಿಕ ಸಮಸ್ಯೆಗೆ ದೇಶಾದ್ಯಂತ ಈ ಪರಿಯ ವಿರೋಧವನ್ನು ತೋರಿಸಿರಲಿಲ್ಲ. ಆನಂತರದಲ್ಲಿ ಮಹಿಳಾ ದೌರ್ಜನ್ಯ ಕಾನೂನಿನಲ್ಲಿ ಬದಲಾವಣೆ ಮಾಡಲಾಯಿತು. ಫಾಸ್ಟ್ ಟ್ರ್ಯಾಕ್ ಕೋರ್ಟುಗಳು ಇನ್ನೇನು ಆರಂಭವಾಗಿ, ಅತ್ಯಾಚಾರ ಪ್ರಕರಣಗಳ ಆರೋಪಿಗಳಿಗೆ ಶೀಘ್ರ ಶಿಕ್ಷೆಯಾಗಿ, ಮಹಿಳಾ ದೌರ್ಜನ್ಯಕ್ಕೆ ಮುಂದಾಗಲು ಹೆದರಬಹುದು ಎಂದೆಲ್ಲ ಸ್ತ್ರೀ–ಪುರುಷ ಭೇದವಿಲ್ಲದೆ ಈ ದೇಶದ ಪ್ರಜ್ಞಾವಂತ ಜನತೆ ಕನಸುಗಳನ್ನು ಕಂಡಿತು. ಆದರೆ ಈ ಮೂರು ವರ್ಷದ ಹೊಸ್ತಿಲಲ್ಲಿ ನಿಂತು ನೋಡಿದಾಗ ಕಾಣುವುದು ನಿರಾಶೆ ಮಾತ್ರ. ಏಕೆಂದರೆ ದೌರ್ಜನ್ಯಗಳು ಹೆಚ್ಚುತ್ತಲೇ ಇವೆ.

ಇಂದು 'ನಿರ್ಭಯಾ' ಪ್ರಕರಣ ಕ್ರಮೇಣ ಜನಮಾನಸದಿಂದ ಮರೆಯಾಗುತ್ತಿದೆ. ಮುಂದಿನ ವರ್ಷಗಳಲ್ಲಿ ಇದು ಈ ದೇಶದಲ್ಲಿ ಕೋರ್ಟ್ ಮೆಟ್ಟಿಲೇರುವ ಲಕ್ಷ ಲಕ್ಷ ಸಂಖ್ಯೆಯ ಪ್ರಕರಣಗಳಲ್ಲಿ ಒಂದಾಗಿ ಮಾತ್ರ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬಹುದು, ಅಷ್ಟೆ.

*ಬೆಂಗಳೂರು* **ನೂತನ ಎಮ್. ದೋಶೆಟ್ಟಿ**

## ಅಸ್ಪೃಶ್ಯತೆ ಅಮಾನವೀಯ

ಇಂದಿಗೂ ಈ ನಾಡಲ್ಲಿ ಕೆಲವು ಸಂದರ್ಭಗಳಲ್ಲಿ ಅಸ್ಪೃಶ್ಯತೆಯ ಆಚರಣೆ ನಡೆಯುತ್ತಿರುವುದು, ಅಸ್ಪೃಶ್ಯರಿಗೆ ಸಣ್ಣಪುಟ್ಟ ಕಾರಣಗಳಿಗಾಗಿಯೇ ಬಹಿಷ್ಕಾರ ಹಾಕುವುದು, ದೇವಸ್ಥಾನದೊಳಗೆ ಅವರುಗಳನ್ನು ಬಿಟ್ಟುಕೊಳ್ಳದಿರುವ ಹಲವಾರು ಪ್ರಕರಣಗಳನ್ನು ಗಮನಿಸುತ್ತಿರುತ್ತೇವೆ. ಇಂಥ ಸಂದರ್ಭದಲ್ಲೆಲ್ಲ ನಮ್ಮಂಥವರ ಕಣ್ಣಂಚು ಒಂಚೂರು ಒದ್ದೆಯಾಗುತ್ತದೆ. ಏನೋ ಒಂದು ಬರೆದೋ, ಒಂದಿಷ್ಟು ಮಾತನಾಡಿಯೋ ಕೈ ತೊಳೆದುಕೊಳ್ಳುತ್ತೇವೆ. ಆದರೆ ನಾವು ಅವರಾಗಿ ಯೋಚಿಸಿದಾಗ? ಇದೆಂಥ ಅಮಾನವೀಯತೆ ಎನಿಸುತ್ತದೆ. ಸಂಕಟಪಡುತ್ತೇವೆ. ಹನ್ನೆರಡನೇ ಶತಮಾನದಲ್ಲಿ ಇನ್ನೆಂಥ ಅಮಾನವೀಯತೆ ಇದ್ದೀತೆಂದು ಒಂದಿನಿತು ಯೋಚಿಸಿದರೆ ದಿಗ್ಭ್ರಮೆಯಾಗುತ್ತದೆ.

ಹೌದು, ಅಂದು ಅಸ್ಪೃಶ್ಯನೊಬ್ಬನ ಬದುಕಿನ ಕ್ರಮ ತೀರಾ ನಿಕೃಷ್ಟವಾಗಿತ್ತು. ಊರ ಹೊರಗಡೆ ಇದ್ದ ತನ್ನ ಕೇರಿ ಬಿಟ್ಟು ಊರೊಳಗಿರುವವರ ಸ್ಥಳಕ್ಕೆ ಬರುವಂತಿರಲಿಲ್ಲ. ಆಕಸ್ಮಿಕವಾಗಿ ಬರಬೇಕಾದರೆ ಆತನ ನೆರಳು ಸಹ ನೆಲದ ಮೇಲೆ ಬೀಳಲು ಹೆಚ್ಚು ಅವಕಾಶವಿಲ್ಲದ ಅವಧಿ ಅಂದರೆ ಮಧ್ಯಾಹ್ನ ಸುಮಾರು ಹನ್ನೆರಡಕ್ಕೆ ಹೆಚ್ಚಿನ ಜನ ಸಂಚಾರವಿಲ್ಲದ ಸಮಯದಲ್ಲಿ ಬರಬೇಕು. ತಾನು ನಡೆದುಕೊಂಡು ಹೋದ ನಂತರ ತನ್ನ ಹೆಜ್ಜೆ ಗುರುತುಗಳೂ ಸಹ ಉಳಿಯದಂತೆ ಮಾಸಿ ಹೋಗಬೇಕು ಅದಕ್ಕಾಗಿ ಬೆನ್ನ ಹಿಂದೆ ಪೊರಕೆಯೊಂದನ್ನು ಕಟ್ಟಿಕೊಂಡು ನಡೆಯಬೇಕು ಆತ ಮುಂದೆ ಮುಂದೆ ಸಾಗಿದಂತೆ ಆ ಪೊರಕೆ ಆತನ ಹೆಜ್ಜೆ ಗುರುತುಗಳನ್ನು ಅಳಿಸುವಂತಿರಬೇಕು. ಆತ ನೆಲದ ಮೇಲೆ ಉಗುಳಬಾರದು. ಉಗುಳಬೇಕೆನಿಸಿದರೆ ಕೊರಳಲ್ಲೊಂದು ಬಟ್ಟಲು ಕಟ್ಟಿಕೊಂಡಿರಬೇಕು ಅದರಲ್ಲಿಯೇ ಉಗುಳಬೇಕು. ಆತ ನಡೆದುಕೊಂಡು ಬರುವಾಗ ಉಚ್ಚ ಜಾತಿಯವರು ಅಕಸ್ಮಾತ್ತಾಗಿ ಆತನಿಗೆದುರಾಗಿ ಬಂದರೆ ಆತನ ದೃಷ್ಟಿ ಅವರ ಮೇಲೆ ಬಿದ್ದು ಅವರಿಗೆ ಕೆಟ್ಟದ್ದಾಗಬಹುದೆಂದು ಯಾರೂ ಎದುರಿಗೆ ಬರುತ್ತಿರಲಿಲ್ಲ. ಆತ ಬರುತ್ತಿದ್ದಾನೆಂದು ತಿಳಿದು ಕೊಳ್ಳಲು ಹಾಗೆ ನಡೆದುಕೊಂಡು ಬರುತ್ತಿರುವ ಅಸ್ಪೃಶ್ಯ "ಸಂಭೋಳಿ" ಎಂದು ಕೂಗುತ್ತಾ ನಡೆದು ಕೊಂಡು ಬರುತ್ತಿರಬೇಕು. ಈ ಶಬ್ದ ಕೇಳಿಸಿಕೊಂಡರೆ ಉಚ್ಚ ಜಾತಿಯವರು ತಾವಿರುವಲ್ಲಿಯೇ ಮರೆಯಾಗಿ ಬಿಡುತ್ತಿದ್ದರು. ಅಬ್ಬಾ ಈ ಚಿತ್ರಣವನ್ನೊಮ್ಮೆ ಸುಮ್ಮನೆ ಊಹಿಸಿಕೊಳ್ಳಿ. ಮನಸ್ಸಿಗೆ ಎಷ್ಟೊಂದು ಹಿಂಸೆಯಾಗುತ್ತದೆಯಲ್ಲವೇ? ನಿಜ ಇದು ಅಂದಿನ ಕಟು ವಾಸ್ತವತೆ. ಕರ್ಮಠರ ಅಮಾನವೀಯತೆಯ ಪರಮಾವಧಿ. ಮೌಢ್ಯತೆಯ ಅಂಧಶ್ರದ್ಧೆಯಾಗಿತ್ತು. ಮೀನ–ಹಂದಿ

(ಮತ್ಸ್ಯ–ವರಹಾವತಾರ)ಗಳೂ ಸಹ ದೇವರ ಅವತಾರವಾಗಿ ಪೂಜಿಸಿಕೊಳ್ಳುತ್ತಿದ್ದ ಕಾಲದಲ್ಲಿ ಒಬ್ಬ ಮನುಷ್ಯನನ್ನು ಇಷ್ಟೊಂದು ನಿಕೃಷ್ಟವಾಗಿ ಕಾಣುವುದು ನಿಜಕ್ಕೂ ಅಕ್ಷಮ್ಯ.

*ಕನಕಗಿರಿ* ***ವೆಂಕಟೇಶ ಕೆ. ಜನಾದ್ರಿ***

**ರಹದಾರಿ ('ಪಾಸ್‌ಪೋರ್ಟ್')**
**ಅಂದರೆ ಏನು ಎತ್ತ ...?**

**'ಪಾಸ್‌ಪೋರ್ಟ್'** ಎಂಬುದು ಒಬ್ಬ ರಾಜನ ರಕ್ಷಣೆಯಲ್ಲಿರುವ ವ್ಯಕ್ತಿ ಇನ್ನೊಂದು ರಾಜ್ಯವನ್ನು ಹಾದು ಹೋಗುವಾಗ ಅವನು ಯಾವುದೇ ತೊಂದರೆಗೆ ಒಳಗಾಗದೆ ಸಾಗಿ ಹೋಗಲು ಅನುವು ಮಾಡಿಕೊಡಬೇಕೆಂಬ ಮನವಿ ಅಥವಾ ಆಜ್ಞಾಪತ್ರ. ಪ್ರಾಚೀನ ಕಾಲದಲ್ಲಿ ಆಡಳಿತ ವರ್ಗದ 'ದೊಡ್ಡ ಮನುಷ್ಯರು' ಅಥವಾ ವ್ಯಾಪಾರಿಗಳು (ವಣಿಕರು) ಬೇರೆ ರಾಜ್ಯಗಳಲ್ಲಿ ಹಾದು ಹೋಗುವಾಗ ಅವರಿಗೆ ರಾಜ ಪತ್ರವೊಂದನ್ನು ನೀಡಿ 'ಈತ ನನ್ನ ರಕ್ಷಣೆಯಲ್ಲಿರುವವನು' ಎಂಬರ್ಥದ ಪತ್ರ ನೀಡುತ್ತಿದ್ದ.

ಮೊದಲನೇ ವಿಶ್ವ ಯುದ್ಧದ ಸಂದರ್ಭದಲ್ಲಿ ೧೯೧೪ರ ಭಾರತೀಯ ಭದ್ರತಾ ಕಾಯ್ದೆಯಡಿ ಭಾರತದಲ್ಲಿ ಮೊದಲ ಬಾರಿಗೆ ಪಾಸ್‌ಪೋರ್ಟ್‌ಗಳನ್ನು ವಿತರಿಸಲಾಯಿತು. ಈ ಕಾಯ್ದೆ ಬಂದ ೬ ತಿಂಗಳ ನಂತರ ಅಂದರೆ ಮೊದಲನೇ ವಿಶ್ವಯುದ್ಧ ಮುಗಿಯುತ್ತಿದ್ದಂತೆಯೇ ಇಲ್ಲವಾಯಿತು.

**"ಸಾಗಿ ಹೋಗುವುದು"**: ಪಾಸ್‌ಪೋರ್ಟ್ ಎಂಬ ಪದದಲ್ಲೇ ಅದರ ಅರ್ಥ ಅಡಗಿದೆ. 'ಪಾಸ್' ಎಂದರೆ ಸಾಗಿ ಹೋಗುವುದು, 'ಪೋರ್ಟ್' ಎಂದರೆ ಬಂದರು. ವಿದೇಶ ಪ್ರಯಾಣಕ್ಕೆ ವಿಮಾನಗಳಿಲ್ಲದಿದ್ದ ಕಾಲದಲ್ಲಿ ಹಡಗುಗಳೇ ಪ್ರಯಾಣದ ವಾಹನಗಳಾಗಿದ್ದವು. ಈ ಬಂದರುಗಳನ್ನು ಹಾದು ಹೋಗಬೇಕಾಗಿದ್ದರಿಂದ 'ಪಾಸ್‌ಪೋರ್ಟ್' ಎಂಬ ಹೆಸರು ಬಂತು.

ಮೊದಲನೇ ವಿಶ್ವಯುದ್ಧದ ನಂತರ ದೇಶಗಳು ತಮ್ಮ ಗಡಿಗಳನ್ನು ಭದ್ರಪಡಿಸಿಕೊಂಡ ನಂತರ ಗೋಡೆ, ಗಡಿ ಅಥವಾ ಬಂದರು ದಾಟಲು ಈ ಪಾಸ್‌ಪೋರ್ಟ್‌ಗಳ ಅವಶ್ಯಕತೆ ಉಂಟಾಯಿತು ಎನ್ನಲಾಗಿದೆ. ಇದೇ ಸಂದರ್ಭದಲ್ಲಿ ದೇಶಗಳು ಬಂದವರ, ಹೋದವರ ವಿವರಗಳುಳ್ಳ ದಾಖಲೆಗಳನ್ನು ಇಡಲಾರಂಭಿಸಿದವು.

ನಂತರ ೧೯೨೦ರಲ್ಲಿ ಭಾರತೀಯ ಪಾಸ್‌ಪೋರ್ಟ್ ಕಾಯ್ದೆಯನ್ನು ರೂಪಿಸಲಾಯಿತು. ಸ್ವಾತಂತ್ರ್ಯಾನಂತರ ಪಾಸ್‌ಪೋರ್ಟ್ ನೀಡುವ ಅಧಿಕಾರವನ್ನು ವಿದೇಶಾಂಗ ವ್ಯವಹಾರಗಳ ಸಚಿವ ಖಾತೆಗೆ ನೀಡಲಾಯಿತು. ಮೊದಲ ಐದು ಪಾಸ್‌ಪೋರ್ಟ್ ಕಚೇರಿಗಳನ್ನು ಮುಂಬೈ, ಕೋಲ್ಕತ್ತಾ, ದೆಹಲಿ, ಚೆನ್ನೈ ಮತ್ತು ನಾಗಪುರದಲ್ಲಿ ಸ್ಥಾಪಿಸಲಾಯಿತು. ಈಗ ೧೯೬೭ರ ಭಾರತೀಯ ಪಾಸ್‌ಪೋರ್ಟ್ ಕಾಯ್ದೆಯಡಿ ಪಾಸ್‌ಪೋರ್ಟ್‌ಗಳನ್ನು ನೀಡಲಾಗುತ್ತಿದೆ.

**ಮೂರು ಬಗೆ ರಹದಾರಿ :** ಮೂರು ಬಗೆಯ ಪಾಸ್‌ಪೋರ್ಟ್‌ಗಳನ್ನು ಈಗ ನೀಡಲಾಗುತ್ತಿದೆ. ಸಾಮಾನ್ಯ, ಅಧಿಕೃತ ಮತ್ತು ರಾಜತಾಂತ್ರಿಕ ಎಂದು ಅವುಗಳನ್ನು ವರ್ಗೀಕರಿಸಲಾಗಿದೆ. ಪಾಸ್‌ಪೋರ್ಟ್‌ಗಳನ್ನು ಸುಳ್ಳು ಮಾಹಿತಿ ನೀಡಿ ಪಡೆದಿದ್ದರೆ, ಅಥವಾ ಮತ್ತೊಬ್ಬರ ಪಾಸ್‌ಪೋರ್ಟ್‌ನ್ನು ತನ್ನದೆಂದು ಹೇಳಿದಂತೆ ಹಾಗೂ ದೇಶದ ಭದ್ರತೆ ಅಥವಾ ಹಿತಾಸಕ್ತಿಗೆ ಧಕ್ಕೆ ತರುವ ಯಾವುದೇ ರೀತಿಯಲ್ಲಿ ಪಾಸ್‌ಪೋರ್ಟ್ ಬಳಸಿದ್ದಲ್ಲಿ ಅದನ್ನು ಅನೂರ್ಜಿತಗೊಳಿಸಬಹುದಾಗಿದೆ.

ಧಾರವಾಡ ***ಹನುಮಂತ ಮ. ದೇಶಕುಲಕರ್ಣಿ***

ಕಳೆದ ಜೂನ್ ಸಂಚಿಕೆಯಲ್ಲಿ ವಿಶ್ವಾರಾಧ್ಯ ಸತ್ಯಂಪೇಟೆಯವರು, 'ಡಾ॥ ಕಲಬುರ್ಗಿಯವರನ್ನು ಕೊಲ್ಲಬಹುದು, ವಿಚಾರಗಳನ್ನು ಕೊಲ್ಲಬಹುದೆ?' ಎಂಬ ತಮ್ಮ ಪತ್ರದಲ್ಲಿ ವಿಶ್ವವಿಖ್ಯಾತ ವಿಜ್ಞಾನಿ ಗೆಲಿಲಿಯೋ ಅವರನ್ನು ಗಲ್ಲಿಗೇರಿಸಿದರು ಎಂದು ತಪ್ಪಾಗಿ ಬರೆದಿದ್ದಾರೆ. ವಾಸ್ತವವಾಗಿ ಸತ್ಯ ಬೇರೆಯೇ ಆಗಿದೆ. ಸೂರ್ಯನ ತೇಜೋಮಂಡಲದಲ್ಲಿ ಕಪ್ಪು ಕಲೆಗಳಿವೆ ಎಂಬ ಅವರ ಶೋಧನೆ, ಕೋಪರ್ನಿಕಸ್ ಅವರ ಸೂರ್ಯ ಕೇಂದ್ರ ಸಿದ್ಧಾಂತವನ್ನು ಗೆಲಿಲಿಯೋ ಬೆಂಬಲಿಸಿದ್ದು, ಧರ್ಮಗ್ರಂಥದಲ್ಲಿ ಉಲ್ಲೇಖಗೊಂಡಿದ್ದ ಎತ್ತರದಿಂದ ವಸ್ತುಗಳನ್ನು ಬೀಳಿಸಿದಾಗ; ಭಾರ ವಸ್ತುಗಳು ಬಹುಬೇಗ ಭೂಮಿಗೆ ಅಪ್ಪಳಿಸುತ್ತವೆ ಮತ್ತು ಹಗುರ ವಸ್ತುಗಳು ಆಲಸ್ಯವಾಗಿ ಅಪ್ಪಳಿಸುತ್ತವೆ ಎಂಬ ತಪ್ಪು ಗ್ರಹಿಕೆಯನ್ನು ಅಲ್ಲಗಳೆದು ಪ್ರಯೋಗದ ಮೂಲಕ ಎಲ್ಲಾ ವಸ್ತುಗಳು ಏಕಕಾಲದಲ್ಲಿ ಭೂಮಿಗೆ ಅಪ್ಪಳಿಸುತ್ತವೆಂಬ ಅಂಶಗಳನ್ನು ಸಾಬೀತು ಪಡಿಸಿದ್ದರು. ಇಂಥಾ ಕ್ರಾಂತಿಕಾರಿಕ ಸಂಶೋಧನೆಗಳಿಂದಾಗಿ, ಧರ್ಮಕರ್ತರೂ ಮತ್ತು ಅಂದಿನ ಆಡಳಿತದ ಚುಕ್ಕಾಣಿ ಹಿಡಿದವರು, ಗೆಲಿಲಿಯೋನನ್ನು ಗೃಹಬಂಧನದಲ್ಲಿರಿಸಿದ್ದರು. ಇಳಿವಯಸ್ಸಿನಲ್ಲಿ ಅವರಿಗೆ ಮೊನಚಾದ ಆಯುಧಗಳನ್ನು ತೋರಿಸಿ ಹೆದರಿಸಿದರು. ತಮ್ಮ ಸಂಶೋಧನೆಗಳು ತಪ್ಪೆಂದು, ತಪ್ಪೊಪ್ಪಿಗೆ ಪತ್ರವನ್ನು ಬರೆಯಿಸಿಕೊಂಡರು. ನಂತರ ತಮ್ಮ ೭೭ನೇ ವಯಸ್ಸಿನಲ್ಲಿ ಜನವರಿ ೮, ೧೬೪೨ರಲ್ಲಿ ಸತತ ೮ ವರ್ಷಗಳ ಗೃಹಬಂಧನದಿಂದ, ವಯೋ ಸಹಜ ಕಾಯಿಲೆ ಮತ್ತು ಹೃದಯ ಸಂಬಂಧಿ ತೊಂದರೆಯಿಂದ ಸಹಜ ಸಾವನ್ನಪ್ಪಿದರು.

*ಬಳ್ಳಾರಿ* **ಎಸ್. ಮಂಜುನಾಥ**

## ವಿಭಾ ಸಾಹಿತ್ಯ ಪ್ರಶಸ್ತಿಗೆ ಹಸ್ತಪ್ರತಿ ಆಹ್ವಾನ

ಕವಯಿತ್ರಿ ವಿಭಾ ಅವರ ನೆನಪಿನಲ್ಲಿ **'ವಿಭಾ ಸಾಹಿತ್ಯ ಪ್ರಶಸ್ತಿ –೨೦೧೬'**ಕ್ಕಾಗಿ ಕನ್ನಡದ ಕವಿಗಳಿಂದ ಮೂವತ್ತಕ್ಕೂ ಹೆಚ್ಚು ಸ್ವರಚಿತ ಕವಿತೆಗಳ ಹಸ್ತಪ್ರತಿಗಳನ್ನು ಆಹ್ವಾನಿಸಲಾಗಿದೆ. ಈ ಪ್ರಶಸ್ತಿಯು ರೂ. ೫೦೦೦/– ನಗದು ಮತ್ತು ಪ್ರಶಸ್ತಿ ಫಲಕವನ್ನು ಒಳಗೊಂಡಿದೆ. ಹಸ್ತಪ್ರತಿ ಕಳುಹಿಸಲು **ಕೊನೆಯ ದಿನಾಂಕ ಜುಲೈ ೩೦, ೨೦೧೬.**

*ಹಸ್ತಪ್ರತಿಯನ್ನು ಕಳುಹಿಸಬೇಕಾದ ವಿಳಾಸ :*

**ಪ್ರಕಾಶ ಸುನಂದಾ ಕಡಮೆ**
ಸಂಚಾಲಕರು
ವಿಭಾ ಸಾಹಿತ್ಯ ಪ್ರಶಸ್ತಿ – ೨೦೧೬
ನಂ. ೯೦, 'ನಾಗಸುಧೆ', ಮಹಡಿ
೬/ಬಿ ಕ್ರಾಸ್, ಕಾಳಿದಾಸ ನಗರ
ವಿದ್ಯಾನಗರ ವಿಸ್ತೀರ್ಣ, ಹುಬ್ಬಳ್ಳಿ–೫೮೦೦೩೧
ಫೋನ್ : ೯೪೮೪೫೭೧೦೨೬,
೯೪೪೫೭೭೫೩೪೭

ಶ್ರೀಮತಿ ಯು. ಎಸ್. ಪಾರ್ವತಿ ಅವರು ತಮ್ಮ ತಾಯಿ ದಿ॥ ಯು. ಸಾಕಮ್ಮನವರ ಜ್ಞಾಪಕಾರ್ಥ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳೆಯರ ಕುರಿತ ಕತೆ / ಲೇಖನಗಳಿಗೆ ತಲಾ ರೂ. ೧೦೦೦/– ಬಹುಮಾನ ನೀಡುತ್ತ ಬಂದಿದ್ದಾರೆ. ಅದರಂತೆ, ೨೦೧೧–೧೨ರ ಸಾಲಿನಲ್ಲಿ (೧) ಶ್ರೀಮತಿ ಜಿ. ಎಸ್. ಸುಶೀಲಾದೇವಿ ಆರ್. ರಾವ್ ಅವರ ಕತೆ **ಅಪರಿಮಿತ ಕತ್ತಲೊಳಗೆ** (ಪ್ರ.: ಅಕ್ಟೋಬರ್ ೨೦೧೧), (೨) ಶ್ರೀಮತಿ ಬಿ. ಎಂ. ರೋಹಿಣಿ ಅವರ ಲೇಖನ **ತುಳುನಾಡಿನಲ್ಲಿ ಮಾಸ್ತಿಕಲ್ಲುಗಳು – ಸ್ಥಾಪನೆ ಮತ್ತು ರೂಪಾಂತರ** (ಪ್ರ. : ಜುಲೈ ೨೦೧೨), ೨೦೧೨–೧೩ರ ಸಾಲಿನಲ್ಲಿ (೧) ಪ್ರೊ॥ ಶೈಲಜಾ ಅವರ ಲೇಖನ **ಸಾಮಾಜಿಕ ಪ್ರತಿಕೂಲತೆ, ಕಲಿಕೆ ಹಾಗೂ ಶಿಕ್ಷಣ** (ಪ್ರ.: ಜನವರಿ ೨೦೧೩), (೨) ಶ್ರೀಮತಿ ವಿನಯಾ ಭಟ್ ಅವರ ಕತೆ **ಕಾಮನಬಿಲ್ಲು** (ಪ್ರ.: ಅಕ್ಟೋಬರ್ ೨೦೧೨).
– ಇವು ಈ ಬಹುಮಾನಕ್ಕೆ ಆಯ್ಕೆಯಾಗಿವೆ. ಈ ಎಲ್ಲ ಲೇಖಕಿಯರಿಗೆ ಅಭಿನಂದನೆಗಳು.

***– ಸಂಪಾದಕ***

# ಕ್ಷ - ಕಿರಣ

- ಸಾನ್ವಿ ಪಿ.




**ಪ್ರಜಾಸತ್ತೆ–ಜನರಿಂದ, ಜನರಿಗಾಗಿ, ಜನರಿಗೋಸ್ಕರ**

ಮಂತ್ರಿ ಪದವಿ ಆಕಾಂಕ್ಷಿಗಳು ದೆಹಲಿಗೆ ದೌಡು.



**ಬಾಬಾ ರಾಮ್‌ದೇವ್ ಅನಾರೋಗ್ಯ**

ಆಸ್ಪತ್ರೆಗೆ ದಾಖಲು: ಸುದ್ದಿ





# ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ

○ ಎಸ್. ಆರ್. ಭಟ್

## ರಾಜ್ಯದಲ್ಲಿ ಚಳವಳಿಯ ಮೊದಲ ಹಂತ ೧೯೩೫-೪೭





ದಿವಂಗತ ಎಸ್. ರಾಮಚಂದ್ರ ಭಟ್ಟರು ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕರಲ್ಲೊಬ್ಬರು ಹಾಗೂ ಸ್ಥಾಪಕ ಕಾರ್ಯದರ್ಶಿ. ಸಂಸ್ಥೆಯಲ್ಲಿ ಹಲವಾರು ವರ್ಷಗಳು ಕಾರ್ಯ ನಿರ್ವಹಿಸಿ ಭದ್ರವಾದ ನೆಲೆ ಸೃಷ್ಟಿಸಿದವರು. ಕೆಲಕಾಲ 'ಕೆಂಬಾವುಟ' ಪತ್ರಿಕೆಯ ಸಂಪಾದಕರಾಗಿದ್ದ ಭಟ್ಟರು ಬೆಂಗಳೂರಿನಿಂದ ಪ್ರಕಟವಾದ ಸೈದ್ಧಾಂತಿಕ ಮಾಸಪತ್ರಿಕೆ 'ಅರುಣ'ದ ಸಂಪಾದಕರೂ ಆಗಿದ್ದರು. ಕನ್ನಡ, ಸಂಸ್ಕೃತ, ಇಂಗ್ಲಿಷಿನಲ್ಲಿ ಪ್ರಬುದ್ಧರಾಗಿದ್ದ ಅವರು ವಿದ್ವಾಂಸರು. ವೇದಾಧ್ಯಯನ ಮಾಡಿದ್ದರು. ಭಾರತದ ಪ್ರಾಚೀನ ಇತಿಹಾಸವನ್ನು ಚೆನ್ನಾಗಿ ಬಲ್ಲವರಾಗಿದ್ದರು. 'ಕುಮಾರವ್ಯಾಸ ಭಾರತ' ಕಂಠಪಾಠ ಮಾಡಿಕೊಂಡಿದ್ದರು, ಅಧ್ಯಯನ ಶೀಲರಾಗಿದ್ದ ಭಟ್ಟರು ಆಳವಾದ ವಿಶ್ಲೇಷಣೆಗೆ ಹೆಸರಾಗಿದ್ದರು.

೧೯೭೭ರ ಅಕ್ಟೋಬರ್ ತಿಂಗಳಲ್ಲಿ ಅವರು ಬರೆದ 'ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ' ಪ್ರಕಟಿಸುತ್ತಿದ್ದೇವೆ.

– *ಸಂ.*

**ಕ**ರ್ನಾಟಕದ ಕಾರ್ಮಿಕ ವರ್ಗ ದೇಶದ ಈ ಸಂಘಟಿತ ಕಾರ್ಮಿಕ ಸೇನೆಯ ಒಂದು ವಿಭಾಗ, ಅದರ ಒಂದು ತುಕಡಿ. ಆದರೆ, ಈ ತುಕಡಿ ರೂಪುಗೊಂಡು ಭಾರತೀಯ ಕಾರ್ಮಿಕ ಚಳವಳಿಯ ಮುಖ್ಯ ಪ್ರವಾಹವನ್ನು ಸೇರಿದುದು ಸ್ವಲ್ಪ ನಿಧಾನವಾಗಿ. ಅಖಿಲ ಭಾರತ ಕಾರ್ಮಿಕ ಚಳವಳಿಯ ಇತಿಹಾಸದಷ್ಟು ದೀರ್ಘ ಇತಿಹಾಸವೂ ಕರ್ನಾಟಕದ ಟ್ರೇಡ್ ಯೂನಿಯನ್ ಚಳವಳಿಗೆ ಇಲ್ಲ. ಏಕೆಂದರೆ, ಕರ್ನಾಟಕದಲ್ಲಿ ಆಧುನಿಕ ಯಂತ್ರ ಕೈಗಾರಿಕೆಯ ಬೆಳವಣಿಗೆಗೆ ೧೯ನೇ ಶತಮಾನದ ಕೊನೆಯ ಮತ್ತು ೨೦ನೇ ಶತಮಾನದ ಆದಿ ಭಾಗದಲ್ಲಿ ಪ್ರಾರಂಭವಾಯಿತಷ್ಟೆ. ಈ ಬೆಳವಣಿಗೆ ತೀವ್ರಗೊಂಡುದಂತೂ ಸ್ವಾತಂತ್ರ್ಯಾನಂತರ ಮಾತ್ರ. ಆದುದರಿಂದ ಕರ್ನಾಟಕದಲ್ಲಿ ಆಧುನಿಕ ಕೈಗಾರಿಕಾ ಕಾರ್ಮಿಕ ವರ್ಗ ಜನ್ಮತಾಳಿ ಸಂಘಟನೆಗೆ ಪಕ್ವವಾದುದೇ ಬಹಳ ತಡವಾಗಿ.









ಮುಂಬಯಿಯಲ್ಲಿ ೧೮೮೦ರಷ್ಟು ಹಿಂದೆಯೇ ೫೮ ಹತ್ತಿ ಗಿರಣಿಗಳು ತಲೆ ಎತ್ತಿದ್ದವೆಂಬುದನ್ನು ನಾವು ನೋಡಿದ್ದೇವೆ. ಕರ್ನಾಟಕದಲ್ಲಿ ಆಗ ಒಂದೇ ಒಂದು ಕೈಗಾರಿಕೆಯೂ ಇದ್ದಿರಲಿಲ್ಲ. ಕರ್ನಾಟಕವು ಔದ್ಯಮೀ ಕರಣದ ಹಾದಿಯಲ್ಲಿ ಮೊದಲ ಹೆಜ್ಜೆಯನ್ನಿಟ್ಟದ್ದು ಮುಂಬಯಿಯಲ್ಲಿ, ೧೦,೦೦೦ ಹತ್ತಿ ಗಿರಣಿ ಕಾರ್ಮಿಕರು ಲೋಖಂಡೆಯವರ ನಾಯಕತ್ವದಲ್ಲಿ ತಮ್ಮ ಕನಿಷ್ಠ ಕೇಳಿಕೆಗಳನ್ನು ಮಾಲೀಕರ ಮುಂದಿಟ್ಟ ವರ್ಷದಲ್ಲಿ – ಅಂದರೆ, ೧೮೮೪ರಲ್ಲಿ. ಆ ವರ್ಷದಲ್ಲಿ ಅಂದಿನ ಮೈಸೂರು ಸರಕಾರದ ಪ್ರೋತ್ಸಾಹದಿಂದ ಬೆಂಗಳೂರಿನಲ್ಲಿ ಎರಡು ಹತ್ತಿ ಗಿರಣಿ ಕಾರ್ಖಾನೆಗಳು ಸ್ಥಾಪಿಸಲ್ಪಟ್ಟವು. ಇವುಗಳಲ್ಲಿ ಒಂದು ಬಿನ್ನಿ ಮಿಲ್. ಎರಡನೆಯದು ಬಹುಶಃ ಮಿನರ್ವಾ. ೧೮೮೬ರಲ್ಲಿ ಕೋಲಾರದ ಚಿನ್ನದ ಗಣಿ ಅಸ್ತಿತ್ವಕ್ಕೆ ಬಂತು. ರಾಜ್ಯದಲ್ಲಿ ರೈಲ್ವೆ ಮಾರ್ಗಗಳ ನಿರ್ಮಾಣವೂ ಇದೇ ವರ್ಷ ಆರಂಭವಾಯಿತು. ೧೯೦೨ರಲ್ಲಿ ಶಿವನಸಮುದ್ರದಿಂದ ವಿದ್ಯುತ್ ಹರಿಯಲಾರಂಭಿಸಿತು. ಸುಮಾರು ಇದೇ ಸಮಯಕ್ಕೆ ದಕ್ಷಿಣ ಕನ್ನಡದ ಮಂಗಳೂರಿನಲ್ಲಿ ಕೆಲವು ಹಂಚು ಮತ್ತು ಮುದ್ರಣ ಕಾರ್ಖಾನೆಗಳು ಸ್ಥಾಪಿತವಾದವು. ೧೯೦೬ರಲ್ಲಿ ಮಂಗಳೂರಿನ ಡೊಂಗರಕೇರಿ ಬೀದಿಯ ಚಿಕ್ಕ ಕಟ್ಟಡವೊಂದರಲ್ಲಿ ಈಗಿನ ಸುಪ್ರಸಿದ್ಧ ಕೆನರಾ ಬ್ಯಾಂಕ್ ಜನ್ಮ ತಳೆಯಿತು. ಇತ್ತ ಕೊಡಗು, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಪ್ಲಾಂಟೇಶನ್ ಕೈಗಾರಿಕೆಯೂ ಆಗ ಬೆಳೆಯಲಾರಂಭಿಸಿತ್ತು.

**ಕೈಗಾರಿಕೆಗಳ ಬೆಳವಣಿಗೆ**

೨೦ನೇ ಶತಮಾನದ ಎರಡನೇ ದಶಕದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರು ರಾಜ್ಯದ ಔದ್ಯಮೀಕರಣಕ್ಕೆ ಭದ್ರವಾದ ತಳಹದಿ ಹಾಕಿದರು. ಕನ್ನಂಬಾಡಿ ಕಟ್ಟೆಯ ನಿರ್ಮಾಣದಿಂದಾಗಿ ಶಿವನಸಮುದ್ರದ ವಿದ್ಯುತ್ ಉತ್ಪಾದನೆ ೧೦ ಪಟ್ಟು ಅಧಿಕವಾಯಿತು. ೧೯೧೩ರಲ್ಲಿ ಮೈಸೂರು ಬ್ಯಾಂಕ್ ಹುಟ್ಟಿತು. ೧೯೧೮ರಲ್ಲಿ ಭದ್ರಾವತಿ ಉಕ್ಕಿನ ಕಾರ್ಖಾನೆ ಸ್ಥಾಪನೆಯಾಗಿ, ೧೯೨೩ ಉತ್ಪಾದನೆ ಆರಂಭವಾಯಿತು. ಈ ಅವಧಿಯಲ್ಲಿ ಮಂಗಳೂರಿನಲ್ಲಿ ಕೆಲವು ಬೀಡಿ ಮತ್ತು ಕೈಮಗ್ಗದ ಬಟ್ಟೆ ಕಾರ್ಖಾನೆಗಳೂ, ಬೆಂಗಳೂರಿನಲ್ಲಿ ಕೆಲವು ಸಿಲ್ಕ್ ಕಾರ್ಖಾನೆಗಳೂ ಅಸ್ತಿತ್ವಕ್ಕೆ ಬಂದವು. ಹತ್ತಿ ಬಟ್ಟೆ ಕೈಗಾರಿಕೆ ಮೈಸೂರು, ದಾವಣಗೆರೆ ಮುಂತಾದ ಕಡೆಗಳಿಗೆ ಹರಡಿತು. ಕೈಗಾರಿಕೆಗಳ ಬೆಳವಣಿಗೆಗೆ ದ್ವಿತೀಯ ಮಹಾಯುದ್ಧ ಮತ್ತಷ್ಟು ಪ್ರೋತ್ಸಾಹ ನೀಡಿತು. ೧೯೪೨ರಲ್ಲಿ ವಾಲ್ಚಂದ್ ಹೀರಾಚಂದ್ ಮನೆತನದಿಂದ ಬೆಂಗಳೂರಿನಲ್ಲಿ ಹಿಂದುಸ್ತಾನ ವಿಮಾನ ಕಾರ್ಖಾನೆ ಸ್ಥಾಪಿಸಲ್ಪಟ್ಟು, ಕೊನೆಗೆ ಭಾರತ ಸರಕಾರವೇ ಅದನ್ನು ವಹಿಸಿತು. ೧೯೪೪ರಲ್ಲಿ ರಾಜ್ಯದಲ್ಲಿ ೬೦೫ ದೊಡ್ಡ ಮತ್ತು ಮಧ್ಯಮ ಕೈಗಾರಿಕಾ ಸಂಸ್ಥೆಗಳಿದ್ದು, ಅವುಗಳಲ್ಲಿ ೭೭,೫೧೮ ಕಾರ್ಮಿಕರು ದುಡಿಯುತ್ತಿದ್ದರು. (ಕರ್ನಾಟಕ ಸರಕಾರ : ಕರ್ನಾಟಕ, ಪ್ರಗತಿ ಪಥ) ಇದಲ್ಲದೆ ಬೀಡಿ, ರೇಷ್ಮೆ, ಹಿಟ್ಟಿನ ಗಿರಣಿ, ಹಂಚು, ಕೈಮಗ್ಗ ಮುಂತಾದ ಕೈಗಾರಿಕೆಗಳಲ್ಲಿ ಅನೇಕ ಚಿಕ್ಕ ಪುಟ್ಟ ಕಾರ್ಖಾನೆಗಳೂ ಇದ್ದವು.

ಆದರೆ ದೊಡ್ಡ ಪ್ರಮಾಣದಲ್ಲಿ ರಾಜ್ಯದ ಔದ್ಯಮೀಕರಣ ನಡೆದುದು ಸ್ವಾತಂತ್ರ್ಯಾನಂತರ. ಭಾರತದ ಕೈಗಾರಿಕಾ ಭೂಪಟದಲ್ಲಿ ಕರ್ನಾಟಕಕ್ಕೆ ಒಂದು ಪ್ರಮುಖ ಸ್ಥಾನ – ದೊರಕಿದುದು ೧೯೫೦ ಮತ್ತು ೬೦ರ ದಶಕಗಳಲ್ಲಿ. ಈ ಅವಧಿಯಲ್ಲಿ ಎಚ್.ಎಂ.ಟಿ., ಬಿ.ಇ.ಎ., ಐ.ಟಿ.ಐ. ಮುಂತಾದ ಸಾರ್ವಜನಿಕ ಕ್ಷೇತ್ರದ ಬೃಹತ್ ಉದ್ಯಮಗಳಲ್ಲದೆ, ನೂರಾರು ಹೊಸ ಹೊಸ ಖಾಸಗಿ ಕೈಗಾರಿಕೆಗಳೂ ರಾಜ್ಯದಲ್ಲಿ – ಅದರಲ್ಲೂ ಮುಖ್ಯವಾಗಿ ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟವು. ಈ ಶೀಘ್ರ ಬೆಳವಣಿಗೆಯ ಪರಿಣಾಮವಾಗಿ ೧೯೫೬ರಲ್ಲಿ ರಾಜ್ಯದಲ್ಲಿದ್ದ ಒಟ್ಟು ಕಾರ್ಖಾನೆಗಳ ಸಂಖ್ಯೆ ೧,೬೩೫ಕ್ಕೆ ಏರಿತ್ತು. ಇವುಗಳಲ್ಲಿ ೧.೭೨ ಲಕ್ಷ ಕಾರ್ಮಿಕರಿದ್ದರು. (ಕರ್ನಾಟಕ–ಪ್ರಗತಿ ಪಥ)

**ಸಂಘಟನೆಯ ಮೊದಲ ಹೆಜ್ಜೆಗಳು**

ಕರ್ನಾಟಕದ ಔದ್ಯಮೀಕರಣ ಹೇಗೆ ತಡವಾಗಿ ಪ್ರಾರಂಭವಾಯಿತೋ, ಹಾಗೆಯೇ ಕಾರ್ಮಿಕ ಚಳವಳಿಯೂ ಇಲ್ಲಿ ತಡವಾಗಿಯೇ ಉದಯ ವಾಯಿತು. ಟ್ರೇಡ್ ಯೂನಿಯನ್ ಚಳವಳಿಯ ಗಾಳಿ ಇಲ್ಲಿ ಬೀಸಲಾರಂಭಿಸಿದುದು, ಔದ್ಯಮೀಕರಣ ಪ್ರಾರಂಭವಾದ ಸುಮಾರು ೩೫ ವರ್ಷಗಳ ನಂತರ. ಇದಕ್ಕೆ, ಮೊದಲ ಕಾರ್ಮಿಕರ ಗ್ರಾಮೀಣ ಮೂಲವೂ, ಹಳೆ ಮೈಸೂರಿನಲ್ಲಿ ಅಂದು ಬಲವಾಗಿ ವ್ಯಾಪಕ ವಾಗಿದ್ದ ಪಾಳೆಯಗಾರೀ ಪ್ರಭಾವವೂ ಕಾರಣಗಳಾಗಿದ್ದಿರಬಹುದು. ಮುಂಬಯಿ, ಕಲ್ಕತ್ತ, ಮದರಾಸುಗಳಂತಹ ಮುಂದುವರಿದ ಕೈಗಾರಿಕಾ ಕೇಂದ್ರಗಳಲ್ಲಿ ಕೂಡ ನಿಜವಾದ ಸಮರಶೀಲ ಟ್ರೇಡ್ ಯೂನಿಯನ್ ಚಳವಳಿ ಬೆಳೆದುಬಂದುದು ೧೯೧೮ರ ನಂತರ ಎಂಬುದನ್ನು ಗಮನಿಸಿದರೆ, ಇದರಲ್ಲಿ ಆಶ್ಚರ್ಯವೂ ಇಲ್ಲ.

ಅದೇನಿದ್ದರೂ ಕರ್ನಾಟಕದ ಕಾರ್ಮಿಕ ವರ್ಗ ತನ್ನ ಜಾಡ್ಯವನ್ನು ಹರಿಸಿ, ಟ್ರೇಡ್ ಯೂನಿಯನ್ ಚಳವಳಿಯ ಹಾದಿಯಲ್ಲಿ ಕಾಲಿಟ್ಟುದು ೧೯೩೫–೩೬ರ ಕಾಲದಲ್ಲಿ. ಈ ಪ್ರಥಮ ಹೆಜ್ಜೆಯನ್ನಿಟ್ಟ ಶ್ರೇಯಸ್ಸು ಬೆಂಗಳೂರು ಮತ್ತು ಮಂಗಳೂರಿನ ಕಾರ್ಮಿಕರಿಗೆ ಸಲ್ಲಬೇಕು.

ಅದು ಸಂಘಟನೆ ಕಟ್ಟುವುದೇ ಒಂದು ದೊಡ್ಡ ಅಪರಾಧವಾಗಿತ್ತು. ಕಾರ್ಮಿಕರಿಗೆ ಯಾವ ವಿಧವಾದ ಕಾನೂನಿನ ರಕ್ಷಣೆಯೂ ಇದ್ದಿರಲಿಲ್ಲ. ಮಾಲೀಕರನ್ನು ಪ್ರಶ್ನಿಸಿದರೆ ಒಂದೋ ಏಟು ಇಲ್ಲವೇ ಕೆಲಸದಿಂದ ವಜಾ. ರಾಜ್ಯದ ಸಾಮಾನ್ಯ ಎಲ್ಲ ಕೈಗಾರಿಕೆಗಳಲ್ಲೂ ಅಂದು ದೊರೆಯುತ್ತಿದ್ದ ಸರಾಸರಿ ಕೂಲಿ ತಿಂಗಳಿಗೆ ರೂ. ೧೨ರಿಂದ ರೂ. ೧೫. ದುಡಿತದ ಅವಧಿ ದಿನಕ್ಕೆ ೧೦–೧೨ ತಾಸುಗಳು.

**ಬೆಂಗಳೂರು**

ಇಂತಹ ಪರಿಸ್ಥಿತಿಯಲ್ಲಿ ಬೆಂಗಳೂರಿನಲ್ಲಿ ಮೊದಲು ಸಂಘಟನೆಯ ಹಾದಿ ಹಿಡಿದವರು ಹತ್ತಿ ಗಿರಣಿ ಕಾರ್ಮಿಕರು. ಆಗ ಬೆಂಗಳೂರಿನಲ್ಲಿದ್ದ ದೊಡ್ಡ ಹತ್ತಿ ಗಿರಣಿಗಳು ಮೂರು – ಬಿನ್ನಿ, ರಾಜಾ ಮತ್ತು ಮಿನರ್ವಾ ಮಿಲ್‌ಗಳು. ಕಾಂಗ್ರೆಸ್ ನಾಯಕ ಕೆ. ಟಿ. ಭಾಷ್ಯಂರವರು ಈ ಕಾರ್ಮಿಕರನ್ನು ಸಂಘಟಿಸಲು ಮೊದಲು ಮುಂದಾದರು. ಅವರ ಪ್ರಯತ್ನಗಳ ಪರಿಣಾಮವಾಗಿ ೧೯೩೫ರಲ್ಲಿ ಬೆಂಗಳೂರು ಟೆಕ್ಸ್‌ಟೈಲ್ ಲೇಬರ್ ಅಸೋಸಿಯೇಷನ್ ಸ್ಥಾಪಿಸಲ್ಪಟ್ಟಿತು. ಮುಂದೆ ಅನೇಕ ವರ್ಷಗಳ ಕಾಲ ಭಾಷ್ಯಂರವರೇ ಅದರ ಅಧ್ಯಕ್ಷರಾಗಿದ್ದರು. ಪ್ರಾರಂಭದಲ್ಲಿ ಯೂನಿಯನ್ ಚಟುವಟಿಕೆ ಕೇವಲ ಮನವಿ ಅರ್ಪಣೆ ಮೊದಲಾದವುಗಳಿಗೆ ಮಾತ್ರ ಸೀಮಿತವಾಗಿತ್ತು.

**ಬಿನ್ನಿ ಮಿಲ್ ಮುಷ್ಕರ**

ಆದರೆ, ೧೯೩೯ರಲ್ಲಿ ದ್ವಿತೀಯ ಮಹಾಯುದ್ಧ ಸ್ಫೋಟಗೊಂಡಿತು. ತೀವ್ರ ಬೆಲೆ ಏರಿಕೆಯ ರೂಪದಲ್ಲಿ ಯುದ್ಧದ ಬಿಸಿ ಭಾರತವನ್ನು ತಲುಪಿತು. ಇದೇ ಸಮಯದಲ್ಲಿ ಎಂ. ಎಸ್. ರಾಮರಾವ್, ಸಿ. ಬಿ. ಮೊನ್ನಯ್ಯ ಮತ್ತು ಎನ್. ಡಿ. ಶಂಕರ್‌ರವರ ನೇತೃತ್ವದಲ್ಲಿ ಬೆಂಗಳೂರಿನಲ್ಲಿ ಕಮ್ಯೂನಿಸ್ಟ್ ಪಕ್ಷ ರೂಪುಗೊಳ್ಳಲಾರಂಭಿಸಿತ್ತು. ಈ ಕಮ್ಯೂನಿಸ್ಟ್ ಯುವಕರು ಹತ್ತಿ ಗಿರಣಿ ಕಾರ್ಮಿಕರ ಮಧ್ಯೆ ಕೆಲಸ ಮಾಡತೊಡಗಿದ್ದರು. ಆಗ ಬಿನ್ನಿ ಮಿಲ್ಲಿನಲ್ಲಿ ಸುಮಾರು ೮೦೦೦ ಕಾರ್ಮಿಕರಿದ್ದರು. ಇವರು ಅತಿ ಹೆಚ್ಚಿನ ಶೋಷಣೆಗೆ ಗುರಿಯಾಗಿದ್ದುದಲ್ಲದೆ, ಲೇಬರ್ ಅಸೋಸಿಯೇಷನ್ ಸ್ಥಾಪಿಸಲ್ಪಟ್ಟು ೪ ವರ್ಷಗಳಾಗಿದ್ದರೂ, ಬಿನ್ನಿ ಮಾಲೀಕರು ಅದಕ್ಕಿನ್ನೂ ಮನ್ನಣೆ ನೀಡಿರಲಿಲ್ಲ. ಬೆಲೆ ಏರಿಕೆಯಿಂದಾಗಿ

ಕಾರ್ಮಿಕರ ನೈಜ ಆದಾಯ ಕುಸಿದಿತ್ತು. ಈ ಪ್ರಶ್ನೆಗಳ ಕುರಿತು ಕಾರ್ಮಿಕರೊಂದಿಗೆ ಮಾತುಕತೆಗಳಿಗೆ ಕೂಡ ಮಾಲೀಕರು ಸಿದ್ಧರಿರಲಿಲ್ಲ. ಆದುದರಿಂದ ಡಿಸೆಂಬರ್ ೧೯೪೦ರಂದು ಬೋನಸ್ ಮತ್ತು ಯೂನಿಯನ್ ಮನ್ನಣೆಗಾಗಿ ಬಿನ್ನಿ ಮಿಲ್ಲಿನ ೮೦೦೦ ಕಾರ್ಮಿಕರೂ ಮುಷ್ಕರ ಹೂಡಿದರು. ಮುಷ್ಕರವನ್ನು ನಡೆಸುವುದಕ್ಕೋಸ್ಕರ ಭಾಷ್ಯಂರವರ ಅಧ್ಯಕ್ಷತೆಯಲ್ಲಿ ಎಂ. ಎಸ್. ರಾಮರಾವ್, ಎನ್. ಡಿ. ಶಂಕರ್, ಕೆ. ಎಸ್. ಕುಮಾರನ್ ಮತ್ತು ಇತರ ಕೆಲವರನ್ನೊಳಗೊಂಡ ಮುಷ್ಕರ ಸಮಿತಿಯೊಂದು ರಚಿಸಲ್ಪಟ್ಟಿತು. ಮುಷ್ಕರ ೧೦೦ಕ್ಕೆ ೧೦೦ರಷ್ಟು ಸಂಪೂರ್ಣವಾಗಿತ್ತು. ಅದನ್ನು ಮುರಿಯಲು ಸರಕಾರ ಮತ್ತು ಮಾಲೀಕರು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದವು. ಬಿನ್ನಿ ಮಿಲ್ ಬ್ರಿಟಿಷ್ ಮಾಲೀಕತ್ವಕ್ಕೆ ಸೇರಿದ್ದುದರಿಂದ ಈ ಮುಷ್ಕರಕ್ಕೆ ಯುದ್ಧ ವಿರೋಧಿ ಮತ್ತು ಸಾಮ್ರಾಜ್ಯಶಾಹಿ ವಿರೋಧಿ ಸ್ವಭಾವಗಳೆರಡೂ ಇದ್ದವು. ಆದ ಕಾರಣ ಅದಕ್ಕೆ ಎಲ್ಲ ಜನ ವಿಭಾಗಗಳಿಂದಲೂ ಪ್ರೋತ್ಸಾಹ ಮತ್ತು ಬೆಂಬಲಗಳು ದೊರೆತಿದ್ದವು. ಕೊನೆಗೆ ಮುಷ್ಕರದ ೨೩ನೇ ದಿನ ರಾಮರಾವ್, ಎನ್. ಡಿ. ಶಂಕರ್, ಕುಮಾರನ್ ಮತ್ತು ಕಾಂಗ್ರೆಸ್ಸಿನ ಪಿ. ಆರ್. ಕೆ. ಶರ್ಮ ಮುಂತಾದ ಕೆಲವು ನಾಯಕರನ್ನು ಸರಕಾರ ಬಂಧಿಸಿತು. ಆದರೆ, ಯಾವ ದಬ್ಬಾಳಿಕೆಗೂ ಕಾರ್ಮಿಕರು ಮಣಿಯಲಿಲ್ಲ. ೩೦ ದಿನಗಳ ಕಾಲ ಮುಷ್ಕರ ನಡೆದು ಕೊನೆಗೆ ಕಾರ್ಮಿಕರ ಕೇಳಿಕೆಗಳಿಗೆ ಆಡಳಿತ ಒಪ್ಪಲೇಬೇಕಾಯಿತು.

**ಭದ್ರಾವತಿ, ಮಂಡ್ಯ**

ಮುಷ್ಕರ ಮುಗಿದು ಮೂರು ತಿಂಗಳುಗಳಾದ ಮೇಲೆ, ಈ ಸಂಬಂಧವಾಗಿ ಬಂಧಿಸಲ್ಪಟ್ಟಿದ್ದ ನಾಯಕರನ್ನು ಸರಕಾರ ಬಿಡುಗಡೆ ಮಾಡಿ, ಅವರನ್ನು ಬೆಂಗಳೂರಿನಿಂದ ಗಡೀಪಾರು ಮಾಡಿತು. ಹೀಗೆ ಗಡೀಪಾರು ಮಾಡಲ್ಪಟ್ಟವರಲ್ಲಿ ಒಬ್ಬರಾದ ಎನ್. ಡಿ. ಶಂಕರ್‌ರವರು ಭದ್ರಾವತಿಗೆ ತೆರಳಿ, ಅಲ್ಲಿನ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಕೆಲಸಗಾರರನ್ನು ಕೆಂಬಾವುಟದಡಿಯಲ್ಲಿ ಸಂಘಟಿಸಿದರು. ಅಲ್ಲೊಂದು ಮುಷ್ಕರ ನಡೆದು ಗೋಳಿಬಾರು ಕೂಡ ಆಯಿತು. ಭದ್ರಾವತಿ ಉಕ್ಕಿನ ಕಾರ್ಖಾನೆ ಕಾರ್ಮಿಕರ ಸಂಘವು ಇದೊಂದು ಸ್ವತಂತ್ರ ಸಂಘಟನೆಯಾಗಿ ಬೆಳೆದು ಬಂದಿದ್ದರೂ, ಅದಕ್ಕೆ ಅಲ್ಲಿನ ಕಾರ್ಮಿಕರ ಈ ಮೊದಲ ಹೋರಾಟ, ತ್ಯಾಗ ಮತ್ತು ಬಲಿದಾನಗಳೇ ತಳಹದಿ. ತರುವಾಯ ಶಂಕರ್‌ರವರು ಮಂಡ್ಯ ಸಕ್ಕರೆ ಕಾರ್ಖಾನೆಯ ಕೆಲಸಗಾರರನ್ನು ಸಂಘಟಿಸಿದರು. ಅಲ್ಲಿಯೂ ಒಂದು ಹೋರಾಟ ನಡೆಯಿತು.

ಪ್ರಾರಂಭದ ಈ ಕಾರ್ಮಿಕ ಹೋರಾಟಗಳ ಪರಿಣಾಮವಾಗಿ ೧೯೪೨ರಲ್ಲಿ ಮೈಸೂರ್ ಲೇಬರ್ ಆಕ್ಟ್ ಜಾರಿಗೆ ಬಂತು. ಆ ತನಕ ಹಳೇ ಮೈಸೂರಿನಲ್ಲಿ ಯಾವುದೇ ಕಾರ್ಮಿಕ ಕಾನೂನೂ ಇರಲಿಲ್ಲ.

**ಚಿನ್ನದ ಗಣಿ ಕಾರ್ಮಿಕರು**

ಹತ್ತಿಗಿರಣಿ ಕಾರ್ಮಿಕರನ್ನು ಬಿಟ್ಟರೆ, ಅಂದು ಹಳೇ ಮೈಸೂರಿನಲ್ಲಿದ್ದ ಅತಿ ದೊಡ್ಡ ಕಾರ್ಮಿಕ ವಿಭಾಗ ಕೋಲಾರದ ಚಿನ್ನದ ಗಣಿ ಕಾರ್ಮಿಕರು. ಈ ಚಿನ್ನದ ಗಣಿ ಕೈಗಾರಿಕೆ ಮೈಸೂರಿನ ಅತ್ಯಂತ ಹಳೆಯ ಕೈಗಾರಿಕೆಗಳಲ್ಲಿ ಒಂದೆಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಬಿನ್ನಿ ಮಿಲ್ ಮುಷ್ಕರ ನಡೆಯುತ್ತಿದ್ದ ಕಾಲದಲ್ಲಿ ಈ ಗಣಿಗಳಲ್ಲಿ ಸುಮಾರು ೧೮,೦೦೦ ಮಂದಿ ಕಾರ್ಮಿಕರು ದುಡಿಯುತ್ತಿದ್ದರು. ಇವರಿಗೆ ಆಗ ದೊರೆಯುತ್ತಿದ್ದ ಕೂಲಿ ದಿನಕ್ಕೆ ಸರಾಸರಿ ೬ ಆಣೆಗಳು. (೩೭ ಪೈಸೆ). ಗಣಿ ಕೆಲಸ ಅತ್ಯಂತ ಅಪಾಯಕರವಾಗಿದ್ದುದಲ್ಲದೆ, ಕೆಲಸದ ಪರಿಸ್ಥಿತಿ ತೀರ ನಿಕೃಷ್ಟವಾಗಿತ್ತು. ಕಾರ್ಮಿಕರಲ್ಲಿ ಅತೃಪ್ತಿ ತಾಂಡವವಾಡುತ್ತಿತ್ತು.

ಈ ಅತೃಪ್ತಿಗೆ ಮೊದಲು ಸಂಘಟನಾ ಸ್ವರೂಪ ಕೊಟ್ಟವರು ಕಾಂಗ್ರೆಸ್ ಕಾರ್ಯಕರ್ತ ಪಿ. ಆರ್. ಕೆ. ಶರ್ಮರವರು. ಬಿನ್ನಿ ಮುಷ್ಕರದ ಸಂಬಂಧವಾಗಿ ಬಂಧಿಸಲ್ಪಟ್ಟು ನಂತರ ಬೆಂಗಳೂರಿನಿಂದ ಗಡೀಪಾರು ಮಾಡಲ್ಪಟ್ಟಿದ್ದ ಇವರು ಕೆ.ಜಿ.ಎಫ್.ಗೆ ಬಂದು, ವಿ. ವಿ. ಗಿರಿಯವರ ಸಹಾಯದಿಂದ ೧೯೪೧ರಲ್ಲಿ ಗಣಿ ಕಾರ್ಮಿಕರ ಒಂದು ಯೂನಿಯನ್ ಕಟ್ಟಿದರು.

**ಕಮ್ಯೂನಿಸ್ಟ್ ನೇತೃತ್ವ**

ಆದರೆ ಕೆ.ಜಿ.ಎಫ್. ಕಾರ್ಮಿಕರ ಸಂಘಟನೆ ಬೆಳೆದುದು ಕಮ್ಯೂನಿಸ್ಟ್ ನೇತೃತ್ವದಲ್ಲಿ. ಯೂನಿಯನ್ ಸ್ಥಾಪನೆಯಾದ ಸಮಯದೊಳಗೆ ಶರ್ಮರವರನ್ನು ಪುನಃ ಕೋಲಾರ ದಿಂದಲೂ ಗಡಿಪಾರು ಮಾಡಲಾಯಿತು. ಆಮೇಲೆ ೧೯೪೨ರಲ್ಲಿ ಆಂಧ್ರದ ಕಮ್ಯೂನಿಸ್ಟ್ ಕಾರ್ಯಕರ್ತ ವಜ್ರವೇಲು ಚೆಟ್ಟಿಯವರು ಸಮೀಪದ ಕುಪ್ಪಂನಿಂದ ಕೋಲಾರಕ್ಕೆ ಬಂದು ಕಾರ್ಮಿಕರಿಗೆ ನೇತೃತ್ವ ನೀಡಿ ಯೂನಿಯನ್ನನ್ನು ಪುನರುತ್ಥಾಪಿಸಿದರು. ಕೆಲ ಸಮಯದ ನಂತರ ತಮಿಳುನಾಡು ಕಮ್ಯೂನಿಸ್ಟ್ ಪಕ್ಷ, ವಾಸನ್ ಮತ್ತು ಗೋವಿಂದನ್‌ರವರನ್ನು ಇಲ್ಲಿಗೆ ಕಳುಹಿಸಿತು. ಕೆ.ಜಿ.ಎಫ್. ಕಾರ್ಮಿಕರಲ್ಲಿ ಹೆಚ್ಚಿನವರು ತಮಿಳರಾಗಿದ್ದುದರಿಂದ, ವಾಸನ್ ಮತ್ತು ಗೋವಿಂದನ್‌ರವರ ಆಗಮನದ ತರುವಾಯ ಸಂಘಟನೆ ಬಹಳ ಶೀಘ್ರವಾಗಿ ಮುನ್ನಡೆಯಲಾರಂಭಿಸಿತು.

ಈ ಮಧ್ಯೆ ಬೆಂಗಳೂರಿನಲ್ಲಿ ಕಮ್ಯೂನಿಸ್ಟ್ ಪಕ್ಷವೂ ಬೆಳೆಯತೊಡಗಿತ್ತು. ಮುಂದೆ ಕರ್ನಾಟಕದ ಕಮ್ಯೂನಿಸ್ಟ್ ಮತ್ತು ಕಾರ್ಮಿಕ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಲಿದ್ದ ಎಂ. ಎಸ್. ಕೃಷ್ಣನ್, ಎಂ. ಸಿ. ನರಸಿಂಹನ್ ಮತ್ತು ವೈ. ಆರ್.

## ಸುದ್ದಿಚಿತ್ರ



ಖ್ಯಾತ ಲೇಖಕ ಕಂನಾಡಿಗಾ ನಾರಾಯಣ ಅವರು ರಚಿಸಿ, ನವಕರ್ನಾಟಕ ಪ್ರಕಾಶನದಿಂದ ಪ್ರಕಟ ಗೊಂಡಿರುವ 'ದ್ವಾಪರ' ಕಾದಂಬರಿ ಕುರಿತ ವಿಚಾರ ಸಂಕಿರಣ ಕಾರ್ಯಕ್ರಮ ದಿನಾಂಕ ೧೧-೬-೨೦೧೬ ರಂದು ಶ್ರೀ ಕೃಷ್ಣರಾಜ ಪರಿಷನ್ಮಂದಿರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇಲ್ಲಿ ನಡೆಯಿತು.

ವಿಚಾರ ಸಂಕಿರಣದ ಉದ್ಘಾಟನೆಯನ್ನು ವಿದ್ವಾಂಸ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್ ನೆರವೇರಿಸಿದರು. ಅಧ್ಯಕ್ಷತೆಯನ್ನು ಖ್ಯಾತ ಚಿಂತಕ, ವಿಮರ್ಶಕ ಪ್ರೊ॥ ಎಂ. ಎಚ್. ಕೃಷ್ಣಯ್ಯ ಅವರು ವಹಿಸಿದ್ದರು. ಈ ಸಂದರ್ಭದಲ್ಲಿ ವಿಮರ್ಶಕ ಡಾ. ಎಚ್. ಎಸ್. ರಾಘವೇಂದ್ರ ರಾವ್, ಡಾ. ಕುಂಸಿ ಉಮೇಶ್, ಕೃತಿಯ ಲೇಖಕರಾದ ಕಂನಾಡಿಗಾ ನಾರಾಯಣ ಹಾಗೂ ನವಕರ್ನಾಟಕ ಪ್ರಕಾಶನದ ಪ್ರಧಾನ ವ್ಯವಸ್ಥಾಪಕರಾದ ಎ. ರಮೇಶ್ ಉಡುಪ ಅವರು ಉಪಸ್ಥಿತರಿದ್ದರು.

ಸತ್ಯನಾರಾಯಣ ಮೊದಲಾದ ಕೆಲವು ಯುವಕರು ವಿದ್ಯಾರ್ಥಿರಂಗದಿಂದಲೂ, ಐ. ಮರಿದಾಸ್, ಡಿ. ಎಸ್. ಶ್ರೀರಾಮುಲು ಮುಂತಾದ ಕಾರ್ಯಕರ್ತರು ಕಾಂಗ್ರೆಸ್ಸಿನಿಂದಲೂ ಕಮ್ಯೂನಿಸ್ಟ್ ಪಾರ್ಟಿಗೆ ಬಂದಿದ್ದರು.

**ದೀರ್ಘ ಮುಷ್ಕರ**

ಈ ಪೈಕಿ ಎಂ. ಸಿ. ನರಸಿಂಹನ್ ಅವರನ್ನು ೧೯೪೪ರಲ್ಲಿ ಪಾರ್ಟಿಯು ಕೆ.ಜಿ.ಎಫ್.ಗೆ ಕಳುಹಿಸಿತು, ವಿದ್ಯಾವಂತರೂ ಸಂಧಾನ ಚತುರರೂ ಆದ ನರಸಿಂಹನ್‌ರವರು ಬಂದುದು ಕೆ.ಜಿ.ಎಫ್. ಕಾರ್ಮಿಕರ ಸಂಘಟನೆಗೆ ಪುಟ ಕೊಟ್ಟಿತು. ೧೯೫೬ರಲ್ಲಿ ವೇತನ ಪುನರ್ವಿಮರ್ಶೆಯ ಪ್ರಶ್ನೆಯನ್ನು ಯೂನಿಯನ್ ಕೈಗೆತ್ತಿಕೊಂಡಿತು. ಮಾಲೀಕರ ಹಟಮಾರಿತನದಿಂದಾಗಿ ಸಂಧಾನದ ಮೂಲಕ ಪ್ರಶ್ನೆಯನ್ನು ಪರಿಹರಿಸಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದ ಮೇಲೆ ಬೇರೆ ದಾರಿಯಿಲ್ಲದೆ ಕಾರ್ಮಿಕರು ಮುಷ್ಕರ ಹೂಡಿದರು. ೭೨ ದಿನಗಳ ದೀರ್ಘಕಾಲ ಮುಷ್ಕರ ಯಶಸ್ವಿಯಾಗಿ ನಡೆಯಿತು. ಇದರ ಪರಿಣಾಮವಾಗಿ ಕಾರ್ಮಿಕರ ಕೂಲಿಯ ಮಟ್ಟ ದಿನಕ್ಕೆ ರೂ. ೧-೫೦ರ ತನಕ ಏರಿತು. ಈ ಮುಷ್ಕರದ ಬೆಂಬಲಾರ್ಥವಾಗಿ ಚಿನ್ನದ ಗಣಿ ಕಂಪೆನಿಯ ಅಧಿಕಾರಿಗಳ ಮನೆಗೆಲಸದವರು ಕೂಡ ಮುಷ್ಕರ ಹೂಡಿದ್ದರು. ಇದನ್ನು ಸಹಿಸಲಾರದೆ, ದಕ್ಷಿಣ ಆಫ್ರಿಕಾದಿಂದ ಬಂದಿದ್ದ ಮಲ್ಡೂನ್ ಎಂಬ ಅಧಿಕಾರಿಯೊಬ್ಬ, ತನ್ನ ಹುದ್ದೆಗೇ ರಾಜೀನಾಮೆ ನೀಡಿ ಕೋಲಾರವನ್ನು ಬಿಟ್ಟುಹೋದುದು, ಈ ಸಂಬಂಧವಾಗಿ ನಡೆದ ಒಂದು ವಿಶೇಷ ಘಟನೆ. ಮುಷ್ಕರ ಹೀಗೆ ಯಶಸ್ವಿಯಾಗಿ ಕೊನೆಗೊಂಡರೂ ಆಮೇಲೆ ನರಸಿಂಹನ್ ಅವರನ್ನು ಸರಕಾರ ಕೋಲಾರದಿಂದ ಬೆಂಗಳೂರಿಗೆ ಗಡೀಪಾರು ಮಾಡಿತು.

**ಇತರ ಕಾರ್ಮಿಕ ವಿಭಾಗಗಳು**

ಅತ್ತ ಕೆ.ಜಿ.ಎಫ್.ನಲ್ಲಿ ಕಾರ್ಮಿಕ ಸಂಘಟನೆ ಹೀಗೆ ಬೆಳೆಯುತ್ತಿದ್ದಾಗ, ಇತ್ತ ಬೆಂಗಳೂರಿನಲ್ಲಿ ಕೃಷ್ಣನ್, ಮರಿದಾಸ್ ಮತ್ತು ಶ್ರೀರಾಮುಲು ಮೊದಲಾದ ಯುವಕ ಕಮ್ಯೂನಿಸ್ಟ್ ಕಾರ್ಯಕರ್ತರು ಇತರ ಕಾರ್ಮಿಕ ವಿಭಾಗಗಳ ಸಂಘಟನೆಗೆ ಧುಮುಕಿದರು. ೧೯೪೪ರಲ್ಲಿ ಡಿ. ಎಸ್. ಶ್ರೀರಾಮುಲುರವರ ನೇತೃತ್ವದಲ್ಲಿ ಬೆಂಗಳೂರು ಮುನಿಸಿಪಲ್ ಕಾರ್ಮಿಕರು ಸಂಘಟಿತರಾಗಿ ಮುನಿಸಿಪಲ್ ಲೇಬರ್ ಯೂನಿಯನ್ ಅಸ್ತಿತ್ವಕ್ಕೆ ಬಂತು. ಶ್ರೀರಾಮುಲುರವರು ಇದರ ಅಧ್ಯಕ್ಷರೂ ಮರಿದಾಸ್‌ರವರು ಇದರ ಕಾರ್ಯದರ್ಶಿಗಳೂ ಆಗಿದ್ದರು. ೧೯೪೬ರಲ್ಲಿ ಮುನಿಸಿಪಲ್ ಕಾರ್ಮಿಕರ ಒಂದು ಮುಷ್ಕರವೂ ನಡೆಯಿತು.

ಆಗ ಬೆಂಗಳೂರಿನಲ್ಲಿ ಚರ್ಮ ಹದಮಾಡುವ ಟ್ಯಾನರಿ ಕೈಗಾರಿಕೆಗೆ ಒಂದು ಪ್ರಮುಖ ಸ್ಥಾನವಿತ್ತು. ಇದರಲ್ಲಿ ದುಡಿಯುತ್ತಿದ್ದ ಕಾರ್ಮಿಕರು ಸಾಮಾಜಿಕವಾಗಿಯೂ ಆರ್ಥಿಕವಾಗಿಯೂ ಅತ್ಯಂತ ಹಿಂದುಳಿದ ಜನ ವಿಭಾಗಕ್ಕೆ ಸೇರಿದವರಾಗಿದ್ದರು. ಕೃಷ್ಣನ್, ಮರಿದಾಸ್ ಮೊದಲಾದವರು ಈ ಕಾರ್ಮಿಕರ ಮಧ್ಯೆ ಕೆಲಸ ಮಾಡಿದುದರ ಫಲವಾಗಿ ೧೯೪೪-೪೫ರಲ್ಲಿ ಮರಿದಾಸರ ಅಧ್ಯಕ್ಷತೆಯಲ್ಲಿ ಟ್ಯಾನರಿ ಕೆಲಸಗಾರರ ಯೂನಿಯನ್ ಜನ್ಮ ತಳೆಯಿತು. ಡಾನಿಯೆಲ್ ಎಂಬುವರು ಇದರ ಮೊದಲ ಕಾರ್ಯದರ್ಶಿಯಾಗಿದ್ದರು. ಈ ಯೂನಿಯನ್ ಕೆಲವು ಹೋರಾಟಗಳನ್ನು ನಡೆಸಿ ಕಾರ್ಮಿಕರ ಸ್ಥಿತಿಗತಿಗಳನ್ನು ಸುಧಾರಿಸುವುದರಲ್ಲಿ ಸ್ವಲ್ಪಮಟ್ಟಿಗೆ ಯಶಸ್ವಿಯಾಯಿತು.

ಸುಮಾರು ಇದೇ ಸಮಯದಲ್ಲಿ ಕೃಷ್ಣನ್ ಮತ್ತು ಎ. ಎನ್. ಸಿಂಗ್‌ರವರ ನಾಯಕತ್ವದಲ್ಲಿ ಇಂಪೀರಿಯಲ್ ಟೊಬ್ಯಾಕೊ ಕಂಪೆನಿ ಕೆಲಸಗಾರರ ಯೂನಿಯನ್ ರಚಿಸಲ್ಪಟ್ಟಿತು. ೧೯೪೬ರಲ್ಲಿ ರಿಟ್ರೆಂಚ್‌ಮೆಂಟಿನ ವಿರುದ್ಧ ಹೋರಾಡುವ ಸಲುವಾಗಿ ಎಚ್.ಎ.ಎಲ್. ನೌಕರರ ಸಂಘ ಹುಟ್ಟಿತು. ವಿ. ಎಸ್. ರತ್ನಂ ಎಂಬ ವಿಮಾನ ಕಾರ್ಖಾನೆಯ ಒಬ್ಬ ನೌಕರರೇ ಈ ಯೂನಿಯನ್ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ೧೯೪೬ರ ಅಂತ್ಯದಲ್ಲಿ ಕೃಷ್ಣನ್ ಮತ್ತು ಡಿ. ಎಸ್. ಶ್ರೀರಾಮುಲುರವರು ಮೈಸೂರು ಸಂಸ್ಥಾನದ ರೈಲ್ವೆ ಕೆಲಸಗಾರರನ್ನು ಸಂಘಟಿಸತೊಡಗಿದರು. ಇದಕ್ಕೋಸ್ಕರ, ಶ್ರೀರಾಮುಲು ಲೋಕೋ ಶೆಡ್ಡಿನಲ್ಲಿ ಕೂಲಿಯಾಳಾಗಿ ಸೇರಿ, ಕೆಲವು ಕಾಲ ರೈಲ್ವೆ ಕಾರ್ಮಿಕನಾಗಿ ದುಡಿದಿದ್ದರು. ೧೯೪೭ರಲ್ಲಿ ಮೈಸೂರು ಮಿಲ್ ಲೇಬರ್ ಅಸೋಸಿಯೇಷನ್ ಎಂಬ ಹೆಸರಿನಲ್ಲಿ ರಾಜಾ ಮಿಲ್ ಕಾರ್ಮಿಕರು ಸಂಘಟಿತರಾದರು. ಕೋಲಾರದಿಂದ ಆಗ ತಾನೇ ಬೆಂಗಳೂರಿಗೆ ಗಡೀಪಾರು ಮಾಡಲ್ಪಟ್ಟಿದ್ದ ಎಂ. ಸಿ. ನರಸಿಂಹನ್‌ರವರು ಈ ಸಂಘದ ರಚನೆಯಲ್ಲಿ ಭಾಗವಹಿಸಿ, ಅದರಲ್ಲಿ ಕೆಲವು ಕಾಲ ದುಡಿದಿದ್ದರು. ಅವರಲ್ಲದೆ, ಎನ್. ಸಿ. ರಣನವರೆ, ಐ. ಮರಿದಾಸ್ ಮತ್ತು ಮಾಜಿ ಸಚಿವ ಕೆ. ಶ್ರೀರಾಮುಲುರವರೂ ಈ ಸಂಘಟನೆಗೆ ಮುಂದಾಳ್ತನ ನೀಡಿದ್ದರು.




**ಮೈಸೂರು**

ಹೀಗೆ ಬೆಂಗಳೂರಿನಲ್ಲಿ ಪ್ರಾರಂಭವಾದ ಟ್ರೇಡ್ ಯೂನಿಯನ್ ಚಳವಳಿ ಅಲ್ಲಿಂದ ಮೈಸೂರಿಗೆ ಹರಡಿತು. ಕಾಂಗ್ರೆಸ್ ನಾಯಕ ಟಿ. ಮರಿಯಪ್ಪನವರ ಪ್ರೇರಣೆಯಿಂದ ೧೯೪೦ಕ್ಕೆ ಸ್ವಲ್ಪ ಮುಂಚಿತವಾಗಿಯೇ ಅಲ್ಲಿ ಕೆ. ಆರ್. ಮಿಲ್ ಕೆಲಸಗಾರರ ಯೂನಿಯನ್ ಸ್ಥಾಪಿಸಲ್ಪಟ್ಟಿತ್ತು. ತರುವಾಯ ಅಜೀಜ್‌ಶೇಟ್‌ರವರು ಬೀಡಿ ಕಾರ್ಮಿಕರ ಸಂಘಟನೆಯೊಂದನ್ನು ರಚಿಸಿದರು. ೧೯೪೦-೪೧ರ ಸಮಯಕ್ಕೆ ಕಮ್ಯೂನಿಸ್ಟ್ ಗಾಳಿಯೂ ಮೈಸೂರಿಗೆ ಬೀಸಿತು. ಸೋಮಸುಂದರ ಶರ್ಮಾರವರ ನೇತೃತ್ವದಲ್ಲಿ ಕಮ್ಯೂನಿಸ್ಟ್ ಧ್ಯೇಯಗಳಿಂದ ಆಕರ್ಷಿತರಾಗಿದ್ದ ಯುವಕರ ಕೂಟವೊಂದು ಅಲ್ಲಿ ತಲೆದೋರಿತ್ತು. ಬಿ. ಎಲ್. ರಾಮನಾಥನ್, ಉಗ್ರಪ್ಪ, ಶ್ರೀಧರ್ ಮುಂತಾದವರು ಈ ಕೂಟದಲ್ಲಿದ್ದರು. ಈ ಯುವಕರು ಬೀಡಿ ಮತ್ತು ಮುನಿಸಿಪಲ್ ಕಾರ್ಮಿಕರನ್ನು ಸಂಘಟಿಸತೊಡಗಿದರು. ಇದಕ್ಕೋಸ್ಕರ ರಾಮನಾಥನ್ ಮುನಿಸಿಪಲ್ ಕಾಲೋನಿಯಲ್ಲೇ ಕೆಲವು ಸಮಯ ವಾಸ ಕೂಡ ಮಾಡಿದ್ದರು. ಈ ಅವಧಿಯಲ್ಲಿ ಮುನಿಸಿಪಲ್ ಕಾರ್ಮಿಕರ ಒಂದು ಮುಷ್ಕರ ಕೂಡ ಅಲ್ಲಿ ನಡೆದಿತ್ತೆಂದು ತೋರುತ್ತದೆ.

**ಉತ್ತರ ಕರ್ನಾಟಕ**

ಅಂದು ಉತ್ತರ ಕರ್ನಾಟಕ ಮುಂಬಯಿ ಪ್ರಾಂತ್ಯಕ್ಕೆ ಸೇರಿತ್ತು. ಗುಲ್ಬರ್ಗಾ, ರಾಯಚೂರು ಮತ್ತು ಬೀದರ್ ಜಿಲ್ಲೆಗಳು ಹೈದರಾಬಾದ್ ಸಂಸ್ಥಾನದ ಭಾಗವಾಗಿದ್ದವು. ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳು ಮದರಾಸ್ ಆಡಳಿತದಲ್ಲಿದ್ದವು. ಕೊಡಗು ಪ್ರತ್ಯೇಕ ಆಡಳಿತ ವಿಭಾಗವಾಗಿತ್ತು. ಉತ್ತರ ಕರ್ನಾಟಕದ ಕೇಂದ್ರವಾದ ಹುಬ್ಬಳ್ಳಿಯಲ್ಲಿ ೧೯೪೬ರ ಸಮಯಕ್ಕೆ ಕಾರ್ಮಿಕ ಚಳವಳಿ ರೂಪುಗೊಳ್ಳತೊಡಗಿತು. ೧೯೪೬-೪೭ರಲ್ಲಿ ಎ. ಜೆ. ಮುಧೋಳಕರ ಇಲ್ಲಿ ರೈಲ್ವೆ ಕಾರ್ಮಿಕರನ್ನು ಮೊದಲು ಸಂಘಟಿಸಿದರು. ಇದೇ ಕಾಲಕ್ಕೆ ಬೆಂಗಳೂರಿನಿಂದ ಸಿ. ಬಿ. ಮೊನ್ನಯ್ಯ ಮತ್ತು ಎನ್. ಕೆ. ಉಪಾಧ್ಯಾಯರನ್ನು ಕಮ್ಯೂನಿಸ್ಟ್ ಪಕ್ಷವು ಇಲ್ಲಿಗೆ ಕಳುಹಿಸಿತು. ತರುವಾಯ ಬೀಡಿ ಮತ್ತು ಮುನಿಸಿಪಲ್ ಕಾರ್ಮಿಕರನ್ನು ಸಂಘಟಿಸುವ ಪ್ರಯತ್ನ ನಡೆಯಿತು. ಈ ಮೊದಲ ಪ್ರಯತ್ನಗಳು ಹುಬ್ಬಳ್ಳಿಯಲ್ಲಿ ಅಷ್ಟೊಂದು ಯಶಸ್ವಿಯಾಗಲಿಲ್ಲ. ಇಲ್ಲಿ ಶಾಶ್ವತ ಯೂನಿಯನ್ನುಗಳು ತಲೆಯೆತ್ತಿದುದು ೬೦ರ ದಶಕದಲ್ಲೇ.

ಈ ಕಾಲಘಟ್ಟದಲ್ಲಿ ಉತ್ತರ ಕರ್ನಾಟಕದಲ್ಲಿ ಟ್ರೇಡ್ ಯೂನಿಯನ್ ಚಳವಳಿ ಮೂಡಿಬಂದ ಇನ್ನೊಂದು ಸ್ಥಳ ಬಿಜಾಪುರ. ಬಿಜಾಪುರ ಅಂದು ಇಂದಿಗಿಂತಲೂ ಹೆಚ್ಚು ಹಿಂದುಳಿದ ಪ್ರದೇಶವಾಗಿತ್ತು. ಟ್ರೇಡ್ ಯೂನಿಯನ್ ಚಳವಳಿಗೆ ಅಲ್ಲಿ ಹೆಚ್ಚು ಆಸ್ಪದವಿರಲಿಲ್ಲ. ಆದರೂ ೧೯೪೩-೪೬ರಲ್ಲಿ ಟಾಂಗಾ ಚಾಲಕರ ಯೂನಿಯನ್ನೊಂದು ಅಲ್ಲಿ ಅಸ್ತಿತ್ವಕ್ಕೆ ಬಂದು, ಕೆಲವು ಕಾಲ ಪ್ರಬಲವಾಗಿತ್ತು. ಇದಕ್ಕೆ ಬಿಜಾಪುರದ ಕಮ್ಯೂನಿಸ್ಟ್ ನಾಯಕ ದಿವಂಗತ ನಬೀ ಸಾಹೇಬ್ ಬಾಲಸಿಂಗ್ ಮಾಸ್ತರರ ಪ್ರಭಾವ ಮತ್ತು ದಕ್ಷ ನೇತೃತ್ವಗಳೇ ಕಾರಣವಾಗಿದ್ದುವು.

**ಗುಲ್ಬರ್ಗಾ**

ಬಿಜಾಪುರದಂತೆ ಹೈದರಾಬಾದ್ ಕರ್ನಾಟಕವು ಕೂಡ ಹಿಂದುಳಿದ

ಪ್ರದೇಶವಾಗಿದ್ದರೂ, ಗುಲ್ಬರ್ಗಾ ಜಿಲ್ಲೆಯಲ್ಲಿ ಮಾತ್ರ ಆಗಲೇ ಎರಡು ಕೈಗಾರಿಕೆಗಳಿದ್ದವು. ಒಂದು : ಗುಲ್ಬರ್ಗಾ ನಗರದಲ್ಲಿದ್ದ ಎಂ. ಎಸ್. ಕೆ. ಮಿಲ್. ಎರಡು : ಶಹಾಬಾದಿನ ಎಸಿಸಿ ಸಿಮೆಂಟ್ ಕಾರ್ಖಾನೆ. ಈ ಎರಡು ಕೈಗಾರಿಕೆಗಳಲ್ಲೂ ಅಂದಿನ ವೇತನ ಮಟ್ಟ ಮತ್ತು ಕೆಲಸದ ಪರಿಸ್ಥಿತಿಗಳು ಅತ್ಯಂತ ನಿಕೃಷ್ಟವಾಗಿದ್ದವು. ಆದುದರಿಂದ ೧೯೪೬ರಲ್ಲಿ ಈ ಕಾರ್ಮಿಕರು ಹೋರಾಡಲು ಸಿದ್ಧರಾದರು. ಎಂ. ಎಸ್. ಕೆ. ಮಿಲ್ ಕಾರ್ಮಿಕರ ಯೂನಿಯನ್ ರಚಿಸಲ್ಪಟ್ಟಿತು, ಹೈದರಾಬಾದಿನ ಕಮ್ಯೂನಿಸ್ಟ್ ನಾಯಕ, ದಿವಂಗತ ಮಕ್‌ದೂಮ್ ಮೊಹಿಯುದ್ದೀನ್‌ರವರು ಈ ಯೂನಿಯನ್ನಿನ ಮೊದಲ ಅಧ್ಯಕ್ಷರೂ, ಗುಲ್ಬರ್ಗಾದ ಶ್ರೀನಿವಾಸ ಗುಡಿಯವರು ಇದರ ಮೊದಲ ಕಾರ್ಯದರ್ಶಿಗಳೂ ಆಗಿದ್ದರು. ೧೯೪೬ರಲ್ಲಿ ವೇತನ ಏರಿಕೆಗಾಗಿ ಯೂನಿಯನ್ನಿನ ನೇತೃತ್ವದಲ್ಲಿ ಒಂದು ತಿಂಗಳ ಕಾಲದ ಮುಷ್ಕರ ನಡೆಯಿತು. ಪೊಲೀಸ್ ದಬ್ಬಾಳಿಕೆಯಿಂದ ಮುಷ್ಕರವನ್ನು ಮುರಿಯಲು ಸರಕಾರ ಯತ್ನಿಸಿತು. ಹಲವು ಕಾರ್ಯಕರ್ತರು ಬಂಧಿಸಲ್ಪಟ್ಟರು. ಗುಡಿಯವರು ಭೂಗತರಾಗಬೇಕಾಯಿತು. ಆದರೂ ಕೊನೆಗೆ ಮುಷ್ಕರ ಯಶಸ್ವಿಯಾಯಿತು. ಇದೇ ವರ್ಷ ಶಹಾಬಾದಿನ ಸಿಮೆಂಟ್ ಕೆಲಸಗಾರರೂ ೧೨ ದಿನಗಳ ಮುಷ್ಕರ ಹೂಡಿ ತಮ್ಮ ಕೆಲವು ಕೇಳಿಕೆಗಳನ್ನು ಪಡೆಯುವುದರಲ್ಲಿ ಸಫಲರಾದರು.

**ಮಂಗಳೂರು**

ಕರ್ನಾಟಕದ ಇತರ ಕಡೆಗಳಲ್ಲಿ ಕಾರ್ಮಿಕ ಚಳವಳಿ ಹೀಗೆ ಮೆಲ್ಲಮೆಲ್ಲಗೆ ವ್ಯಾಪಿಸತೊಡಗಿದ್ದಾಗ, ಪಶ್ಚಿಮ ಕರಾವಳಿಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೪೭ರ ಹೊತ್ತಿಗೆ ಅದೊಂದು ಪ್ರಬಲವಾದ ಸಂಘಟಿತ ಶಕ್ತಿಯಾಗಿ ಬೆಳೆದುಬಂದಿತ್ತು. ರಾಜ್ಯದಲ್ಲಿ ಟ್ರೇಡ್ ಯೂನಿಯನ್ ಚಳವಳಿ ಕುಡಿಯೊಡೆದ ಎರಡು ಸ್ಥಳಗಳಲ್ಲಿ ಒಂದು ಬೆಂಗಳೂರಾಗಿದ್ದರೆ, ಇನ್ನೊಂದು ಮಂಗಳೂರಾಗಿತ್ತೆಂದು ಹಿಂದೆಯೇ ಹೇಳಲಾಗಿದೆ. ಬೆಂಗಳೂರಿನಂತೆ ಮಂಗಳೂರಿನಲ್ಲಿಯೂ ಸುಮಾರು ೧೯೩೫–೩೬ರಲ್ಲೇ ಕಾರ್ಮಿಕರು ಸಂಘಟನೆಯ ಹಾದಿ ಹಿಡಿಯಲಾರಂಭಿಸಿದ್ದರು. ಆದರೆ, ಬೆಂಗಳೂರಿನಲ್ಲಿ ಇಂತಹ ಸಂಘಟನೆಗೆ ಮೊದಲ ಪ್ರೇರಣೆ ಹೊರಗಿನಿಂದ ಮುಖ್ಯವಾಗಿ ಕಾಂಗ್ರೆಸ್ ಪಕ್ಷದಿಂದ ಬಂದಿದ್ದರೆ, ಮಂಗಳೂರಿನ ಕಾರ್ಮಿಕರು ಸ್ವಯಂಪ್ರೇರಣೆಯಿಂದ ತಾವೇ ಸಂಘಟನಾ ಕಾರ್ಯಕ್ಕೆ ಇಳಿದಿದ್ದರು. ಅಲ್ಲಿ ಹೆಚ್ಚಿನ ಯೂನಿಯನ್ನುಗಳು ಕೆಂಬಾವುಟವನ್ನು ಕೈಯಲ್ಲಿ ಹಿಡಿದುಕೊಂಡೇ ಹುಟ್ಟಿದ್ದವು. ಅಲ್ಲಿನ ಅನೇಕ ಟ್ರೇಡ್ ಯೂನಿಯನ್ ನಾಯಕರು ಕೂಡ ಕಾರ್ಮಿಕ ವರ್ಗದಿಂದಲೇ ಬಂದಿದ್ದರು. ಇಂದಿಗೂ ಸಹ ಇದು ಮಂಗಳೂರಿನ ಟ್ರೇಡ್ ಯೂನಿಯನ್ ಚಳವಳಿಯ ಒಂದು ವೈಶಿಷ್ಟ್ಯ.

ಇದಕ್ಕೆ ಕೇರಳದ ಸಾಮೀಪ್ಯವೂ ಒಂದು ಕಾರಣವಾಗಿದ್ದಿರಬಹುದು. ಕೇರಳದಲ್ಲಿ ೧೯೩೦ರಷ್ಟು ಹಿಂದೆಯೇ ಕಮ್ಯೂನಿಸ್ಟ್ ಮತ್ತು ಕಾರ್ಮಿಕ ಚಳವಳಿಗಳು ಬೇರೂರತೊಡಗಿ, ೧೯೩೫–೩೬ರೊಳಗೆ ಅವುಗಳು ಗಣನೀಯವಾಗಿ ಬೆಳೆದಿದ್ದವು. ಕೇರಳದ ಒಂದು ಭಾಗವಾದ ಮಲಬಾರ್ ಜಿಲ್ಲೆ ಅಂದು ಮದರಾಸ್ ಆಧಿಪತ್ಯಕ್ಕೇ ಸೇರಿದ್ದುದರಿಂದ ದಕ್ಷಿಣ ಕನ್ನಡ ಮತ್ತು ಮಲಬಾರ್‌ಗಳ ನಡುವೆ ನಿಕಟ ಸಂಪರ್ಕವಿತ್ತು. ಮಲಬಾರಿನಿಂದ ಉದ್ಯೋಗಾರ್ಥಿಗಳಾಗಿ ಅನೇಕ ಕಾರ್ಮಿಕರು ಮಂಗಳೂರಿಗೆ ಬರುತ್ತಿದ್ದರು. ಹಲವರು ಮಂಗಳೂರಲ್ಲಿ ನೆಲೆಸಿದ್ದರು. ಹೀಗಾಗಿ ಕೇರಳದ ಕಾರ್ಮಿಕ ಚಳವಳಿಯ ಗಾಳಿ ಮಂಗಳೂರಿಗೆ ಸ್ವಲ್ಪವಾದರೂ ಬೀಸಿದ್ದರೆ, ಅದರಲ್ಲಿ ಆಶ್ಚರ್ಯವಿಲ್ಲ.

**ಸಂಘಟನೆಗೆ ನಾಂದಿ : ಬೀಡಿ ಕಾರ್ಮಿಕರು**

ಅದೇನಿದ್ದರೂ ೧೯೩೫–೩೬ರಲ್ಲಿ ಮಂಗಳೂರಿನಲ್ಲಿ ಕಾರ್ಮಿಕ ಸಂಘಟನೆಗಳು ಹುಟ್ಟಲಾರಂಭಿಸಿದವು. ಅಂದು ಮಂಗಳೂರಿನಲ್ಲಿದ್ದ ಮುಖ್ಯ ಕೈಗಾರಿಕೆಗಳು ನಾಲ್ಕು : ಹಂಚು, ಬೀಡಿ, ನೇಯ್ಗೆ ಮತ್ತು ಗೇರುಬೀಜ. ಇವುಗಳಲ್ಲಿ ಮೊತ್ತಮೊದಲು ಸಂಘಟಿತರಾದವರು ಬೀಡಿ ಕೆಲಸಗಾರರು. ಸ್ವತಃ ಬೀಡಿ ಕಾರ್ಮಿಕರೂ, ಸಂಘಟನಾ ಕುಶಲರೂ ಆಗಿದ್ದ ಕೇಶವ ಕಾಮತ್, ಕೇರಳದಿಂದ ಉದ್ಯೋಗಾರ್ಥಿಯಾಗಿ ಬಂದು ಮಂಗಳೂರಿನಲ್ಲಿ ನೆಲೆಸಿ, ಬೀಡಿ ಕೈಗಾರಿಕೆಯಲ್ಲಿ ದುಡಿಯುತ್ತಿದ್ದ ಸಿ. ಕೆ. ಗೋವಿಂದನ್ ಮತ್ತು ಅಹಮದ್ ಬಾವ ಮೊದಲಾದ ಕಾರ್ಮಿಕರೇ ೧೯೩೬ರಲ್ಲಿ ಮಂಗಳೂರು ಬೀಡಿ ಕಾರ್ಮಿಕರ ಸಂಘವನ್ನು ಕಟ್ಟಿದರು. ಅದೇ ವರ್ಷ ಕಾಂಗ್ರೆಸ್ ಸೋಷಲಿಸ್ಟ್ ನಾಯಕಿ ಕಮಲಾದೇವಿ ಚಟ್ಟೋಪಾಧ್ಯಾಯರ ನೇತೃತ್ವದಲ್ಲಿ ಪ್ರೆಸ್ ಕಾರ್ಮಿಕರ ಒಂದು ಸಂಘಟನೆಯೂ ರಚಿಸಲ್ಪಟ್ಟಿತು.

**ನೇಕಾರರ ಸಂಘ**

ಇದರ ನಂತರ ಅಸ್ತಿತ್ವಕ್ಕೆ ಬಂದುದು ಕೈಮಗ್ಗದ ಕಾರ್ಮಿಕರ (ನೇಕಾರರ) ಸಂಘ. ಕೈಮಗ್ಗದ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದ ಈ ನೇಕಾರರಿಗೆ ಅಂದು ದೊರೆಯುತ್ತಿದ್ದ ಕೂಲಿ ಸರಾಸರಿ ೪ರಿಂದ ೬ ಆಣೆಗಳು (೨೫ರಿಂದ ೩೭ ಪೈಸೆ). ಕೈಮಗ್ಗದ ಬಟ್ಟೆಗಳ ಬೆಲೆ ಆಗ ಇಳಿಯಲಾರಂಭವಾಗಿದ್ದುದರಿಂದ ಇನ್ನಷ್ಟು ಕೂಲಿ ಕಡಿತ ಮತ್ತು ರಿಟ್ರೆಂಚ್‌ಮೆಂಟ್‌ಗಳ ಭಯ ಕಾರ್ಮಿಕರನ್ನು ಕಾಡುತ್ತಿತ್ತು. ಆದುದರಿಂದ ಇವುಗಳ ವಿರುದ್ಧ ಹೋರಾಡಲು ಸಿಂಪ್ಸನ್ ಸೋನ್ಸ್ ಮೊದಲಾದ ಕೆಲವು ಕೈಮಗ್ಗದ ಕಾರ್ಮಿಕರ ಪ್ರಯತ್ನದಿಂದಲೇ ೧೯೩೬ರಲ್ಲಿ ಈ ಸಂಘ ಜನ್ಮ ತಳೆಯಿತು. ಸ್ವತಃ ನೇಕಾರರಾಗಿದ್ದ ಜಾರಪ್ಪ ಎಂಬುವರು ಈ ಸಂಘದ ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ಸಿಂಪ್ಸನ್ ಸೋನ್ಸ್‌ರವರು ಕಾರ್ಯಕಾರೀ ಸಮಿತಿಯ ಸದಸ್ಯರಲ್ಲೊಬ್ಬರಾಗಿದ್ದರು. ಎಸ್. ಎನ್. ಹೊಳ್ಳರನ್ನು ಸಂಘದ ಅಧ್ಯಕ್ಷರನ್ನಾಗಿ ಆರಿಸಲಾಗಿತ್ತು. ಸಂಘ ಹುಟ್ಟಿದ ವರ್ಷವೇ ಕೂಲಿ ಕಡಿತದ ವಿರುದ್ಧ ೫ ವಾರಗಳ ಕಾಲದ ದೀರ್ಘ ಮುಷ್ಕರವನ್ನು ನಡೆಸಬೇಕಾಗಿ ಬಂತು. ಈ ಮುಷ್ಕರ ಕೊನೆಗೆ ಅಯಶಸ್ವಿಯಾದರೂ, ಇದರಿಂದ ಮುಂದಿನ ಹೋರಾಟಗಳಿಗೆ ಕಾರ್ಮಿಕರು ತಕ್ಕ ಪಾಠಗಳನ್ನು ಕಲಿತರು.

೧೯೪೦–೪೨ರಲ್ಲಿ ಎ. ಶಿವಶಂಕರರಾವ್, ಹರಿದಾಸ ಆಚಾರ್ಯ ಮತ್ತು ಬಿ. ವಿ. ಕಕ್ಕಿಲ್ಲಾಯ ಮೊದಲಾದ ಕೆಲವು ಯುವಕರು ವಿದ್ಯಾರ್ಥಿ ರಂಗದಿಂದ ಕಮ್ಯೂನಿಸ್ಟ್ ಪಕ್ಷಕ್ಕೆ ಕಾಲಿಟ್ಟು, ಬೆಳೆಯುತ್ತಿದ್ದ ಈ ಕಾರ್ಮಿಕ ಚಳವಳಿಗೆ ಧುಮುಕಿದರು.

**ಹಂಚಿನ ಕಾರ್ಮಿಕರ ಸಂಘ**

೧೯೪೨ರಲ್ಲಿ ಕಾಮನ್‌ವೆಲ್ತ್ ಹಂಚಿನ ಕಾರ್ಖಾನೆಯಲ್ಲಿ ಒಂದು ವಿವಾದವೆದ್ದು, ಅಲ್ಲಿನ ಕಾರ್ಮಿಕರು ಕಮ್ಯೂನಿಸ್ಟ್ ಪಕ್ಷದ ಬೆಂಬಲ ಕೋರಿದರು. ಪಕ್ಷದ ಪರವಾಗಿ ಕಕ್ಕಿಲ್ಲಾಯರು ಈ ಕಾರ್ಮಿಕರನ್ನು ಮುಷ್ಕರಕ್ಕೆ ಸಂಘಟಿಸಿದರು. ಎರಡು–ಮೂರು ದಿನಗಳ ಮುಷ್ಕರ ನಡೆದ ತರುವಾಯ ಕಾರ್ಖಾನೆಯ ಬ್ರಿಟಿಷ್ ಮಾಲೀಕರು ಕಕ್ಕಿಲ್ಲಾಯರನ್ನು ಸಂಧಾನಕ್ಕೆ ಕರೆದು ಕಾರ್ಮಿಕರ ಕೇಳಿಕೆಗಳಿಗೊಪ್ಪಿದರು.

ಮಂಗಳೂರಿನಲ್ಲಿ ಹಂಚಿನ ಕೈಗಾರಿಕೆಯೇ ಅತಿ ದೊಡ್ಡದು. ಇದು ಸುಮಾರು ೬–೭ ಸಾವಿರ ಕೆಲಸಗಾರರು ದುಡಿಯುವ ಕೈಗಾರಿಕೆ. ಯುದ್ಧದಿಂದಾಗಿ ಹಂಚಿನ ಕೈಗಾರಿಕೆಯ ಲಾಭ ಅಂದು ಗಗನಕ್ಕೇರತೊಡಗಿದ್ದರೂ, ಈ ಕಾರ್ಮಿಕರ ಸ್ಥಿತಿ ಮಾತ್ರ ಅತ್ಯಂತ ಶೋಚನೀಯವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಕಾಮನ್‌ವೆಲ್ತ್ ಕೆಲಸಗಾರರ ವಿಜಯದಿಂದ ಉಳಿದ ಹಂಚಿನ ಕಾರ್ಮಿಕರಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಕಕ್ಕಿಲ್ಲಾಯ, ಸೋನ್ಸ್ ಮುಂತಾದವರು ಕಾರ್ಖಾನೆ ಗೇಟುಗಳ ಮುಂದೆ ನಿಂತು ಅವರ ಮಧ್ಯೆ ಕೆಲಸ ಮಾಡಿದರು. ಇದರ ಫಲವಾಗಿ ೧೯೪೨ರ ಕೊನೆಯೊಳಗೆ ಮಂಗಳೂರು ಹಂಚಿನ ಕೆಲಸಗಾರರ ಸಂಘ ಸ್ಥಾಪಿಸಲ್ಪಟ್ಟು, ಬೋಳಾರದ ಎಮ್ಮೆಕೆರೆ ರಸ್ತೆಯಲ್ಲಿ ಇದಕ್ಕೊಂದು ಪ್ರತ್ಯೇಕ ಆಫೀಸೂ ತೆರೆಯಲ್ಪಟ್ಟಿತು. ಸೋನ್ಸ್ ಮತ್ತು ಕಕ್ಕಿಲ್ಲಾಯರು ಇದರ ಪ್ರಥಮ ಅಧ್ಯಕ್ಷ ಹಾಗೂ ಕಾರ್ಯದರ್ಶಿಗಳಾಗಿದ್ದರು.

**ಇತರ ಸಂಘಟನೆಗಳು**

ಇದೇ ಸಮಯದಲ್ಲಿ ಮಂಗಳೂರಿನ ಕಾರ್ಮಿಕ ಚಳವಳಿ ಇನ್ನೊಬ್ಬ ಉತ್ಸಾಹೀ ತರುಣನನ್ನೂ ಪಡೆಯಿತು. ಅವರೇ ದಿವಂಗತ ಶಾಂತಾರಾಮ ಪೈ. ಮುಂಬಯಿಯಲ್ಲಿ ಕಮ್ಯೂನಿಸ್ಟ್ ಪಕ್ಷದ ಪೂರ್ಣಕಾಲ ಕಾರ್ಯಕರ್ತರಾಗಿದ್ದ ಅವರು ೧೯೪೨ರ ಅಂತ್ಯದಲ್ಲಿ ತಮ್ಮ ಹುಟ್ಟೂರಾದ ಮಂಗಳೂರಿಗೆ ಮರಳಿದರು. ಅವರು ಬಂದಮೇಲೆ ಕಾರ್ಮಿಕ ಚಳವಳಿ ಮತ್ತಷ್ಟು ಭರದಿಂದ ಬೆಳೆಯಿತು. ಹಂಚಿನ ಕಾರ್ಮಿಕರ ಸಂಘ ಹೊಸ ಕಾರ್ಖಾನೆಗಳಿಗೆ ವಿಸ್ತರಿಸಿತು. ೧೯೪೩ರಲ್ಲಿ ಶಾಂತಾರಾಮ ಪೈ ಮತ್ತು ಬಿ. ಲಿಂಗಪ್ಪ ಸುವರ್ಣರ ನಾಯಕತ್ವದಲ್ಲಿ ಗೇರುಬೀಜ ಕಾರ್ಮಿಕರ ಸಂಘ ಸ್ಥಾಪಿಸಲ್ಪಟ್ಟಿತು. ಬೀಡಿ ಕೆಲಸಗಾರರಾಗಿದ್ದು, ಆ ತನಕ ಬೀಡಿ ಕಾರ್ಮಿಕರ ಸಂಘದ ಕಾರ್ಯಕರ್ತರಲ್ಲೊಬ್ಬರಾಗಿದ್ದ ಲಿಂಗಪ್ಪ ಸುವರ್ಣರೇ ಮುಂದೆ ಕೆಲವು ವರ್ಷಗಳ ಕಾಲ ಗೇರುಬೀಜ ಕಾರ್ಮಿಕರ ಸಂಘದ ಕಾರ್ಯದರ್ಶಿಗಳಾಗಿದ್ದರು. ಹೀಗೆ ಬೆಳೆಯುತ್ತಿದ್ದ ಈ ಕಾರ್ಮಿಕ ಚಳವಳಿಗೆ

ಕೇಂದ್ರೀಯ ನಿರ್ದೇಶನ ನೀಡಲು ೧೯೪೩ರ ಕೊನೆಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಟ್ರೇಡ್ ಯೂನಿಯನ್ ಕೌನ್ಸಿಲ್ ರಚಿಸಲ್ಪಟ್ಟು ಡಿಸೆಂಬರ್ ೧೯೪೩ರಲ್ಲಿ ಅದರ ಪ್ರಥಮ ಸಮ್ಮೇಳನ ನಡೆಯಿತು. ಭಾರತದ ಟ್ರೇಡ್ ಯೂನಿಯನ್ ಚಳವಳಿಯ ಅಗ್ರಗಣ್ಯ ನಾಯಕರಲ್ಲೊಬ್ಬರಾದ ಎಸ್. ವಿ. ಡಾಂಗೆಯವರು ಈ ಸಮ್ಮೇಳನವನ್ನು ಉದ್ಘಾಟಿಸಿದ್ದರು. ೧೯೪೫ರಲ್ಲಿ, ಸುಮಾರು ೫ ವರ್ಷಗಳ ಕಾಲದ ಸ್ಥಾನಬದ್ಧತೆಯಿಂದ ಬಿಡುಗಡೆಯಾಗಿ ಬಂದ ಎಸ್. ಎನ್. ಹೊಳ್ಳರು ಕಮ್ಯೂನಿಸ್ಟ್ ಪಕ್ಷವನ್ನು ಸೇರಿದುದು ಜಿಲ್ಲೆಯ ಕಾರ್ಮಿಕ ಚಳವಳಿಗೆ ಹೊಸ ಸ್ಫೂರ್ತಿಯನ್ನು ನೀಡಿತು. ದಿವಂಗತ ಎ. ಕೃಷ್ಣಶೆಟ್ಟರು ಇದಕ್ಕಿಂತ ಸ್ವಲ್ಪ ಹಿಂದೆಯೇ ಈ ಚಳವಳಿಯಲ್ಲಿ ಪಾಲ್ಗೊಳ್ಳಲಾರಂಭಿಸಿದ್ದರು. ೧೯೪೪ ಅಥವಾ ೪೫ರಲ್ಲಿ, ಆಗ ಶೀಘ್ರವಾಗಿ ವಿಸ್ತರಣೆ ಹೊಂದುತ್ತಿದ್ದ ಹಂಚಿನ ಕೆಲಸಗಾರರ ಸಂಘದ ಅಧ್ಯಕ್ಷರನ್ನಾಗಿ ಅವರನ್ನು ಆರಿಸಲಾಯಿತು. ೧೯೪೬ರಲ್ಲಿ, ಸ್ವತಃ ಬೀಡಿ ಕೆಲಸಗಾರರೂ, ಬೀಡಿ ಕಾರ್ಮಿಕರ ಸಂಘದ ಪ್ರಮುಖ ನಾಯಕರಲ್ಲೊಬ್ಬರೂ ಆಗಿದ್ದ ಕೆ. ಮೋನಪ್ಪ ಶೆಟ್ಟಿ ಮೊದಲಾದವರ ಪ್ರಯತ್ನದಿಂದ ಮುನಿಸಿಪಲ್ ಕಾರ್ಮಿಕರ ಸಂಘ ಸ್ಥಾಪನೆಯಾಯಿತು. ೧೯೪೭ರ ಕೊನೆಯ ಭಾಗದಲ್ಲಿ ಹೊಳ್ಳರ ಪರಿಶ್ರಮದ ಫಲವಾಗಿ ಬಂದರ ಕಾರ್ಮಿಕರ ಸಂಘ ರಚಿಸಲ್ಪಟ್ಟು, ಈ ಕೆಲಸಗಾರರ ಕೂಲಿಯ ಮಟ್ಟವನ್ನು ಏರಿಸುವುದರಲ್ಲಿ ಅದು ಯಶಸ್ವಿಯಾಯಿತು. ಬಂದರ ಕೆಲಸಗಾರರಲ್ಲೊಬ್ಬರಾಗಿದ್ದ ಸಂಕಪ್ಪ ಎಂಬುವರು ಈ ಸಂಘದ ಕಾರ್ಯದರ್ಶಿಗಳಾಗಿದ್ದರು. ರಾಜಾಜಿಯವರ ಪಾನನಿರೋಧ ಧೋರಣೆಯಿಂದ ತಮ್ಮ ಪರಂಪರಾಗತ ವೃತ್ತಿಯನ್ನು ಕಳೆದುಕೊಳ್ಳಲಿದ್ದ ಜಿಲ್ಲೆಯ ಮುರ್ತೆದಾರರ ಒಂದು ಸಂಘವೂ ಅದೇ ವರ್ಷ ಅಸ್ತಿತ್ವಕ್ಕೆ ಬಂದು ಅವರದೊಂದು ದೊಡ್ಡ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ ಕಕ್ಕಿಲ್ಲಾಯ ಮತ್ತು ಹೊಳ್ಳರು ಪ್ರಧಾನಪಾತ್ರ ವಹಿಸಿದ್ದರು.

ಮಂಗಳೂರಿನಲ್ಲಿ ಪ್ರಾರಂಭವಾದ ಈ ಕಾರ್ಮಿಕ ಚಳವಳಿ ಶೀಘ್ರದಲ್ಲಿಯೇ ಉಡುಪಿ, ಕುಂದಾಪುರ, ಬಂಟ್ವಾಳ ಮೊದಲಾದ ಜಿಲ್ಲೆಯ ಇತರ ಕೇಂದ್ರಗಳಿಗೂ ಹರಡಿ, ಅಲ್ಲಿಯೂ ಬೀಡಿ, ನೇಯ್ಗೆ ಮತ್ತು ಹಂಚಿನ ಕೆಲಸಗಾರರ ಯೂನಿಯನ್ನುಗಳು ಹುಟ್ಟಿಕೊಂಡವು.

**ಪ್ರಥಮ ಮುಷ್ಕರ**

ದಕ್ಷಿಣ ಕನ್ನಡ ಜಿಲ್ಲೆಯ ಈ ಕಾರ್ಮಿಕ ಸಂಘಟನೆಗಳು ತಮ್ಮ ಹುಟ್ಟಿನಿಂದಲೇ ಹೋರಾಟದಲ್ಲಿ ಬೆಳೆದುಬಂದ ಸಂಘಟನೆಗಳು. ೧೯೩೬ರಿಂದ ೧೯೪೭ರ ತನಕ ಮಂಗಳೂರಿನಲ್ಲಿ ನಡೆದ ವಿವಿಧ ಮುಷ್ಕರಗಳಿಗೆ ಲೆಕ್ಕವಿಲ್ಲ. ಆದರೆ, ಜಿಲ್ಲೆಯ ಇತಿಹಾಸದಲ್ಲಿ ಮೊದಲ ಮುಷ್ಕರವನ್ನು ನಡೆಸಿದ ಶ್ರೇಯಸ್ಸು ಆಗ ಅಸಂಘಟಿತ ರಾಗಿದ್ದ ಮಿಜಾರು ಗೇರುಬೀಜ ಕಾರ್ಖಾನೆಯ ಮಹಿಳಾ ಕಾರ್ಮಿಕರಿಗೆ ಸಲ್ಲಬೇಕು. ಇದು ನಡೆದುದು ೧೯೩೬ರಲ್ಲಿ. ಕಾಂಗ್ರೆಸ್ ಸೋಷಲಿಸ್ಟ್ ಪಕ್ಷದ ನಾಯಕಿ ಕಮಲಾದೇವಿ ಚಟ್ಟೋಪಾಧ್ಯಾಯರು ಇದರ ಮುಂದಾಳತ್ವ ವಹಿಸಿದ್ದರು. ಇದಕ್ಕೆ ಮಾರ್ಗದರ್ಶನ ನೀಡಲು ಕೇರಳದ ಕಮ್ಯೂನಿಸ್ಟ್ ಮುಖಂಡ ಎಚ್. ಮಂಜುನಾಥರಾಯರೂ ಆಗ ಮಂಗಳೂರಿಗೆ ಬಂದಿದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಮಿಕರ ಈ ಪ್ರಥಮ ಮುಷ್ಕರ, ಗೇರುಬೀಜ ಸಿಪ್ಪೆಯನ್ನು ಕೈ ಉಗುರಿನಿಂದ ಸುಲಿಯುವ ಕ್ರಮವನ್ನು ಬದಲಿಸಬೇಕೆಂಬ ಕೇಳಿಕೆಯ ಮೇಲೆ ನಡೆದಿತ್ತು (ಸಿಂಪ್ಸನ್ ಸೋನ್ಸ್: ಅರುಣ ವಾರಪತ್ರಿಕೆ, ೨೮.೧೨.೧೯೭೫). ಆದರೆ, ಈ ಮುಷ್ಕರದಿಂದ ಮಾತ್ರ ಯಾವುದೇ ಸಂಘಟನೆ ಅಂದು ಮೂಡಿಬರಲಿಲ್ಲ. ಗೇರುಬೀಜ ಕಾರ್ಮಿಕರ ಸ್ಥಿರ ಸಂಘಟನೆ ತಲೆದೋರಿದುದು ೭ ವರ್ಷಗಳ ನಂತರವೆಂಬುದನ್ನು ಈಗಾಗಲೇ ವಿವರಿಸಲಾಗಿದೆ.

**ಹೋರಾಟಗಳ ಅಲೆ**

ತರುವಾಯ ೧೯೩೭ರಲ್ಲಿ, ನಾವು ಹಿಂದೆ ನೋಡಿದಂತೆ ೫ ವಾರಗಳ ಕಾಲದ ನೇಕಾರರ ಮುಷ್ಕರ ನಡೆಯಿತು. ೧೯೪೦ರಲ್ಲಿ ಪೊಲೀಸರ ತೀವ್ರ ಮರ್ದನವನ್ನಿದಿರಿಸಿ ನೇಕಾರರು ಪುನಃ ೬೦ ದಿನಗಳ ಮುಷ್ಕರ ಹೂಡಿದರು. ೧೯೪೨ರಲ್ಲಿ ಜೆ. ಸಿ. ಸಿಕ್ವೇರ ಬ್ರದರ್ಸ್ ಕಾರ್ಖಾನೆಯ ಕೆಲಸಗಾರರು ಎರಡು ತಿಂಗಳುಗಳ ಮುಷ್ಕರ ನಡೆಸಿದರು. ಈ ಮುಷ್ಕರದಲ್ಲಿ ಮಾಲೀಕರ ಗೂಂಡಾಗಳಿಗೂ ಕಾರ್ಮಿಕರಿಗೂ ತೀವ್ರ ಘರ್ಷಣೆ ನಡೆದಿತ್ತು. ಇದರ ಪರಿಣಾಮವಾಗಿ ಮುಷ್ಕರಗಾರರಿಗೆ ಏರ್ಪಡಿಸಲಾಗಿದ್ದ ಗಂಜಿ ಕೇಂದ್ರದ ಮೇಲೆ ಪೊಲೀಸರು ದಾಳಿ ಮಾಡಿ, ಗಂಜಿ ಕೇಂದ್ರವನ್ನು ಧ್ವಂಸ ಮಾಡಿದ್ದುದಲ್ಲದೆ, ಕಾರ್ಮಿಕರಿಗೆ ಬಲವಾಗಿ ಹೊಡೆದು, ೯ ಮಂದಿ ಕಾರ್ಯಕರ್ತರ ಮೇಲೆ ಖಟ್ಲೆ ಹೂಡಿದ್ದರು. ಇವರಿಗೆ ತಲಾ ೬ ತಿಂಗಳ ಶಿಕ್ಷೆ ವಿಧಿಸಲಾಗಿತ್ತು (ಸಿಂಪ್ಸನ್ ಸೋನ್ಸ್ : ಅರುಣ, ೨೮.೧೨.೧೯೭೫). ೧೯೪೪ರಲ್ಲಿ ಹಂಚಿನ ಕಾರ್ಮಿಕರ ೫ ದಿನಗಳ ಪ್ರಪ್ರಥಮ ಸಾರ್ವತ್ರಿಕ ಮುಷ್ಕರ ಯಶಸ್ವಿಯಾಗಿ ನಡೆದು ಮೂರು ತಿಂಗಳುಗಳ ಬೋನಸ್ಸಿನ ಬೇಡಿಕೆ ಈಡೇರಿತು. ೧೯೪೫ರಲ್ಲಿ ಬೀಡಿ ಕಾರ್ಮಿಕರು ೫೬ ದಿನಗಳ ಸಾರ್ವತ್ರಿಕ ಮುಷ್ಕರ ನಡೆಸಿದರು. ಅದೇ ವರ್ಷ ನೇಯ್ಗೆ ಕಾರ್ಮಿಕರ ಇನ್ನೊಂದು ದೊಡ್ಡ ಮುಷ್ಕರವೂ ನಡೆಯಿತು. ಜನವರಿ ೧೯೪೭ರಲ್ಲಿ ಕಕ್ಕಿಲ್ಲಾಯ, ಹೊಳ್ಳ, ಶಾಂತಾರಾಮ ಪೈ ಮೊದಲಾದ ಮುಖ್ಯ ನಾಯಕರನ್ನೆಲ್ಲ ಸರಕಾರ ಬಂಧಿಸಿ, ಆಗಸ್ಟ್ ತನಕ ಸ್ಥಾನಬದ್ಧತೆಯಲ್ಲಿಟ್ಟಿತು. ಇಂತಹ ಪರಿಸ್ಥಿತಿಯಲ್ಲಿ ಕೂಡ ಹಂಚಿನ ಕೆಲಸಗಾರರು ಸುದೀರ್ಘ ಮುಷ್ಕರ ಹೂಡಿ, ಬೆಲೆ ಏರಿಕೆಯ ಸೂಚ್ಯಂಕಕ್ಕೆ ಅನುಗುಣವಾದ ತುಟ್ಟಿಭತ್ಯೆ ನೀಡಬೇಕೆಂಬ ತಮ್ಮ ಕೇಳಿಕೆಯನ್ನು ಪಡೆದರು. ಈ ವಿವಾದವನ್ನು ಪರಿಹರಿಸಲು ಮಧ್ಯಸ್ತಿಕೆ ವಹಿಸಿದ ಆಗಿನ ಜಿಲ್ಲಾ ಕಲೆಕ್ಟರ್ ಸಾಂಡರ್ಸ್‌ರವರ ಮುಂದೆ ಕಾರ್ಮಿಕರ ಪರವಾಗಿ ವಾದಿಸಿ, ಜಯಗಳಿಸಿದ ಕೀರ್ತಿ ಈಗ ಬೆಳಗಾವಿಯಲ್ಲಿರುವ ವಕೀಲ ಆರ್. ಆರ್. ತಲಚೇರ್ಕರ್ ಅವರಿಗೆ ಸಲ್ಲಬೇಕು. ಈ ಮಧ್ಯೆ ಬೀಡಿ ಮತ್ತು ಗೇರುಬೀಜ ಕೈಗಾರಿಕೆಗಳಲ್ಲಿ ಆಗಾಗ ಮಿಂಚಿನ ಮುಷ್ಕರಗಳು ನಡೆಯುತ್ತಿದ್ದವು.

ಸಂಘಟನೆಯ ಈ ಮೊದಲ ಕಾಲದಲ್ಲಿ ಮಾಲಕರ ತೀವ್ರ ಗೂಂಡಾಗಿರಿಯನ್ನು ಕಾರ್ಮಿಕರು ಇದಿರಿಸಬೇಕಾಗಿತ್ತು. ಯೂನಿಯನ್ನನ್ನು ಮುರಿಯಲು ಅಥವಾ ಕಾರ್ಮಿಕರು ಯೂನಿಯನ್ನಿಗೆ ಸೇರದಂತೆ ತಡೆಹಿಡಿಯಲು ಮಾಲೀಕರು ಹಿಂಸಾ ಪ್ರಯೋಗಕ್ಕೂ ಹೇಸುತ್ತಿರಲಿಲ್ಲ. ಮುಷ್ಕರಗಳ ಕಾಲದಲ್ಲಂತೂ ಯೂನಿಯನ್ ಕಾರ್ಯಕರ್ತರ ಮೇಲೆ ದಾಳಿ ಮತ್ತು ಹೊಡೆತ ಬಡಿತಗಳು ಸಾಮಾನ್ಯವಾಗಿದ್ದವು. ಆದರೆ ಕೊನೆಗೆ, "ಏನೇ ಬರಲಿ, ಪೆಟ್ಟಿಗೆ ಪೆಟ್ಟು" ಎಂಬ ಧೋರಣೆಯನ್ನನುಸರಿಸಿ, ಗೂಂಡಾಗಳ ಹಿಂಸೆಯನ್ನು ಕಾರ್ಮಿಕರು ಪ್ರತಿಹಿಂಸೆಯಿಂದ ಇದಿರಿಸತೊಡಗಿದ ನಂತರ, ಮಂಗಳೂರಿನ ಕೈಗಾರಿಕಾ ರಂಗದಲ್ಲಿ ಈ ಗೂಂಡಾಗಿರಿ ಹೇಳ ಹೆಸರಿಲ್ಲದೆ ಮಾಯವಾಯಿತು. ಗೂಂಡಾಗಿರಿಯ ವಿರುದ್ಧ ನಡೆದ ಈ ಹೋರಾಟಗಳಲ್ಲಿ ಅನೇಕ ಕಾರ್ಮಿಕರು ತುಂಬ ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಗಿ ಬಂದರೂ, ಗೂಂಡಾಗಿರಿಯನ್ನು ಹೀಗೆ ನಾಶ ಮಾಡದಿರುತ್ತಿದ್ದರೆ, ಟ್ರೇಡ್ ಯೂನಿಯನ್ ಚಳವಳಿ ಅಷ್ಟು ಶೀಘ್ರವಾಗಿ ಮಂಗಳೂರಿನಲ್ಲಿ ಬೆಳೆಯುತ್ತಿರಲಿಲ್ಲ.

**ರಾಜಕೀಯ ಪರಂಪರೆ**

ಈ ಅವಧಿಯಲ್ಲಿ ಮಂಗಳೂರಿನ ಕಾರ್ಮಿಕರು ಸ್ಥಾಪಿಸಿದ ಇನ್ನೊಂದು ಪರಂಪರೆ, ಮೇ ದಿನಾಚರಣೆ ಮತ್ತು ಅಕ್ಟೋಬರ್ ಕ್ರಾಂತಿ ದಿನಾಚರಣೆ. ಈ ಎರಡು ಸಂದರ್ಭಗಳಲ್ಲಿ ಪ್ರತಿ ವರ್ಷವೂ ಮೈಲುದ್ದದ ಮೆರವಣಿಗೆಗಳು ಮತ್ತು ಬೃಹತ್ ಸಭೆಗಳು ನಡೆಯುತ್ತಿದ್ದು, ಅವುಗಳು ಕಾರ್ಮಿಕರಿಗೆ ನಿಜವಾಗಿಯೂ ಹಬ್ಬದ ದಿನಗಳಾಗಿದ್ದುದಲ್ಲದೆ ರಾಜಕೀಯ ಶಿಕ್ಷಣ ಪಡೆಯುವ ಸಾಧನಗಳೂ ಆಗಿದ್ದವು. ಈ ಪರಂಪರೆಯನ್ನು ಮಂಗಳೂರಿನ ಕಾರ್ಮಿಕ ವರ್ಗ ಇಂದಿಗೂ ಉಳಿಸಿಕೊಂಡು ಬಂದಿದೆ.

***(ಮುಂದುವರಿಯುವುದು)***



# ಸಾಮಾಜಿಕ ನ್ಯಾಯವೆಂಬ ಮರೀಚಿಕೆ ವಾಸ್ತವ ಹಾಗೂ ಭ್ರಮೆ

'ಸಾಮಾಜಿಕ ನ್ಯಾಯ ನಮ್ಮ ಆದ್ಯತೆ', 'ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುತ್ತಿದ್ದೇವೆ', 'ಸಾಮಾಜಿಕ ನ್ಯಾಯವನ್ನು ಸಾಧಿಸಲಾಗಿದೆ' – ಇವೇ ಮುಂತಾದ ರಾಜಕೀಯ ಪ್ರೇರಿತ ಮಾತುಗಳು ವರ್ತಮಾನದ ಸಂದರ್ಭದಲ್ಲಿ ಸಾಮಾನ್ಯವಾಗಿಬಿಟ್ಟಿವೆ. ಭರವಸೆಗಳನ್ನು ನೀಡುವ ನಿಟ್ಟಿನಲ್ಲಿ ತಮ್ಮ ತಾತ್ಕಾಲಿಕ ಬದ್ಧತೆಯನ್ನು ಪ್ರದರ್ಶಿಸುವ ಕೆಲಸ ಅಧಿಕಾರ ವಲಯದಲ್ಲಿ ನಡೆಸುತ್ತಲೇ ಇರುತ್ತದೆ. ಸಾಮಾಜಿಕ ನ್ಯಾಯದ ಪ್ರಶ್ನೆ ಯಾಕಾಗಿ ಹುಟ್ಟಿಕೊಳ್ಳುತ್ತದೆ ಹಾಗೂ ಅದಕ್ಕೆ ಕಾರಣವಾಗುವ ಅಂಶಗಳು ಯಾವುವು ಎನ್ನುವ ಮೂಲಭೂತ ಪ್ರಶ್ನೆಗಳ ಕಡೆಗೆ ಇವರ್‍ಯಾರೂ ಉತ್ಸುಕರಾಗಿರುವುದಿಲ್ಲ. ಇದೊಂದು ರಾಜಕೀಯ ದಾಳವಾಗಿ ಬಳಕೆಯಾಗಲಾರಂಭಿಸಿದೆ. ಅಕಡೆಮಿಕ್ ವಲಯಗಳಲ್ಲಿ ಸಾಮಾಜಿಕ ನ್ಯಾಯ ಎನ್ನುವುದು ಸಂಶೋಧನೆಯ ಭಾಗವಾಗಿದ್ದರೂ, ಕೇವಲ ಥಿಯರಿಗಳಿಗಷ್ಟೆ ಸರಕಾಗಿದೆ. ಸಮಾಜಮುಖಿ ಎನ್ನುವ ಸೋಗಿನಲ್ಲಿ ನಡೆಯುವ ಬಹುತೇಕ ಅಧ್ಯಯನಗಳು ಸಮಾಜಕ್ಕೆ ಬೆನ್ನು ಮಾಡಿರುವುದು ಕಣ್ಣಿಗೆ ರಾಚುವಂತಿದೆ. ಇನ್ನು ಮಾರುಕಟ್ಟೆ ಕೇಂದ್ರಿತವಾದ ಅಭಿವೃದ್ಧಿ ಪರಿಕಲ್ಪನೆಯಲ್ಲಿ ಸಾಮಾಜಿಕ ನ್ಯಾಯದ ಪ್ರಶ್ನೆಯನ್ನು ನೋಡುವುದಾದರೆ ಅದು ಲಾಭ–ನಷ್ಟದ ಲೆಕ್ಕಾಚಾರದಲ್ಲಿ ಮುಳುಗಿಹೋಗಿದೆ.

**ಡಾ॥ ಕೆ. ಮೋಹನ್‌ಕೃಷ್ಣ ರೈ**

ಎಲೀಟ್ ಶಕ್ತಿಗಳು ಚರಿತ್ರೆಯುದ್ದಕ್ಕೂ ಹುಟ್ಟು ಹಾಕಿದ ದರ್ಪಿಷ್ಠ ವ್ಯವಸ್ಥೆಗಳು ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂತರಗಳ ಸೃಷ್ಟಿಗೆ ಕಾರಣವಾಗಿ ಬಡವ–ಧನಿಕ, ಬಿಳಿಯ–ಕರಿಯ, ಸಾಂಪ್ರದಾಯಿಕ–ಆಧುನಿಕ, ಶಿಷ್ಟ–ಪರಿಶಿಷ್ಟ ಮುಂತಾದ ವಿಂಗಡಣೆಗಳುಳ್ಳ ಶ್ರೇಣೀಕೃತ ಸಮಾಜ ಪ್ರತಿಹಂತದಲ್ಲೂ ಹೊಸ ವಿನ್ಯಾಸದೊಂದಿಗೆ ರಚನೆಗೊಳ್ಳುತ್ತಾ ಹೋಯಿತು. ವೃತ್ತಿಯಾಧಾರಿತ ಅಥವಾ ಜಾತಿಯಾಧಾರಿತ ಸಾಮಾಜಿಕ ರಚನೆಯಲ್ಲಿ ಅವಲಂಬನೆ, ಗುಲಾಮಗಿರಿ, ದಾಸ್ಯರೂಪಿ ಸಂಬಂಧಗಳು ಹಾಗೂ ಮೇಲು–ಕೀಳು ಭಾವನೆಗಳು ಅಧಿಕೃತಗೊಳ್ಳುತ್ತಾ ಸಾಮಾಜಿಕ ಒಪ್ಪಿಗೆಯನ್ನು ಪಡೆಯುವಲ್ಲಿಯೂ ಯಶಸ್ವಿಯಾದವು. ಇಲ್ಲಿ ಸಾಮಾಜಿಕ ಒಪ್ಪಿಗೆಯೆಂದರೆ ಸಮಾಜ ಈ ಎಲ್ಲ ಅನಿಷ್ಟಗಳನ್ನು ಒಪ್ಪಿಕೊಂಡು ಸಮ್ಮತಿ ಸೂಚಿಸಿದೆ ಎಂದಲ್ಲ. ಸಮಾಜವನ್ನು ಲೌಕಿಕ ಹಾಗೂ ಅಲೌಕಿಕ ದರ್ಪ ಹಾಗೂ ಆಮಿಶಗಳಿಂದ ಬಂಧಿಯಾಗಿಸಿ ಒಪ್ಪಿಗೆ ನೀಡುವಂತೆ ಮಾಡಲಾಯಿತು. ಈ ಪ್ರಕ್ರಿಯೆಯಲ್ಲಿ ಪುರೋಹಿತಶಾಹಿ ವ್ಯವಸ್ಥೆ ಮಾತ್ರವಲ್ಲದೆ ಬ್ರಾಹ್ಮಣೇತರ ಮೇಲ್ಜಾತಿಯ ಜನರು ನೇರವಾಗಿ ಭಾಗಿಯಾದರು. ಪ್ರಭುತ್ವದೊಂದಿಗೆ ಅಧಿಕಾರವನ್ನು ಹಂಚಿಕೊಂಡಿದ್ದ ಶ್ರೀಮಂತ ಜಮೀನ್ದಾರರು ತಮ್ಮ ದರ್ಪ ಹಾಗೂ ದಬ್ಬಾಳಿಕೆ ಯಿಂದ ಸಮಾಜದ ಅಲಕ್ಷಿತ ಜನಸಮುದಾಯ ಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳುವಲ್ಲಿ ಯಶಸ್ವಿಯಾದರು. ಪುರೋಹಿತಶಾಹಿ ವ್ಯವಸ್ಥೆ, ಶೂದ್ರ ಮೇಲ್ಜಾತಿಗಳು ಹಾಗೂ ಬ್ರಾಹ್ಮಣೀಕರಿಸಲ್ಪಟ್ಟ ಜಾತಿಗಳೆಲ್ಲವೂ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ದಾಸ್ಯರೂಪಿ ಸಂಬಂಧಗಳನ್ನು ಬೆಳೆಸಿದವು.

ಸಮಾಜ ಇರುವುದೇ ಹೀಗೆ ಅಥವಾ ಸಮಾಜ ಇದೇ ರೀತಿ ಇರಬೇಕು ಎನ್ನುವ ಪ್ರಭುತ್ವದ ಅಥವಾ ಅಧಿಕಾರ ವಲಯದ ಕಾನೂನುಗಳು ಹಾಗೂ ಧೋರಣೆಗಳು ಅಧಿಕಾರಯುತವಾಗಿಯೇ ಅನುಷ್ಠಾನ ಗೊಳ್ಳಲಾರಂಭಿಸಿದವು. ಹಾಗಾಗಿ ಇಂದು ಸಾಮಾಜಿಕ ಅನಿಷ್ಟಗಳೆಂದು ಗುರುತಿಸಲ್ಪಡುವ ವ್ಯವಸ್ಥೆಗಳೆಲ್ಲವೂ ಸಾಂಸ್ಥಿಕ ರೂಪವನ್ನು ಪಡೆದುಕೊಳ್ಳುವಂತಾಯಿತು. ಪುರೋಹಿತಶಾಹಿಯ ಅಲೌಕಿಕ ಜಗತ್ತಿನ ಯಜಮಾನಿಕೆ ಹಾಗೂ ರಾಜಶಾಹಿಯ ಲೌಕಿಕ ಜಗತ್ತಿನ ಯಜಮಾನಿಕೆ ಜನಸಾಮಾನ್ಯರನ್ನು ತಬ್ಬಿಬ್ಬುಗೊಳಿಸಿ ಬದುಕಿನ

ಸ್ವಾತಂತ್ರ್ಯವನ್ನು ಅನುಭವಿಸದಂತೆ ಮಾಡಿದವು. ಇವೆರಡು ವ್ಯವಸ್ಥೆಗಳ ನಡುವಿನ ಸಹಕಾರ ಹಾಗೂ ಸಹಭಾಗಿತ್ವ ಸಾಮಾಜಿಕ ಅಂತರಗಳನ್ನು ಯಥಾಸ್ಥಿತಿಯಲ್ಲಿ ಮುಂದುವರಿಯುವಂತೆ ಮಾಡಿತು. ಸಾಮಾಜಿಕ ಒಳಗೊಳ್ಳುವಿಕೆಗೆ ಅವಕಾಶ ಕಲ್ಪಿಸದ ಅಧಿಕಾರ ರಾಜಕಾರಣ ಚರಿತ್ರೆಯ ಪ್ರತಿಯೊಂದು ಅವಧಿಯಲ್ಲಿಯೂ ಅತ್ಯಂತ ಬಿಗಿಯಾಗಿಯೇ ಇತ್ತು. ಇದರಿಂದಾಗಿ ಸಮಾಜದ ಕೆಳಸ್ತರದ ಜನಸಮುದಾಯಗಳು ತಮ್ಮ ಹಕ್ಕುಗಳನ್ನು ಚಲಾಯಿಸಲು ಸಾಧ್ಯವಾಗದೆ ಮುಖ್ಯವಾಹಿನಿಯಿಂದ ಹೊರಗುಳಿಯಬೇಕಾಯಿತು. ಇದರಿಂದಾಗಿ ಎಲೀಟ್ ಸಮುದಾಯಗಳ ತೀರ್ಮಾನವೇ ಅಂತಿಮವಾಗಿ, ಅವರು ಸಾರುವ ಸತ್ಯವೇ ಅಂತಿಮ ಸತ್ಯವೆಂದು ಘೋಷಿಸಲ್ಪಟ್ಟಿತು. ಸಮಾಜದ ಕೆಳಸ್ತರದ ಜನತೆ ಅಭಿವೃದ್ಧಿ ಪ್ರಕ್ರಿಯೆಯೊಳಗೆ ಸೇರಿಕೊಂಡರೆ ಅಥವಾ ಅವರನ್ನು ಒಳಗೊಂಡ ಯೋಜನೆಗಳು ರೂಪುಗೊಂಡರೆ ಮಾತ್ರ ಸಾಮಾಜಿಕ ನ್ಯಾಯದ ಪ್ರಶ್ನೆ ಮಹತ್ವವನ್ನು ಪಡೆದುಕೊಳ್ಳಲು ಸಾಧ್ಯ. ಆದರೆ ಸ್ವಾತಂತ್ರ್ಯೋತರ ಭಾರತದ ಅಭಿವೃದ್ಧಿ ಯೋಜನೆಗಳು ಅನುಷ್ಠಾನಗೊಳ್ಳುತ್ತಿರುವ ರೀತಿಯನ್ನೊಮ್ಮೆ ಗಮನಿಸಿದರೆ ಎಷ್ಟರಮಟ್ಟಿಗೆ ಸಬಾಲ್ಟರ್ನ್ ಸಮುದಾಯಗಳು ಹೊರಗುಳಿಯಲ್ಪಟ್ಟಿವೆ ಎನ್ನುವ ಸಂಗತಿ ತಿಳಿದುಬರುತ್ತದೆ. ಬಲವಂತದ ಒಕ್ಕಲೆಬ್ಬಿಸುವಿಕೆ, ವ್ಯವಸ್ಥಿತವಾಗಿ ಪುನರ್ವಸತಿಯನ್ನು ಕಲ್ಪಿಸದಿರುವುದು ಈ ಮುಂತಾದುವು ಸಾಮಾಜಿಕ ನ್ಯಾಯಕ್ಕೆ ತೊಡಕಾಗಿ ಪರಿಣಮಿಸಿವೆ.

ದೈಹಿಕ ಹಿಂಸೆ ಹಾಗೂ ಮಾನಸಿಕ ಹಿಂಸೆ ದುಡಿಯುವ ವರ್ಗಗಳ ದಿನಚರಿಯಾಗಿದ್ದು, ಅದನ್ನು ಸಹಿಸಿಕೊಂಡೇ ಬದುಕು ಮುನ್ನಡೆಸಬೇಕಾದ ಅನಿವಾರ್ಯ ಸ್ಥಿತಿ ಸೃಷ್ಟಿಯಾಗುತ್ತಲೇ ಬಂದಿದೆ. ಇದಕ್ಕೆ ಭೂಮಿ ಅಥವಾ ಬಂಡವಾಳ ಎನ್ನುವ ವ್ಯತ್ಯಾಸಗಳಿಲ್ಲ. ಭೂಮಿಕೇಂದ್ರಿತ ವ್ಯವಸ್ಥೆಯಾಗಲಿ ಅಥವಾ ಬಂಡವಾಳಕೇಂದ್ರಿತ ವ್ಯವಸ್ಥೆಯಾಗಲಿ ಜಾತಿ, ಅಸ್ಪೃಶ್ಯತೆ, ಗುಲಾಮಗಿರಿಯಂಥ ಅಸಮಾನ ಸಾಮಾಜಿಕ ರಚನೆ ಹಾಗೆಯೇ ಮುಂದುವರಿದಿದೆ. ಗ್ರಾಮೀಣ ಪ್ರದೇಶಗಳಲ್ಲಿ ಹೊಲೆಗೇರಿಗಳಿದ್ದರೆ, ನಗರ ಪ್ರದೇಶಗಳಲ್ಲಿ ಕೊಳೆಗೇರಿಗಳು ನಿರ್ಮಾಣಗೊಂಡವು. ಇವೆರಡೂ ಉಸಿರುಗಟ್ಟಿಸುವ ವಾತಾವರಣವನ್ನು ಸೃಷ್ಟಿಮಾಡಿ, ಅಧೀನತೆಯನ್ನು ಅನಿವಾರ್ಯವನ್ನಾಗಿಸಿದವು. ದುಡಿಯುವ ವರ್ಗಗಳು ದುಡಿಮೆಯ ದೃಷ್ಟಿಯಿಂದ, ಅಂದರೆ ವ್ಯವಹಾರದ ಹಿನ್ನೆಲೆಯಲ್ಲಿ, ಸಮಾಜಕ್ಕೆ ಅವಶ್ಯಕವಾಗಿ ಕಂಡುಬಂದವೇ ಹೊರತು ಸಾಂಸ್ಕೃತಿಕ ಸಂಬಂಧಗಳನ್ನು ಬೆಸೆಯುವ ದೃಷ್ಟಿಯಿಂದಲ್ಲ. ಈ ರೀತಿಯಾದ ಸಾಮಾಜಿಕ ಅಂತರಗಳನ್ನು ಕಾಯ್ದುಕೊಂಡೇ ನಡೆಯುವ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಾಮಾಜಿಕ ನ್ಯಾಯ ಎನ್ನುವುದು ಮರೀಚಿಕೆಯೇ ಸರಿ. ಹೊಲೆಗೇರಿ ಹಾಗೂ ಕೊಳೆಗೇರಿಗಳಲ್ಲಿನ ಜನತೆ ನಾಗರಿಕ ಹಕ್ಕುಬಾಧ್ಯತೆಗಳಿಗಾಗಿ ನಡೆಸುವ ಹೋರಾಟಗಳು ಅಪರಾಧವೆಂಬಂತೆ ಬಿಂಬಿಸಲ್ಪಟ್ಟಿವೆ ಹಾಗೂ ಅವರನ್ನೆಲ್ಲಾ ಅಪರಾಧಿಗಳೆಂಬಂತೆ ಗುಮಾನಿಯಿಂದ ನೋಡಲಾಗುತ್ತಿದೆ. ಇಂದಿನ ಸ್ಟೇಟ್‌ನ ಈ ಧೋರಣೆಗೂ, ಬ್ರಿಟಿಷ್ ಆಳ್ವಿಕೆಯಲ್ಲಿ ಬುಡಕಟ್ಟುಗಳನ್ನು ಕ್ರಿಮಿನಲ್ಸ್ ಎಂಬುದಾಗಿ ಕರೆದಿರುವುದಕ್ಕೂ ಯಾವುದೇ ವ್ಯತ್ಯಾಸಗಳಿಲ್ಲ. ಮನಸ್ಸಿನ ಧೋರಣೆಗಳು ಹಾಗೂ ಆಡಳಿತದ ಮಾದರಿಗಳು ಬದಲಾದ ಸ್ಟೇಟ್ ವ್ಯವಸ್ಥೆಯಲ್ಲಿ ಬದಲಾಗದೆ ಮುಂದುವರಿದಿದೆ.

ಅನ್ಯಾಯಕ್ಕೊಳಗಾದ ಜನಸಮುದಾಯಗಳಿಗೆ ನ್ಯಾಯ ಒದಗಿಸುವ ಪ್ರಯತ್ನಗಳು ಚರಿತ್ರೆಯುದ್ದಕ್ಕೂ ನಡೆದುಕೊಂಡೇ ಬಂದಿವೆ. ಹಳೆಯ ದರ್ಪಿಷ್ಠ ವ್ಯವಸ್ಥೆಯನ್ನು ಬದಲಾಯಿಸುವುದರ ಮೂಲಕ ಹೊಸ ರಾಜ್ಯ ವ್ಯವಸ್ಥೆಯನ್ನು ಸಮಾನತೆಯ ತಳಹದಿಯಲ್ಲಿ ಕಟ್ಟುವ ಪ್ರಯತ್ನವನ್ನು ಜಗತ್ತಿನ ಹಲವಾರು ದೇಶಗಳು ಮಾಡಿವೆ. ಹೊಸ ಬದಲಾವಣೆಯ ಉದ್ದೇಶವನ್ನು ಇಟ್ಟುಕೊಂಡು ಜಗತ್ತಿನಲ್ಲಿ ನಡೆದ ಎಲ್ಲ ಕ್ರಾಂತಿಗಳ ಸಂದರ್ಭದಲ್ಲಿಯೂ ಸಾಮಾಜಿಕ ನ್ಯಾಯದ ಪ್ರಶ್ನೆ ಅತ್ಯಂತ ಮಹತ್ವದ್ದೇ ಆಗಿತ್ತು. ಹೋರಾಟದ ವಿಧಾನ ಹಾಗೂ ಸ್ವರೂಪ ಬೇರೆಬೇರೆಯಾಗಿದ್ದರೂ ಅದರ ಉದ್ದೇಶ ಹಾಗೂ ಕಾಳಜಿ ಮಾತ್ರ ಒಂದೇ ಆಗಿತ್ತು. ಅಮೆರಿಕಾದಲ್ಲಿ ಆಂತರಿಕ ಕಲಹ ಕೊನೆಗೊಂಡು ಲಿಂಕನ್‌ನ ಮೂಲಕ ಸಂವಿಧಾನ ರಚನೆಗೊಂಡು ಗುಲಾಮಗಿರಿಯನ್ನು ರದ್ದುಗೊಳಿಸಲಾಯಿತು. ನೀಗ್ರೋಗಳಿಗೆ ಪೌರತ್ವ ನೀಡುವುದು, ಮತದಾನದ ಹಕ್ಕು, ವರ್ಣ ತಾರತಮ್ಯ ನಿವಾರಣೆ ಮುಂತಾದ ಮಹತ್ವದ ಹಕ್ಕುಗಳನ್ನು ಸಂವಿಧಾನವು ನೀಡಿತು. ಫ್ರಾನ್ಸ್‌ನಲ್ಲಿ ನಡೆದ ಮಹಾಕ್ರಾಂತಿಯು ಬೂರ್ಬನ್ ಆಳ್ವಿಕೆಯನ್ನು ಕೊನೆಗೊಳಿಸಿ ಸಂವಿಧಾನಾತ್ಮಕ ನೀತಿಗಳು ಜಾರಿಗೆ ಬರುವಂತೆ ಮಾಡಿತು. ಗುಲಾಮ ಪದ್ಧತಿ ಹಾಗೂ ಊಳಿಗಮಾನ್ಯ ಪದ್ಧತಿಗಳನ್ನು ರದ್ದುಗೊಳಿಸುವ ಉದ್ದೇಶವನ್ನೂ ಕ್ರಾಂತಿಯು ಹೊಂದಿತ್ತು. ಕ್ರಾಂತಿಯಿಂದಾಗಿ ಜನಸಾಮಾನ್ಯರ ನೆರವಿನೊಂದಿಗೆ ಮಧ್ಯಮವರ್ಗದ ಆಳ್ವಿಕೆ ಆರಂಭಗೊಳ್ಳುವಂತಾಯಿತು. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಮುಂತಾದ ಸಾಮಾಜಿಕ ನ್ಯಾಯದ ತತ್ವಗಳು ಹೆಚ್ಚು ಪ್ರಚಾರವನ್ನು ಪಡೆದುಕೊಂಡವು. ರಷ್ಯಾದಲ್ಲಿ ನಡೆದ ಕ್ರಾಂತಿಯು ಸ್ಝಾರ್ ದೊರೆಗಳ ನಿರಂಕುಶಾಡಳಿತವನ್ನು ಕೊನೆಗೊಳಿಸಿ ಸಮಾಜವಾದಿ ಸಿದ್ಧಾಂತದಡಿಯಲ್ಲಿ ಜನಪರ ಯೋಜನೆಗಳು ಜಾರಿಗೊಳ್ಳುವಂತೆ ಮಾಡಿತು. ಲೆನಿನ್‌ನ ಮೂಲಕ ಸಮಾನತೆಯ ಹೊಸ ಯುಗ ಆರಂಭಗೊಂಡಿತು. ಲೆನಿನ್‌ನ ಹೊಸ ಆರ್ಥಿಕ ನೀತಿಯು ಜನರಿಗೆ ಆಹಾರ, ಬಟ್ಟೆ ಹಾಗೂ ವಸತಿಯನ್ನು ಒದಗಿಸುವುದನ್ನು ಪ್ರಥಮ ಆದ್ಯತೆಯನ್ನಾಗಿ ಪರಿಗಣಿಸಿತು. ಈ ಎಲ್ಲ ಬದಲಾವಣೆಗಳು ಹಾಗೂ ಬೆಳವಣಿಗೆಗಳು ಮುಂದಿನ ದಿನಗಳಲ್ಲಿ ಯಥಾವತ್ತಾಗಿ ಮುಂದುವರಿಯದಿದ್ದರೂ, ಅವು ಬೀರಿದ ಪರಿಣಾಮಗಳು ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಗಟ್ಟಿಗೊಳಿಸುವಂತೆ ಮಾಡಿತು. ಜಗತ್ತಿನಾದ್ಯಂತ ದೇಶಗಳು ತಮ್ಮ ಆಡಳಿತ ಮಾದರಿಗೆ ಅನುಗುಣವಾಗಿ ಸಂವಿಧಾನವನ್ನು ರಚಿಸಿ ಸಾಮಾಜಿಕ ನ್ಯಾಯದ ಭರವಸೆಯನ್ನು ಜನತೆಗೆ ನೀಡಿದವು.

ಸಾಮಾಜಿಕ ನ್ಯಾಯದ ಕುರಿತು ಜಾಗೃತಿಯನ್ನು ಮೂಡಿಸುವ ಕಾರ್ಯ ಚರಿತ್ರೆಯುದ್ದಕ್ಕೂ ನಡೆದಿದೆ. ಜೀತ, ಗುಲಾಮಗಿರಿ, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಅನಿಷ್ಟಗಳನ್ನು ಹೋಗಲಾಡಿಸುವ ಪ್ರಯತ್ನಗಳೂ ನಡೆದಿವೆ. ಭಾರತ ದೇಶವನ್ನೇ ಉದಾಹರಣೆಯಾಗಿ ತೆಗೆದುಕೊಳ್ಳುವುದಾದರೆ ಲೋಕಾಯತ–ಚಾರ್ವಾಕ ಸಿದ್ಧಾಂತ, ಜೈನ–ಬೌದ್ಧ, ವಚನ, ದಾಸ, ಸೂಫಿ, ತತ್ವಪದಕಾರರು ಮುಂತಾದ ಚಿಂತನೆಗಳು ಹಾಗೂ ಚಿಂತಕರು ಸಮಾಜದ ಡೊಂಕನ್ನು ತಿದ್ದುವ ಕಾರ್ಯವನ್ನು ನಡೆಸಿರುವುದು ಚರಿತ್ರೆಯ ಪುಟಗಳಿಂದ ತಿಳಿದುಬರುತ್ತದೆ. ಬುದ್ಧ, ಬಸವಣ್ಣ, ಫುಲೆ, ಪೆರಿಯಾರ್, ನಾರಾಯಣ ಗುರು, ಶಾಹು ಮಹಾರಾಜ, ನಾಲ್ವಡಿ ಕೃಷ್ಣರಾಜ ಒಡೆಯರ್, ಮಹಾತ್ಮ ಗಾಂಧಿ, ಬಾಬು ಜಗಜೀವನರಾಮ್, ಬಿ. ಆರ್. ಅಂಬೇಡ್ಕರ್ ಮುಂತಾದ ಮಹನೀಯರು ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿದರು, ಜನಜಾಗೃತಿಯನ್ನು ಮೂಡಿಸಿದರು ಹಾಗೂ ಶೋಷಣೆಯ ವಿರುದ್ಧ ಶೋಷಿತರು ಧ್ವನಿ ಎತ್ತುವಂತೆ ಮಾಡಿದರು. ಜಾಗತಿಕ ಮಟ್ಟದಲ್ಲಿ ಗಮನಿಸುವುದಾದರೆ

ಕಾರ್ಲ್ ಮಾರ್ಕ್ಸ್, ಅಬ್ರಹಾಂ ಲಿಂಕನ್, ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್, ಲೆನಿನ್, ಸನ್‌ಯಾತ್ ಸೆನ್, ಮಾವೋ, ನೆಲ್ಸನ್ ಮಂಡೇಲಾ ಮುಂತಾದವರು ತಮ್ಮದೇ ಆದ ಹೋರಾಟದ ಹಾದಿಗಳನ್ನು ರೂಪಿಸಿಕೊಂಡು ನಿರ್ಲಕ್ಷ್ಯಕ್ಕೆ ಒಳಗಾದ ಜನಸಮುದಾಯಗಳು ಎಚ್ಚೆತ್ತುಕೊಳ್ಳುವಂತೆ ಮಾಡಿದರು. ಜಗತ್ತಿನಾದ್ಯಂತ ಇಂದು ಹೋರಾಟದ ಧ್ವನಿಗಳು ಕೇಳಿಸುತ್ತಿರುವುದಕ್ಕೆ ಈ ಎಲ್ಲ ಹೋರಾಟಗಾರರ ಚಿಂತನೆಗಳೇ ಪ್ರಮುಖ ಕಾರಣ. ಸರ್ಕಾರ ಅಥವಾ ದರ್ಪಿಷ್ಠ ಶಕ್ತಿಗಳು ಹೋರಾಟಗಾರರನ್ನು ಸಾಯಿಸಿದರೂ ಅವರ ಚಿಂತನೆಗಳು ಇನ್ನಷ್ಟು ಪ್ರಖರವಾಗಿ ಬೆಳಗಿ ತಮ್ಮ ವ್ಯಾಪ್ತಿಯನ್ನು ವಿಸ್ತರಿಸುತ್ತಲೇ ಸಾಗುತ್ತಿರುತ್ತವೆ. ಏಕೆಂದರೆ ಚಿಂತನೆಗಳಿಗೆ ಸಾವಿಲ್ಲ. ಅವು ಕೆಲವು ಸಂದರ್ಭಗಳಲ್ಲಿ ನಾನಾ ಬಗೆಯ ಒತ್ತಡಗಳಿಗೆ ಸಿಲುಕಿ ಮಂಕಾಗಿ ಕಂಡುಬಂದರೂ, ಸಂದರ್ಭ ಬಂದಾಗ ಪುಟಿದೇಳುವ ಸಾಮರ್ಥ್ಯವನ್ನು ಹೊಂದಿರುತ್ತವೆ. ಇಂದು ಜಗತ್ತಿನಾದ್ಯಂತ ನಡೆಯುತ್ತಿರುವ ನಾನಾ ಸ್ವರೂಪದ ಹೋರಾಟಗಳ ಹಿಂದಿನ ಚಾಲಕ ಶಕ್ತಿಯಾಗಿ ಈ ಚಿಂತನೆಗಳು ಕೆಲಸ ಮಾಡುತ್ತಿವೆ.

ಸಾಮಾಜಿಕ ನ್ಯಾಯದ ಪ್ರಣಾಳಿಕೆಯನ್ನು ಇಟ್ಟುಕೊಂಡು ಜಗತ್ತಿನ ಹಲವಾರು ದೇಶಗಳಲ್ಲಿ ಸರ್ಕಾರಗಳು ಅಸ್ತಿತ್ವಕ್ಕೆ ಬಂದವು. ಬಂಡವಾಳಶಾಹಿ ದೇಶಗಳನ್ನು ವಿರೋಧಿಸುವ ಸಮಾಜವಾದಿ ದೇಶಗಳು ಸಾಮಾಜಿಕ ನ್ಯಾಯದ ಭರವಸೆಯನ್ನು ಮೂಡಿಸುವ ಪ್ರಯತ್ನವನ್ನು ಮಾಡಿದವಾದರೂ ಆ ಪ್ರಯತ್ನ ನಿರಂತರವಾಗಿ ಮುಂದುವರಿಯದೆ ಮುಗ್ಗರಿಸಬೇಕಾಯಿತು. ಇನ್ನು ಬಂಡವಾಳಶಾಹಿ ರಾಷ್ಟ್ರಗಳು ತಾವು ಕೂಡ ಸಾಮಾಜಿಕ ನ್ಯಾಯದ ಮುಖವಾಡವನ್ನು ಹಾಕಿಕೊಂಡು ಆಧುನಿಕತೆಯ ಹೆಸರಿನಲ್ಲಿ ಜನರನ್ನು ಮೋಡಿ ಮಾಡುವ ಪ್ರಯತ್ನವನ್ನು ಮಾಡಿದವು. ಕೈಗಾರಿಕಾ ಹಾಗೂ ನಗರಕೇಂದ್ರಿತ ಆರ್ಥಿಕ ವ್ಯವಸ್ಥೆಯಲ್ಲಿ ಸಮಾನತೆಯನ್ನು ಕಾಣುವ ಮರೀಚಿಕೆಯನ್ನು ಸೃಷ್ಟಿಸಲಾಯಿತು. ಆದರೆ ಕೊನೆಗೂ ಆ ಮರೀಚಿಕೆಯಲ್ಲಿ ಕೆಳಮಧ್ಯಮ ವರ್ಗ ಹಾಗೂ ಕೆಳವರ್ಗದ ಜನತೆಗೆ ಸೃಷ್ಟಿಗೊಂಡಿರುವುದು ಕೊಳೆಗೇರಿಗಳು ಮಾತ್ರ. ಹಳ್ಳಿಗಳಲ್ಲಿನ ಹೊಲೆಗೇರಿಗೂ ನಗರಗಳಲ್ಲಿನ ಕೊಳೆಗೇರಿಗೂ ಜನಜೀವನದ ಸ್ವರೂಪದಲ್ಲಿ ವ್ಯತ್ಯಾಸಗಳೇನಿಲ್ಲ. ಎರಡೂ ಕೇರಿಗಳು ದುಡಿಯುವ ವರ್ಗಗಳ ವಸತಿ ನೆಲೆಗಳೇ ಆಗಿವೆ. ಒಂದು ಕಡೆ ಊಳಿಗಮಾನ್ಯ ಚೌಕಟ್ಟಾದರೆ, ಇನ್ನೊಂದೆಡೆ ಬಂಡವಾಳಶಾಹಿ ಚೌಕಟ್ಟು. ಇವೆರಡೂ ವ್ಯವಸ್ಥೆಗಳು ಭಾರತದ ಸಂದರ್ಭದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿರದೆ ಒಂದರೊಳಗೊಂದು ಬೆಸೆದುಕೊಂಡು ಇನ್ನಷ್ಟು ಗಟ್ಟಿಯಾದ ಹಾಗೂ ಸಂಮಿಶ್ರವಾದ ಭೂ ಬಂಡವಾಳ, ವ್ಯಾಪಾರಿ ಬಂಡವಾಳ ಹಾಗೂ ಕೈಗಾರಿಕಾ ಬಂಡವಾಳವಾಗಿ ರೂಪುಗೊಂಡಿವೆ. ಈ ವ್ಯವಸ್ಥೆಯಲ್ಲಿ ಸಾರ್ವಜನಿಕ ವಲಯವು ಹಂತಹಂತವಾಗಿ ಖಾಸಗಿ ವಲಯವಾಗಿ ಪರಿವರ್ತನೆಗೊಳ್ಳಲಾರಂಭಿಸುತ್ತದೆ. ಮಾರುಕಟ್ಟೆಕೇಂದ್ರಿತ ಆರ್ಥಿಕತೆಯನ್ನು ಹೊಂದಿರುವ ಖಾಸಗಿ ವಲಯವು ತನ್ನ ಲಾಭ-ನಷ್ಟದ ಲೆಕ್ಕಾಚಾರದಲ್ಲಿ ಮುಳುಗಿರುತ್ತದೆಯೇ ಹೊರತು ಸಾಮಾಜಿಕ ನ್ಯಾಯದ ಚಿಂತನೆಯಲ್ಲಿ ಅಲ್ಲ. ಸಾರ್ವಜನಿಕ ವಲಯವು ತನ್ನ ಪ್ರಣಾಳಿಕೆಯಲ್ಲಿ ಸಾಮಾಜಿಕ ನ್ಯಾಯದ ಭರವಸೆಯನ್ನು ನೀಡುತ್ತದೆಯಾದರೂ, ಅದು ಅನುಷ್ಠಾನಗೊಳ್ಳುವ ರೀತಿ ಮೂಲ ಉದ್ದೇಶಕ್ಕೆ ತದ್ವಿರುದ್ಧವಾಗಿರುತ್ತದೆ.

ಸರ್ಕಾರದಿಂದ ಅಥವಾ ಸಾರ್ವಜನಿಕ ವಲಯದಿಂದ ಸಾಮಾಜಿಕ ನ್ಯಾಯ ಸಾಧ್ಯವಿಲ್ಲ ಎನ್ನುವ ಚಿತ್ರಣವನ್ನು ಖಾಸಗಿ ವಲಯವು ಪ್ರಕಟಿಸುತ್ತಲೇ ಬಂದಿದೆ. ಮೀಸಲಾತಿಯನ್ನು ಕಡ್ಡಾಯಗೊಳಿಸುವ ಹಾಗೂ ಬಡಜನತೆಯ ಉದ್ಧಾರಕ್ಕಾಗಿ ಪ್ಯಾಕೇಜ್‌ಗಳನ್ನು ರೂಪಿಸುವ ಸಾರ್ವಜನಿಕ ವಲಯದ ತೀರ್ಮಾನಗಳು ರಾಜಕೀಯಕೇಂದ್ರಿತವಾದದ್ದು ಎನ್ನುವ ಟೀಕೆ ಖಾಸಗಿ ವಲಯದ್ದು. ಸಮಾಜದ ಕೆಳಸ್ತರದ ಜನರು ಬದಲಾದ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯಲ್ಲಿ ನೆಲೆ ಕಂಡುಕೊಳ್ಳುವಂತೆ ಮಾಡಿದರೆ ಮಾತ್ರ ಸಾಮಾಜಿಕ ನ್ಯಾಯ ಸಾಧ್ಯ. ಇಲ್ಲವಾದಲ್ಲಿ ಅಧೀನತೆಯಲ್ಲಿಯೇ ಬದುಕನ್ನು ಸಾಗಿಸಬೇಕಾದ ಸ್ಥಿತಿ ಮುಂದುವರಿಯಬಹುದಷ್ಟೆ ಎನ್ನುವ ಅಭಿಪ್ರಾಯವನ್ನು ಖಾಸಗಿ ವಲಯವು ಪ್ರಕಟಿಸುತ್ತಿರುವುದನ್ನು ಕಾಣಬಹುದಾಗಿದೆ. ಅಧೀನತೆ

**ಕಾವ್ಯಲೋಕ**

# ಪೊರಕೆ ಬಿಡಿಸಿದ ರಂಗೋಲಿ

ಇಂಗಲಾರದ ಹಸಿವು ನುಂಗಿಕೊಂಡು
ಹಸಿವಿನ ಕೂಸುಗಳೆ ಹೆಣಗಳಾಗಿ
ನೀತಿಗೆಟ್ಟವರ ನಾಲಿಗೆಯಲ್ಲಿ ತೇಲುತಿವೆ
ಒಂದು ತುಣುಕು ರೊಟ್ಟಿ ಸಿಗಬಹುದೆಂದು

ದಿಕ್ಕು ದೆಸೆ ಇರದೆ
ಸಂಧಿ ಗೊಂಧಿಗಳಲ್ಲಿ ಚಿಂದಿ
ಆಯೋವರು ನನ್ನವರು
ಮುಂಜಾನೆಯ ರಂಗೋಲಿ ಬರೆಯುತ್ತಾರೆ

ನಿರ್ಜನ ಬೀದಿಯ ನೀರವ ಮೌನವ ಮುರಿಯುತ್ತಾ
ಹುರುಪಿನಲ್ಲಿ ಪೊರಕೆಗಳು ತಿರುಗಿಸುತ್ತಾ
ಪ್ರತಿಕ್ಷಣ ಹೊಸ ಗಾಳಿ ಹೊಸ ಬೆಳಕಿನಂತೆ
ಬೀದಿ ಬೀದಿಗಳ ತುಂಬುತ್ತ
ಹೊಸ ಭಾವನೆಗಳ ಬೆರೆಸುತ್ತಾರೆ ನನ್ನವರು

ಮುಂಜಾನೆಗೆ ಮೃದುವಾಗಿ
ಗದ್ದಲಗಳಿಗೆ ಕಿವಿಯಾಗಿ
ಗಲೀಜುಗಳಿಗೆ ಗಾಬರಿಪಡದೆ
ಬೀದಿಗಳಲ್ಲಿ ರಫಟ್ಟಿ ಕೌದಿ ಹಾಸಿ ಕೂಡುತ್ತಾರೆ
ಪೊರಕೆ ಬಿಡಿಸಿದ ರಂಗೋಲಿಗಳಲ್ಲಿ
ಸ್ಥಿತ ಪ್ರಜ್ಞ ಬುದ್ಧ, ಅಲ್ಲಮ್ಮ , ಮಾರ್ಕ್ಸ್‌ನಾಗಿ

**ಕೈಲಾಸ ಶಂ / ಶಾಂತಪ್ಪ ಕಡಗಂಚಿ**
ಕಲಬುರಗಿ ವಿಶ್ವವಿದ್ಯಾಲಯ, ಕಲಬುರಗಿ

ಎರಡೂ ವಲಯಗಳಲ್ಲಿ ಸಮಾನವಾಗಿಯೇ ಇರುವುದು ವಾಸ್ತವ ವಿಚಾರ. ಸಮಾಜದ ತಳಸ್ತರದ ಜನತೆಯಲ್ಲಿ ಬದಲಾವಣೆಯ ಹೊಸ ಆಲೋಚನಾ ಕ್ರಮವನ್ನು ಮೂಡಿಸುವ, ಪರಾವಲಂಬಿತನವನ್ನು ಕೊನೆಗೊಳಿಸುವ ಹಾಗೂ ಬದಲಾದ ಆರ್ಥಿಕತೆಯಲ್ಲಿ ಬದುಕನ್ನು ಕಟ್ಟಿಕೊಳ್ಳುವ ಸಾಮರ್ಥ್ಯವನ್ನು ತುಂಬುವ ಪ್ರಯತ್ನ ಆಗಬೇಕು ಎನ್ನುವುದು ಇಲ್ಲಿ ಮುಖ್ಯ. ಖಾಸಗಿ ಹಾಗೂ ಸಾರ್ವಜನಿಕ ವಲಯಗಳು ಸಾಮಾಜಿಕ ನ್ಯಾಯದ ವಿಚಾರವನ್ನು ಹಗುರವಾಗಿ ತೆಗೆದುಕೊಂಡು ಸಾಮಾಜಿಕ ಅಂತರಗಳನ್ನು ಕಾಯ್ದುಕೊಂಡೇ ಮುಂದುವರಿಯುತ್ತಿವೆ. ಇದರ ಜೊತೆಗೆ ಸಾರ್ವಜನಿಕ ವಲಯವನ್ನು ಸಾಂಪ್ರದಾಯಿಕ, ಹಿಂದುಳಿದ ಹಾಗೂ ಖಾಸಗಿ ವಲಯವನ್ನು ಆಧುನಿಕ, ಮುಂದುವರಿದ ಎಂಬುದಾಗಿಯೂ ಚಿತ್ರಿಸಲಾಗಿದೆ. ಸಾಮ್ರಾಜ್ಯಶಾಹಿ ವಿರುದ್ಧ ಹೋರಾಡಿ ಸ್ವತಂತ್ರಗೊಂಡ ದೇಶಗಳಲ್ಲಿರುವ ಸರ್ಕಾರಗಳನ್ನು ಕ್ಷೀಣಿಸುವ ಹಾಗೂ ಜಾಗತಿಕ ಮಾರುಕಟ್ಟೆಕೇಂದ್ರಿತ ಆರ್ಥಿಕ ನೀತಿಯನ್ನು ಹೇರುವ ಧೋರಣೆಗಳು ಈ ಬಗೆಯ ಚಿತ್ರಣಗಳ ಹಿಂದಿರುವುದು ಮೇಲ್ನೋಟಕ್ಕೆ ಕಂಡುಬರುವುದಿಲ್ಲ.




ಸಮಾಜದ ಕೆಳಸ್ತರದ ಜನತೆಗೆ ಸಾಮಾಜಿಕ ನ್ಯಾಯ ದೊರಕಬೇಕಾದರೆ ಅವರು ಮೊದಲು ಆಧುನಿಕರಾಗಬೇಕು ಹಾಗೂ ಆಧುನಿಕತೆಯನ್ನು ಅರ್ಥೈಸಿಕೊಳ್ಳಬೇಕು ಎನ್ನುವುದು ಮಾರುಕಟ್ಟೆಕೇಂದ್ರಿತ ಅಭಿವೃದ್ಧಿ ಚಿಂತನೆ. ಈ ಚಿಂತನೆಯ ಪ್ರಕಾರ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಿಂದಾಚೆಗೆ ಈ ಜನವರ್ಗ ಬರುವಂತಾದರೆ ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ಸ್ವತಂತ್ರ ಗುರುತಿಸಿಕೊಳ್ಳುವಿಕೆ ಸಾಧ್ಯ ಎನ್ನುವ ನಿಲುವು ಒಂದು ಆಶಯ ಇಲ್ಲವೇ ಸೈದ್ಧಾಂತಿಕ ವಿವರಣೆ. ಈ ಆಶಯವನ್ನು ಆಗುಮಾಡುವುದು ಹೇಗೆ ಅಥವಾ ಯಾರು ಎನ್ನುವ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳಿಲ್ಲ. ಬಂಡವಾಳಶಾಹಿ ವ್ಯವಸ್ಥೆಯು ದುಡಿಯುವ ವರ್ಗಗಳಿಗೆ ಎಷ್ಟರಮಟ್ಟಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿದೆ ಹಾಗೂ ಸ್ವತಂತ್ರವಾಗಿ ಗುರುತಿಸಿಕೊಳ್ಳುವಂತೆ ಮಾಡಿದೆ ಎನ್ನುವುದು ಪ್ರಶ್ನಾರ್ಹವಾಗಿದೆ. ಅದು ಹುಟ್ಟುಹಾಕಿರುವ ಅನುಕರಣಾ ಸಂಸ್ಕೃತಿ ಸ್ವಂತಿಕೆ ಹಾಗೂ ಸ್ವಂತ ನಿರ್ಧಾರ ಎನ್ನುವ ಕಲ್ಪನೆಯನ್ನೇ ದೂರವಾಗಿಸಿದೆ. ಇದರಿಂದಾಗಿ ತೋರಿಕೆಯ ಬದುಕೇ ಅನಿವಾರ್ಯವಾಗಿ ಉಸಿರುಗಟ್ಟುವ ವಾತಾವರಣದಲ್ಲಿ ಬದುಕಬೇಕಾದ ಸ್ಥಿತಿ ನಿರ್ಮಾಣಗೊಳ್ಳುತ್ತದೆ. ಈ ಸ್ಥಿತಿಯಲ್ಲಿ ನ್ಯಾಯ-ಅನ್ಯಾಯಕ್ಕಿಂತ ಒಣಪ್ರತಿಷ್ಠೆಯೇ ಪ್ರಧಾನವಾಗಿರುತ್ತದೆ. ಇದು ಮಧ್ಯಮವರ್ಗದಿಂದ ಆರಂಭಗೊಂಡು ಕೆಳವರ್ಗದವರೆಗೂ ವ್ಯಾಪಿಸಿಬಿಟ್ಟಿದೆ. ಇದರ ಪರಿಣಾಮವಾಗಿ ಅನ್ಯಾಯವನ್ನು ಪ್ರತಿಭಟಿಸುವ ಗೋಜಿಗೆ ಹೋಗದೆ ಸುಮ್ಮನಿರುವುದು, ಸ್ವಲ್ಪಮಟ್ಟಿಗೆ ಮಡಿವಂತಿಕೆಯನ್ನು ಪ್ರದರ್ಶಿಸುವುದು, ಮಾನವೀಯ ಸಂಬಂಧಗಳನ್ನು ಕೈಬಿಟ್ಟು ಯಾಂತ್ರಿಕ ಜೀವನ ನಡೆಸುವುದು ಮುಂತಾದ ಕಣ್ಣುಮುಚ್ಚಾಲೆ ಆಟಗಳು ದಿನನಿತ್ಯ ನಡೆಯುತ್ತಲೇ ಇರುತ್ತವೆ. ಯಾವುದೋ ಬಗೆಯ ಆಮಿಶಗಳಿಗೆ ಒಳಗಾಗಿ ಸಮಾಜ ಸುಧಾರಕರಂತೆ ನಟಿಸುವ ವ್ಯಕ್ತಿ ಅಥವಾ ಸಂಸ್ಥೆಗಳಿಂದ ಸುಧಾರಣೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಬಂಡವಾಳಶಾಹಿ ವ್ಯವಸ್ಥೆಯು ತಾನು ಸಮಾಜ ಸುಧಾರಕ ಎನ್ನುವ ಘೋಷಣೆಯೊಂದಿಗೆ ಪ್ರವೇಶಿಸುತ್ತಿರುತ್ತದೆ. ಹಾಗಾಗಿ ಸುಧಾರಣೆ ಎನ್ನುವ ಪದ ಇಂದು ಮಾರುಕಟ್ಟೆಯ ವಸ್ತುವಾಗಿ ಪರಿವರ್ತನೆಗೊಂಡಿದೆ.

ಶೋಷಣೆಯ ವಿರುದ್ಧ ಹೋರಾಡುವ ಹಾಗೂ ಸಮಾನತೆಗಾಗಿ ಧ್ವನಿ ಎತ್ತುವ ಪ್ರಯತ್ನಗಳು ರಾಜಕೀಯ ಆಮಿಶಗಳಿಗೆ ಒಳಗಾಗಿ ನಡೆದರೆ ಅದೊಂದು ಜನರಿಂದ ಬೇರ್ಪಟ್ಟ ಹೋರಾಟವಾಗಬಹುದೇ ಹೊರತು ಜನರನ್ನು ಒಳಗೊಳ್ಳಲು ಸಾಧ್ಯವಿಲ್ಲ. ಸಾಮಾಜಿಕ ಹೋರಾಟಗಳು ಜನಪರ ಎಂಬ ಭ್ರಮೆಯನ್ನು ಮೂಡಿಸಿ ಜನರಿಂದ ಬೇರ್ಪಟ್ಟ ರೀತಿಯಲ್ಲಿ ಇರಬೇಕೆನ್ನುವುದು ಪ್ರಭುತ್ವದ ಧೋರಣೆ. ಯಾವ ಪ್ರಭುತ್ವವೂ ಜನತೆ ಪ್ರಜ್ಞಾವಂತರಾಗಬೇಕೆಂದು ಬಯಸುವುದಿಲ್ಲ. ಹೆಚ್ಚುಕಡಿಮೆ ಅವರೆಲ್ಲರೂ ಗುಲಾಮರಾಗಿಯೇ ಉಳಿಯಬೇಕು ಹಾಗೂ ಸ್ವತಂತ್ರ ನಿರ್ಣಯಗಳ ಕಡೆಗೆ ಸಾಗಬಾರದು ಎನ್ನುವ ನಿಲುವನ್ನು ಪ್ರಭುತ್ವ ಹೊಂದಿರುತ್ತದೆ. ವಸಾಹತು ಪ್ರಭುತ್ವವೇ ಇದಕ್ಕೆ ಉತ್ತಮ ಉದಾಹರಣೆ. ಅದು ರೂಪಿಸಿದ ಶಿಕ್ಷಣ ನೀತಿಯಿಂದ ಬಿಡಿಸಿಕೊಳ್ಳಲು ಭಾರತಕ್ಕೆ ಇಂದಿನವರೆಗೂ ಸಾಧ್ಯವಾಗಿಲ್ಲ. ಜನರ ಮನಸ್ಸನ್ನು, ಭಾವನೆಗಳನ್ನು ಹಾಗೂ ಆಲೋಚನಾ ಕ್ರಮವನ್ನು ಸೀಮಿತಗೊಳಿಸುವ ರಾಜಕೀಯ ಪ್ರಣಾಳಿಕೆಗಳು ಪ್ರಜಾಪ್ರಭುತ್ವ ಭಾರತದಲ್ಲಿ ವಸಾಹತು ಪ್ರಭುತ್ವವನ್ನು ಮೀರಿಸುವಂತೆ ಕಂಡುಬರುತ್ತಿವೆ. ಸಮಾಜದ ಕೆಳಸ್ತರದ ಜನರಿಗೆ ರಾಜಕೀಯ ಮುಖಂಡತ್ವವನ್ನು ನೀಡುವುದರಿಂದ ಸಾಮಾಜಿಕ ನ್ಯಾಯ ಸಾಧ್ಯವಾಗುತ್ತದೆ ಎನ್ನುವ ಅಭಿಪ್ರಾಯವೂ ತಲೆಕೆಳಗಾಗಿದೆ. ಬಹುಸಂಖ್ಯಾತ ಜನವರ್ಗಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವ ಪ್ರಯತ್ನದಲ್ಲಿ ರಾಜಕೀಯ ಪಕ್ಷಗಳು ನಿರತವಾಗಿದ್ದು, ಅಲ್ಲಿ ನೈತಿಕತೆ ಅಥವಾ ಸಾಮಾಜಿಕ ಮೌಲ್ಯ ಎನ್ನುವ ಪದಗಳು ಅರ್ಥ ಕಳೆದುಕೊಂಡಿವೆ. ಪಕ್ಷ ರಾಜಕಾರಣದ ಹೊಸ ಹೊಸ ಪ್ರಯೋಗಗಳು ಜನರನ್ನು ಸೋಮಾರಿಗಳನ್ನಾಗಿಸುವ, ಅವಿವೇಕಿಗಳನ್ನಾಗಿಸುವ, ಕೋಮುವಾದಿಗಳನ್ನಾಗಿಸುವ ಹಾಗೂ ಮೂಢರನ್ನಾಗಿಸುವ ಕಾರ್ಯದಲ್ಲಿ ತೊಡಗಿವೆ. ವಿವಿಧ ಜಾತಿ ಹಾಗೂ ಧರ್ಮಗಳ ನಡುವೆ ದ್ವೇಷದ ಮನೋಭಾವನೆ ಹುಟ್ಟಿಕೊಂಡಿರುವುದಕ್ಕೆ ಇದೇ ಕಾರಣವಾಗಿದೆ. ರಾಜಕೀಯ ಪಕ್ಷಗಳಿಗೆ ಆಯಾ ಜಾತಿ ಹಾಗೂ ಧರ್ಮಗಳಲ್ಲಿನ ಜನಸಂಖ್ಯೆ ಮತದ ಹಿನ್ನೆಲೆಯಲ್ಲಿ ಮುಖ್ಯವಾಗುತ್ತಿದೆಯೇ ಹೊರತು ಅವರ ಸಾಮಾಜಿಕ ಹಾಗೂ ಆರ್ಥಿಕ ಹಿಂದುಳಿದಿರುವಿಕೆಯ ಕಾರಣಕ್ಕಾಗಿ ಅಲ್ಲ. ಇದು ಒಂದು ಬಗೆಯಲ್ಲಿ ಜನರನ್ನು ಕೊಂಡುಕೊಳ್ಳುವ ಆಧುನಿಕ ಅಥವಾ ಹೈಟೆಕ್ ಗುಲಾಮಗಿರಿ, ಅಷ್ಟೆ. ಈ ಪ್ರಯತ್ನಗಳು ಚುನಾವಣೆಗಳ ಸಂದರ್ಭದಲ್ಲಿ ನೇರವಾಗಿ ಕಂಡು ಬರುತ್ತವೆ. ಪ್ರಜಾಪ್ರಭುತ್ವದ ಬುನಾದಿಯಾದ ಮತದಾನವೇ ಭ್ರಷ್ಟಗೊಂಡು ರಾಜಕೀಯ ಧುರೀಣರ ಹಾಗೂ ರಾಜಕೀಯ ಪಕ್ಷಗಳ ಉದ್ದಿಮೆಯಾಗಿ ಪರಿವರ್ತನೆಗೊಂಡಿರುವುದರಿಂದ ಸಾಮಾಜಿಕ ನ್ಯಾಯ ಎಂಬ ಪರಿಕಲ್ಪನೆ ಮರೀಚಿಕೆಯಲ್ಲದೆ ಇನ್ನೇನು ?

ಶಿಕ್ಷಣದಿಂದ ಸಾಮಾಜಿಕ ನ್ಯಾಯ ಸಾಧ್ಯ ಅಥವಾ ಅದರ ಕುರಿತು ಆಲೋಚಿಸುವಂತೆ ಮಾಡಲು ಸಾಧ್ಯ ಎನ್ನುವುದು ಸಾಮಾನ್ಯ ಹೇಳಿಕೆ. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಕೆಳವರ್ಗಗಳನ್ನು ಶಿಕ್ಷಣದಿಂದ ವಂಚಿತರಾಗುವಂತೆ ವ್ಯವಸ್ಥಿತವಾಗಿ ಮಾಡುತ್ತಾ ಬರಲಾಯಿತು. ಗುರುಕುಲ ಮಾದರಿಯೇ ಇದಕ್ಕೆ ಉತ್ತಮ ಉದಾಹರಣೆ. ಜಾತಿ ಆಧಾರಿತ ಶ್ರೇಣೀಕೃತ ಸಾಮಾಜಿಕ ರಚನೆಯನ್ನು ಮುರಿಯಬೇಕಾದ ಶಿಕ್ಷಣವೇ ಹೊಸ ಶ್ರೇಣೀಕೃತ ವ್ಯವಸ್ಥೆಯನ್ನು ಹುಟ್ಟುಹಾಕಿತು. ಈ ಪ್ರಯತ್ನದಲ್ಲಿ ರಾಜಪ್ರಭುತ್ವ ಹಾಗೂ ಧಾರ್ಮಿಕ ಪ್ರಭುತ್ವಗಳೆರಡೂ ಶಾಮೀಲಾಗಿದ್ದವು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ರೂಪುಗೊಂಡ ಹೊಸ ಶಿಕ್ಷಣ ವ್ಯವಸ್ಥೆ ವಸಾಹತುಶಾಹಿ ಶಿಕ್ಷಣ ಮಾದರಿಯನ್ನು ಮೀರಿ ಹೊರಬಂದಿದೆಯೇ ಎನ್ನುವ ಪ್ರಶ್ನೆಯೂ ಇಲ್ಲಿ ಮುಖ್ಯವಾಗುತ್ತದೆ. ಆಯಾ ಭೌಗೋಳಿಕ ಪರಿಸರದ ಸಾಮಾಜಿಕ ಅಂತರಗಳಿಗೆ ಕಾರಣವಾಗಿರುವ ಅಂಶಗಳನ್ನು ಅರ್ಥೈಸಿಕೊಳ್ಳುವ ಶಿಕ್ಷಣವಂತೂ ಖಂಡಿತವಾಗಿಯೂ ರೂಪುಗೊಳ್ಳಲಿಲ್ಲ, ಇಂದು ಜಗತ್ತಿನಾದ್ಯಂತ ಅಂಕಿ-ಅಂಶ ಆಧಾರಿತ ಅಥವಾ ಪರಿಮಾಣಾತ್ಮಕ ಶಿಕ್ಷಣ ಇದೆಯೇ ಹೊರತು ಗುಣಾತ್ಮಕ ಶಿಕ್ಷಣ ಅಲ್ಲ. ಹಾಗಾಗಿ ಸಾಮಾಜಿಕ ಜವಾಬ್ದಾರಿ, ಸಮಾಜಮುಖಿ, ಜನಮುಖಿ ಮುಂತಾದ ಪರಿಕಲ್ಪನೆಗಳು ಕೇವಲ ವಿವಿಧ ಪಂಥಗಳ ಸಿದ್ಧಾಂತಗಳಾಗಿ ಮಾತ್ರ ಉಳಿಯುವಂತಾಗಿದೆ. ಮಾನವೀಯ ಸಂಬಂಧಗಳನ್ನು ಬೆಸೆಯುವ ಶಿಕ್ಷಣದ ಕಡೆ ಆಲೋಚಿಸುವಷ್ಟು ಸಮಯವಾಗಲಿ ಅಥವಾ ವ್ಯವಧಾನವಾಗಲಿ ಇಂದಿನ ಶಿಕ್ಷಣ ಸಂಸ್ಥೆಗಳಿಗಿಲ್ಲ. ಪರಂಪರಾಗತವಾಗಿ ಬಂದಿರುವ ಸಾಮಾಜಿಕ ಅನಿಷ್ಟಗಳನ್ನು ಪರಿಚಯ ಮಾಡಿಸುವುದಷ್ಟೇ ಶಿಕ್ಷಣದ ಗುರಿಯಾದರೆ ಅದರಿಂದ ಸಾಮಾಜಿಕ ಬದಲಾವಣೆಯಾಗಲಿ, ಸಮಾನತೆಯಾಗಲಿ ಅಥವಾ ಸಾಮಾಜಿಕ

ನ್ಯಾಯವಾಗಲಿ ಸಾಧ್ಯವಿಲ್ಲ. ವರ್ತಮಾನದ ಜೀವನಕ್ರಮವನ್ನು ಸರಿಯಾದ ರೀತಿಯಲ್ಲಿ ಅರ್ಥೈಸಿಕೊಂಡಾಗ ಮಾತ್ರ ಚರಿತ್ರೆಯ ಯಾವ ಕಾಲಘಟ್ಟದ ಮಾನವ ಬದುಕಾದರೂ ತಿಳಿದುಬರಲು ಸಾಧ್ಯ.

ಆಧುನಿಕ ಶಿಕ್ಷಣವು ಮಾರುಕಟ್ಟೆಕೇಂದ್ರಿತವಾಗಿ ಬೆಳೆಯುತ್ತಿರುವ ಸಂದರ್ಭದಲ್ಲಿ ಅದರೊಳಗೆ ಸ್ಥಳೀಯತೆ, ಗ್ರಾಮೀಣ ಬದುಕು, ಸಾಂಸ್ಕೃತಿಕ ಮೌಲ್ಯ ಮುಂತಾದವುಗಳನ್ನು ಕಾಣುವುದು ಕಷ್ಟಸಾಧ್ಯ. ಆದರೆ ಬಂಡವಾಳಕ್ಕೆ ಸೀಮಿತವಾಗಿರುವ ಸಮಾನತೆಯ ಪರಿಕಲ್ಪನೆ ಆಧುನಿಕ ಶಿಕ್ಷಣದಲ್ಲಿದೆ. ಆಧುನಿಕ ಶಿಕ್ಷಣ ಎಂದಾಗ ಬಹುತೇಕ ಅದು ವ್ಯಾಖ್ಯಾನಗೊಳ್ಳುವುದು ಇಂಗ್ಲಿಷ್ ಶಿಕ್ಷಣ ಎಂಬರ್ಥದಲ್ಲಿ. ದೇಶಭಾಷೆಗಳ ಶಿಕ್ಷಣ ಅಲ್ಲಿ ವ್ಯಾಖ್ಯಾನಗೊಳ್ಳುವುದು ಸಾಂಪ್ರದಾಯಿಕ ಎಂಬುದಾಗಿ. ಶಿಕ್ಷಣ ವ್ಯವಸ್ಥೆ ಹೈಟೆಕ್ ಮಾದರಿಯದ್ದಾಗಿರಬೇಕು, ಕಟ್ಟಡಗಳು ನೂತನ ಶೈಲಿಯನ್ನು ಹೊಂದಿರಬೇಕು, ವಿದ್ಯಾರ್ಥಿಗಳಿಗೆ ಅನುಕೂಲತೆಗಳಿರಬೇಕು, ವಿದ್ಯಾರ್ಥಿಗಳಿಗೆ ಆಧುನಿಕ ತಂತ್ರಜ್ಞಾನದ ಅರಿವು ಮೂಡಿಸಬೇಕು ಎನ್ನುವುದು ಸರಿಯಾದ ವಾದ. ಆದರೆ ಅಂಥ ವ್ಯವಸ್ಥೆಯಲ್ಲಿ ಶಿಕ್ಷಣ ಎನ್ನುವದು ಜನರ ಒಳಿತಿಗಾಗಿರಬೇಕೇ ಹೊರತು ಜನರನ್ನು ಶಿಕ್ಷಣಕ್ಕಾಗಿ ಮಾರಾಟ ಮಾಡುವಂತಿರಬಾರದು ಎನ್ನುವುದು ಬಹಳ ಪ್ರಮುಖವಾದ ಅಂಶ. ಪ್ರತಿಷ್ಠೆಯನ್ನೇ ಪ್ರಧಾನವನ್ನಾಗಿಟ್ಟುಕೊಂಡಿರುವ ಶಿಕ್ಷಣ ಸಂಸ್ಥೆಗಳು ಎಲೀಟ್ ನೆಲೆಯಲ್ಲಿಯೇ ಗುರುತಿಸಿಕೊಂಡು ಅದಕ್ಕೆ ಪೂರಕವಾದ ಸಮಾಜದ ಸೃಷ್ಟಿಯತ್ತ



ಕೇಂದ್ರೀಕೃತವಾಗಿರುತ್ತದೆ. ಎಲೀಟ್ ಶಿಕ್ಷಣ ಸಂಸ್ಥೆಗಳೊಳಗಿನ ಸ್ಪರ್ಧೆ ತಂದೊಡ್ಡುವ ಅಪಾಯಗಳ ಅರಿವಿದ್ದರೂ ಅದನ್ನು ಪ್ರಶ್ನಿಸಲಾರದ ಸ್ಥಿತಿ ಹೆತ್ತವರದ್ದು ಅಥವಾ ಪೋಷಕರದ್ದು. ಈ ಸ್ವರೂಪದ ವ್ಯವಸ್ಥೆಗೆ ಭಾಗಿಗಳಾಗುವ ಅನಿವಾರ್ಯತೆ ಅವರದ್ದಾಗಿರುತ್ತದೆ. ಗಮನಿಸಬೇಕಾದ ಇನ್ನೊಂದು ಬೆಳವಣಿಗೆಯೆಂದರೆ ವಸಾಹತು/ಆಧುನಿಕ/ಇಂಗ್ಲಿಷ್ ಕೇಂದ್ರಿತ ಶಿಕ್ಷಣ ವ್ಯವಸ್ಥೆಯು ನಗರ ಭಾರತದ ಭಾಗವಾಗುತ್ತಿರುವುದು. ಐ.ಟಿ. ಹಾಗೂ ಬಿ.ಟಿ. ಶಿಕ್ಷಣವಂತೂ ಗ್ರಾಮೀಣ ಭಾರತದಿಂದ ಸಂಪೂರ್ಣವಾಗಿ ಬೇರ್ಪಟ್ಟ ರೀತಿಯಲ್ಲಿದೆ. ಈ ಬಗೆಯ ಶಿಕ್ಷಣವನ್ನು ಪಡೆದವರ್ಯಾರೂ ಗ್ರಾಮೀಣ ಭಾರತದಲ್ಲಿ ಗುರುತಿಸಿಕೊಳ್ಳಲು ಇಷ್ಟಪಡದೆ ನಗರವಾಸಿಗಳಾಗುತ್ತಾರೆ. ಹಾಗಾದರೆ ಶಿಕ್ಷಣದ ಆಧುನೀಕರಣದ ಲಾಭವನ್ನು ಗ್ರಾಮೀಣ ಭಾರತ ಪಡೆಯುವುದು ಹೇಗೆ ಮತ್ತು ಯಾವಾಗ ಎನ್ನುವ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿದೆ. ಈ ಕಾರಣದಿಂದಾಗಿಯೇ ನಗರಗಳ ಕಡೆಗೆ ವಲಸೆ ಹೆಚ್ಚಾಗಿ ನಗರಕೇಂದ್ರಗಳು ಹಳ್ಳಿಗಳನ್ನು ನುಂಗುತ್ತಾ ಬೆಳೆಯುತ್ತಿರುವುದು. ಶಿಕ್ಷಣವನ್ನು ಪಡೆದವರು ಕೃಷಿಯನ್ನು ಒಂದು ಉದ್ಯೋಗವೆಂಬಂತೆ ಪರಿಗಣಿಸದಿರುವುದರಿಂದಾಗಿ ಕೃಷಿ ವ್ಯವಸ್ಥೆಯು ಕೃಷಿ ಪ್ರಧಾನ ಎಂಬ ಹಣೆಪಟ್ಟಿಯು ಭಾರತದಲ್ಲಿಯೇ ಸೊರಗಲಾರಂಭಿಸಿರುವುದು. ಆಧುನಿಕ ಶಿಕ್ಷಣವು ವಿದೇಶಿ ಸಂಸ್ಕೃತಿ, ವಿದೇಶಿ ಭಾಷೆ, ವಿದೇಶಿ ಆಹಾರ ಪದ್ಧತಿ, ವಿದೇಶಿ ಉಡುಪು, ವಿದೇಶಿ ತಂತ್ರಜ್ಞಾನ, ವಿದೇಶಿ ತಳಿಗಳು ಮುಂತಾದವುಗಳೊಂದಿಗೆ ತಳುಕು ಹಾಕಿಕೊಂಡಿರುವುದರಿಂದಾಗಿ ಸ್ಥಳೀಯ ಬಡತನ, ನಿರುದ್ಯೋಗ, ಅನಕ್ಷರತೆ, ಅಪೌಷ್ಟಿಕತೆ ಮುಂತಾದ ಬಡಜನತೆಯನ್ನು ಕಿತ್ತು ತಿನ್ನುವ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿದಿರುವುದು. ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಕೇವಲ ಸಮೀಕ್ಷೆಗಳು, ಜನಗಣತಿಗಳು, ಅಂಕಿ-ಅಂಶಗಳ ತಯಾರಿ, ಪ್ಯಾಕೇಜ್‌ಗಳನ್ನು ರೂಪಿಸುವುದು, ರಾಜಕೀಯ ಪಕ್ಷಗಳು ತಮ್ಮ ಪ್ರಣಾಳಿಕೆಯಲ್ಲಿ ಸೇರಿಸಿಕೊಳ್ಳುವುದು ಮುಂತಾದ ತೋರಿಕೆಯ ಕ್ರಿಯಾಯೋಜನೆಗಳಷ್ಟೇ ರೂಪುಗೊಳ್ಳುತ್ತಿರುತ್ತವೆ.

ನಗರ ಭಾರತವು ಭಾರತಕ್ಕೆ ಮುಖ್ಯ ಎನ್ನುವ ಮಾತನ್ನು ಒಪ್ಪಿಕೊಂಡೇ ಗ್ರಾಮೀಣ ಭಾರತವೂ ಅಷ್ಟೇ ಮುಖ್ಯ ಎನ್ನುವ ವಾಸ್ತವವನ್ನು ಆಡಳಿತ ನಡೆಸುವವರಿಗೆ ಒಪ್ಪಿಸಬೇಕಾಗಿದೆ. ಸಾಮಾಜಿಕ ನ್ಯಾಯ ಈ ಎರಡೂ ವ್ಯವಸ್ಥೆಗಳ ಸಂದರ್ಭಗಳಲ್ಲಿಯೂ ಮರೀಚಿಕೆಯೇ ಆಗಿದೆ. ನಗರಗಳು ಕಾಸ್ಮೊಪಾಲಿಟನ್, ಮೆಟ್ರೊಪಾಲಿಟನ್, ಮೆಗಲೊಪಾಲಿಟನ್ ಮುಂತಾದ ಸ್ವರೂಪಗಳನ್ನು ಪಡೆದುಕೊಂಡು ಜಗತ್ತಿನ ಎಲ್ಲ ದೇಶಗಳ ಪ್ರಜೆಗಳೂ ವಾಸಿಸುವ ತಾಣಗಳಾಗಿ ಪರಿವರ್ತನೆ ಹೊಂದುತ್ತಿರುವಾಗ ಯಾವ ಸಾಮಾಜಿಕ ನ್ಯಾಯದ ಪ್ರಶ್ನೆಯನ್ನು ಮುಂದಿಡಲು ಸಾಧ್ಯ? ಇನ್ನು ಗ್ರಾಮೀಣ ಭಾರತವಂತೂ ಹಳೆಯ ಊಳಿಗಮಾನ್ಯ ಚೌಕಟ್ಟಿನಿಂದ ಹೊರಬಂದಂತೆ ಕಂಡುಬರುವುದಿಲ್ಲ. ಕೃಷಿ ಉದ್ದಿಮೆಯ ಸ್ವರೂಪವನ್ನು ಪಡೆದುಕೊಂಡು ಬಂಡವಾಳಶಾಹಿಗಳ ಹಿಡಿತಕ್ಕೆ ಬರಲಾರಂಭಿಸಿರುವುದು, ಭೂಮಿಯೇ ಬಂಡವಾಳವಾಗಿ ಪರಿವರ್ತನೆಗೊಳ್ಳುತ್ತಿರುವುದು, ಕೃಷಿ ರಾಸಾಯನಿಕ ಕೃಷಿಯಾಗುತ್ತಿರುವುದು, ಕಾಡು, ಬೆಟ್ಟ, ಗುಡ್ಡಗಳು ಬುಲ್ಡೋಜ್ ಆಗುತ್ತಿರುವುದು ಈ ಮುಂತಾದ ಪ್ರಕ್ರಿಯೆಗಳೆಲ್ಲವೂ ಊಳಿಗಮಾನ್ಯ ಹಾಗೂ ಬಂಡವಾಳಶಾಹಿ ಮನಸ್ಸುಗಳನ್ನು ಒಂದಾಗಿಸಿ ಗ್ರಾಮೀಣ ಚಹರೆಗಳು ಕಳೆದುಹೋಗುವಂತೆ ಮಾಡಿವೆ. ಗಾಂಧೀಜಿಯವರು ಗ್ರಾಮಗಳಲ್ಲಿ ಕಾಣಬಯಸಿದ ರಾಮರಾಜ್ಯ ಭಾವಿಸಿದ ರಾಮರಾಜ್ಯವಾಗಿದೆ. ಏಕೆಂದರೆ ಅಲ್ಲಿರುವ ವಾಸ್ತವವೇ ಬೇರೆ. ಗಾಂಧೀಜಿಯವರ ಕನಸು ಅಥವಾ ಆಶಯ ಸರಿಯಾದುದೇ ಆದರೂ ಅದಕ್ಕೆ ಪೂರಕ ವ್ಯವಸ್ಥೆ ಹಳ್ಳಿಗಳಲ್ಲಿ ಇರಲಿಲ್ಲ. ಅಂಬೇಡ್ಕರ್ ಅವರು ಗ್ರಾಮ ಹಾಗೂ ನಗರ ಸಂದರ್ಭಗಳಲ್ಲಿನ ಸಾಮರ್ಥ್ಯ ಹಾಗೂ ಮಿತಿಗಳೆರಡನ್ನೂ ಸರಿಯಾಗಿಯೇ ಅರ್ಥೈಸಿಕೊಂಡಿದ್ದರು. ಎಲೀಟ್ ಶಕ್ತಿಗಳು ಗ್ರಾಮ ಹಾಗೂ ನಗರಗಳೆರಡರಲ್ಲೂ ಶಕ್ತಿಯುತವಾಗಿಯೇ ಇರುತ್ತವೆ. ದುಡಿಯುವ ವರ್ಗಗಳು ಮಾತ್ರ ಈ ಎರಡೂ ಸಂದರ್ಭಗಳಲ್ಲಿಯೂ ಪರಾಧೀನತೆಗೆ ಒಳಗಾಗಿ ಅಸ್ತಿತ್ವಕ್ಕಾಗಿ ಪರದಾಡುತ್ತಿರುತ್ತವೆ. ಅಂಬೇಡ್ಕರ್ ಅವರು ದೇಶದ ವಿಮೋಚನೆಯ ಜೊತೆ ಜೊತೆಗೆ ಆಗಬೇಕಾದ ಇನ್ನೊಂದು ವಿಮೋಚನೆಯೆಂದರೆ ಅದು ದಲಿತ ವಿಮೋಚನೆ. ಎಂಬುದಾಗಿ ಯಾಕಾಗಿ ಅಷ್ಟೊಂದು ಒತ್ತು ಕೊಟ್ಟು ಮಾತನಾಡುತ್ತಿದ್ದರು ಎನ್ನುವುದನ್ನು ಅಂದು ಹಗುರವಾಗಿ ತೆಗೆದುಕೊಂಡ ಭಾರತ ಇಂದು ಪಶ್ಚಾತ್ತಾಪಪಡುವ ಸ್ಥಿತಿಯಲ್ಲಿದೆ. ವಿಮೋಚನೆ ಎನ್ನುವುದು ಕೇವಲ ತಾಂತ್ರಿಕ ವಿಮೋಚನೆಯಾದರೆ ಅದರಿಂದ ಸಾಮಾಜಿಕ ಬದಲಾವಣೆ ಸಾಧ್ಯವಿಲ್ಲ. ಬಹುತ್ವದ ಭಾರತದಲ್ಲಿ ಆಗಬೇಕಾಗಿರುವುದು ಸಾಮಾಜಿಕ ಅಥವಾ ಸಾಂಸ್ಕೃತಿಕ ವಿಮೋಚನೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂತರಗಳು ಮರೆಯಾಗುವ ವಿಮೋಚನೆ ಸಮಾಜದ ಕೆಳಸ್ತರದ ಜನತೆಗೆ ಗೌರವಯುತವಾದ ಬದುಕನ್ನು ಹಾಗೂ ಐಡೆಂಟಿಟಿಯನ್ನು ನೀಡಲು ಸಾಧ್ಯ. ಸಾಂಸ್ಕೃತಿಕ ವಿಮೋಚನೆಯಲ್ಲಿ ಬಹಳ ಮುಖ್ಯವಾಗಿರುವುದು ಪರಾಧೀನತೆ ಹಾಗೂ ಪರಾವಲಂಬನೆಯಿಂದ ಮುಕ್ತರಾಗುವುದು ಹಾಗೂ ಸ್ವತಂತ್ರ ಆಲೋಚನಾ ಕ್ರಮವನ್ನು ಹೊಂದುವುದು. ಇದು ಸಾಧ್ಯವಾದರೆ ಸಾಮಾಜಿಕ ನ್ಯಾಯ ಎನ್ನುವ ಪರಿಕಲ್ಪನೆಗೆ ಸ್ವಲ್ಪಮಟ್ಟಿನ ನ್ಯಾಯ ಒದಗಿಸಿದಂತಾಗುತ್ತದೆ. ಅಧಿಕಾರ ವಲಯಗಳು ಸೃಷ್ಟಿಸುವ ಭ್ರಮಾಲೋಕದಿಂದ ಹೊರಬಂದು ವಾಸ್ತವದೆಡೆಗೆ ಹೆಜ್ಜೆಹಾಕುವ ಹೊಸ ಒಲವುಗಳು ಸಮಾಜದಲ್ಲಿ ಕಾಣಿಸಿಕೊಳ್ಳಬೇಕಾಗಿದೆ.

**ಡಾ॥ ಕೆ. ಮೋಹನ್‌ಕೃಷ್ಣ ರೈ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ರಾಜಕೀಯ, ಸಾಮಾಜಿಕ, ಸಾಹಿತ್ಯ ಸಾಂಸ್ಕೃತಿಕ ಬದುಕಿಗೆ ಕೊಂಡಿಗಳಂತಿದ್ದ ಹಲವಾರು ಚೇತನಗಳು ವಿದಾಯ ಹೇಳುತ್ತಿವೆ. ಸ್ವಾತಂತ್ರ್ಯಪೂರ್ವದಲ್ಲಿ ನಾಡು, ನುಡಿಯ ಕುರಿತ ತುಡಿತಗಳನ್ನು ಹೊಂದಿ, ಸ್ವಾತಂತ್ರ್ಯಾನಂತರವೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಕ್ರಿಯಾಶೀಲರಾಗಿದ್ದ ಪ್ರತಿಭೆಗಳಲ್ಲಿ ಒಬ್ಬರಾಗಿದ್ದ ದೇಜಗೌ ಎಂದೇ ಖ್ಯಾತರಾಗಿದ್ದ ದೇ. ಜವರೇಗೌಡರು ತಮ್ಮ ೯೮ನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಶೂದ್ರ ಪ್ರಜ್ಞೆಯನ್ನು ಜಾಗೃತಗೊಳಿಸಿದ ಕುವೆಂಪು ಅವರ ಶಿಷ್ಯರಾಗಿದ್ದ ದೇಜಗೌ ಬದುಕಿನುದ್ದಕ್ಕೂ ಕ್ರಿಯಾಶೀಲರಾಗಿದ್ದವರು. ಬಡತನದ ಕುಟುಂಬದಲ್ಲಿ ಜನಿಸಿದ ದೇಜಗೌ ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಸ್ನಾತಕೋತ್ತರ ಪದವಿ ಪಡೆದು ಅದೇ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಅಧ್ಯಾಪನ ವೃತ್ತಿಯನ್ನು ೧೯೪೬ರಲ್ಲಿ ಆರಂಭಿಸಿದರು. ಅಧ್ಯಾಪನ ವೃತ್ತಿಯ ಜೊತೆಗೇ ಸೃಜನ, ಸೃಜನೇತರ ಸಾಹಿತ್ಯ ಕ್ಷೇತ್ರದಲ್ಲಿ ಅಪಾರ ಕೆಲಸ ಮಾಡಿದವರು. ಆಡಳಿತಾತ್ಮಕ ಹುದ್ದೆಗಳನ್ನು ನಿರ್ವಹಿಸಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕ ಸ್ಥಾನದಿಂದ ೧೯೬೯ರಲ್ಲಿ ಅದೇ ವಿಶ್ವವಿದ್ಯಾಲಯದ ಕುಲಪತಿಯ ಸ್ಥಾನಕ್ಕೇರುವವರೆಗೂ ಬೆಳೆದದ್ದು ಅವರ ಪ್ರತಿಭೆ, ಪರಿಶ್ರಮವನ್ನು ಸಾಬೀತುಪಡಿಸುತ್ತದೆ.

ಹಲವಾರು ಹಳೆಗನ್ನಡ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಕನ್ನಡ ಗ್ರಂಥ ಸಂಪಾದನಾ ಪ್ರಕಾರಕ್ಕೊಂದು ಮಾರ್ಗವನ್ನೇ ರೂಪಿಸಿದ್ದಾರೆ. ಕನ್ನಡ ಮಾತ್ರವಲ್ಲದೆ ಇಂಗ್ಲಿಷ್‌ನಲ್ಲೂ ಹಲವಾರು ಕೃತಿಗಳನ್ನು ರಚಿಸಿದ ದೇಜಗೌ ಅವರು ರಷ್ಯನ್ ಸಾಹಿತಿ ಟಾಲ್‌ಸ್ಟಾಯ್ ಅವರ 'ವಾರ್ ಆ್ಯಂಡ್ ಪೀಸ್' ಎಂಬ ವಿಶ್ವವಿಖ್ಯಾತ ಕಾದಂಬರಿಯನ್ನು 'ಯುದ್ಧ ಮತ್ತು ಶಾಂತಿ' ಎಂಬ ಹೆಸರಿನಲ್ಲಿ ಅನುವಾದಿಸಿ ಕನ್ನಡ ಸಾಹಿತ್ಯಲೋಕಕ್ಕೆ ಕೊಟ್ಟಿದ್ದಾರೆ. ಇಂಥ ಹಲವಾರು ಮಹತ್ವದ ಕೃತಿಗಳನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಜಾನಪದ, ಭಾಷಾಶಾಸ್ತ್ರ, ಗ್ರಂಥ ಸಂಪಾದನೆ, ಅನುವಾದ ಹೀಗೆ ಹಲವಾರು ಪ್ರಕಾರಗಳಲ್ಲಿ ಅಪಾರ ಕೆಲಸ ಮಾಡಿದ ದೇ. ಜವರೇಗೌಡರು ತಮ್ಮ ಇಳಿವಯಸ್ಸಿನಲ್ಲಿ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರಕಬೇಕೆಂಬ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಕೊಂಡರು. ಅದಕ್ಕಾಗಿ ಅವರು ದೆಹಲಿಯವರೆಗೂ ಹೋಗಿ ಕೇಂದ್ರ ಸರಕಾರದ ಮೇಲೆ ಒತ್ತಡ ತಂದರು. ತಮ್ಮ ಆರೋಗ್ಯವನ್ನೂ ಲೆಕ್ಕಿಸದೆ ಆಮರಣ ಉಪವಾಸ ಸತ್ಯಾಗ್ರಹ ನಡೆಸಿದರು. ಕನ್ನಡ ಆಡಳಿತ ಭಾಷೆಗಾಗಿಯೂ ಅವರು ಹೋರಾಡಿದ್ದಾರೆ. ಕನ್ನಡ ಉಪನ್ಯಾಸಕನಾಗಿ, ವಿಶ್ವವಿದ್ಯಾಲಯದ ಕುಲಪತಿಯಾಗಿ, ವಿವಿಧ ಕ್ಷೇತ್ರಗಳಲ್ಲಿ ಆಡಳಿತಾಧಿಕಾರಿಯಾಗಿ ಕೆಲಸಮಾಡಿ ನಿವೃತ್ತರಾದನಂತರ ಅವರು ವಿಶ್ರಾಂತ ಜೀವನ ನಡೆಸಬಹುದಿತ್ತು. ಆದರೆ



# ಕಳಚಿದ ಕೊಂಡಿ ದೇ. ಜವರೇಗೌಡ

ಅಧ್ಯಾಪನ, ಆಡಳಿತಾತ್ಮಕ ಜವಾಬ್ದಾರಿಗಳೊಂದಿಗೆ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸುಮಾರು ೧೩೫ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ದೇಜಗೌ ಅವರದು ಕ್ರಿಯಾಶೀಲ ವ್ಯಕ್ತಿತ್ವ. ಜಾನಪದ ಕ್ಷೇತ್ರಕ್ಕೊಂದು ಅಧ್ಯಯನದ ಶಿಸ್ತು ಕೊಟ್ಟು ಶೈಕ್ಷಣಿಕ ಕ್ಷೇತ್ರದಲ್ಲಿ ಜಾನಪದವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವಂತೆ ಮಾಡುವಲ್ಲಿ ಮಹತ್ವದ ಪಾತ್ರವಹಿಸಿದವರು ದೇಜಗೌ. ಜಾನಪದ ಕೇವಲ ಬಾಯಿಯಿಂದ ಕಿವಿಗೆ ತಲುಪಿ ಮುಂದೊಂದು ದಿನ ಕ್ಷಯಿಸಿ ಹೋಗಬಾರದೆಂಬ ಕಾಳಜಿಯಿಂದ ರಾಜ್ಯದಲ್ಲಿ ಮೊದಲ ಬಾರಿಗೆ ಜಾನಪದ ವಸ್ತುಸಂಗ್ರಹಾಲಯವನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗದಲ್ಲಿ ಸ್ಥಾಪಿಸಿದ ಕೀರ್ತಿ ದೇಜಗೌ ಅವರಿಗೆ ಸಲ್ಲುತ್ತದೆ. ಅವರ ಅಂದಿನ ಕನಸು ಇಂದು ರಾಜ್ಯದ ಹಲವಾರು ಕಡೆ ಜಾನಪದ ಕ್ಷೇತ್ರದಲ್ಲಿ ಅಧ್ಯಯನ, ವಸ್ತುಸಂಗ್ರಹಾಲಯ ಸ್ಥಾಪನೆ ಅಂತಿಮವಾಗಿ ಜಾನಪದ ವಿಶ್ವವಿದ್ಯಾಲಯವೇ ಸ್ಥಾಪನೆಯಾಗುವುದರ ಮೂಲಕ ಸಾಕಾರಗೊಂಡಿದೆ. ಜಾನಪದ ಕ್ಷೇತ್ರದ ಅವರ ಸಾಧನೆಯನ್ನು ಪರಿಗಣಿಸಿ ಜಾನಪದ ಸಮ್ಮೇಳನದ ಅಧ್ಯಕ್ಷರನ್ನಾಗಿಯೂ ಆಯ್ಕೆ ಮಾಡಲಾಗಿತ್ತು. ಗ್ರಾಮೀಣ, ಕೃಷಿ ಕುಟುಂಬದಿಂದ ಬಂದ ದೇಜಗೌ ಜಾನಪದ ಕ್ಷೇತ್ರದಲ್ಲಿ ಅಪಾರ ಆಸಕ್ತಿ, ಕಾಳಜಿಯನ್ನು ಹೊಂದಿದ್ದೇ ಅವರು ನಿರ್ಲಕ್ಷಿತವಾಗಿದ್ದ ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡಲು ಪ್ರೇರಣೆಯಾಗಿತ್ತು.

ಹಳೆಗನ್ನಡ, ನಡುಗನ್ನಡ, ಆಧುನಿಕ ಕನ್ನಡ ಸಾಹಿತ್ಯ ಹೀಗೆ ಎಲ್ಲ ಕಾಲಘಟ್ಟದ ಸಾಹಿತ್ಯ ಪ್ರಕಾರಗಳಲ್ಲಿ ಅಧ್ಯಯನ ಮಾಡಿದ ದೇಜಗೌ ಅವರು ನಾಡು, ನುಡಿಯ ವಿಷಯದಲ್ಲಿ ಅವರು ನಿವೃತ್ತರಾದ ನಂತರವೂ ಕ್ರಿಯಾಶೀಲವಾಗಿ ಕೆಲಸ ಮಾಡಿದರು. ಕರ್ನಾಟಕ ಸರಕಾರ ಮತ್ತು ಕನ್ನಡ ಸಾರಸ್ವತ ಲೋಕ ಅವರ ಪರಿಶ್ರಮಕ್ಕೆ ಮನ್ನಣೆ ಕೊಟ್ಟು ಗೌರವಿಸಿದೆ. ಕರ್ನಾಟಕ ರತ್ನ ಪ್ರಶಸ್ತಿಯಿಂದ ಸೋವಿಯತ್ ಲ್ಯಾಂಡ್ ಪ್ರಶಸ್ತಿವರೆಗೆ, ಪಂಪ ಪ್ರಶಸ್ತಿ, ನಾಡೋಜ ಪ್ರಶಸ್ತಿ ಹಲವಾರು ಪ್ರಶಸ್ತಿಗಳು ದೇಜಗೌ ಅವರಿಗೆ ದೊರೆತಿವೆ. ೧೯೭೦ರಲ್ಲಿ ಬೆಂಗಳೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನೂ ಕೊಟ್ಟು ಅವರನ್ನು ಅವರ ಕಾರ್ಯವನ್ನು ಗೌರವಿಸಲಾಗಿತ್ತು.

ಸಾರ್ಥಕವಾದ ತುಂಬು ಜೀವನ ನಡೆಸಿದ, ಕ್ರಿಯಾಶೀಲ ವ್ಯಕ್ತಿತ್ವದ ದೇಜಗೌ ಕೊನೆಗಾಲದಲ್ಲಿ ಕುಟುಂಬದ ಸದಸ್ಯರ ಹಿತಾಸಕ್ತಿಗಾಗಿ ಉಪವಾಸ ಸತ್ಯಾಗ್ರಹ ನಡೆಸಿ ಟೀಕೆಗೆ ಗುರಿಯಾದರು. ಅದೇನೇ ಇದ್ದರೂ ದೇಜಗೌ ಕನ್ನಡ, ಕರ್ನಾಟಕ, ಕನ್ನಡಿಗರಿಗೆ ಕೊಟ್ಟ ಕೊಡುಗೆ ಅಪಾರವಾದದ್ದು. ವಯೋಸಹಜ ದೌರ್ಬಲ್ಯಗಳಾಚೆಗೂ ದೇಜಗೌ ಅವರ ಕೊಡುಗೆ ಅನನ್ಯವಾದದ್ದು. ಅವರ ಶ್ರಮ, ಪ್ರತಿಭೆಯನ್ನು ಗೌರವಿಸುತ್ತ ನಾಡು, ನುಡಿಗಾಗಿ ಅವರು ಕಂಡ ಕನಸುಗಳನ್ನು ಪೂರ್ಣಗೊಳಿಸುವುದು ಇಂದಿನ ಪೀಳಿಗೆಯ ಜವಾಬ್ದಾರಿ

**ಶ್ರೀ ಸುಮಿತ್ರಾಸುತ ಅಗಸಬಾಳ**
ನಂ. ೧೪, ವೈಯಾಲಿಕಾವಲ್, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩




❑ ಡಾ॥ ಎ. ಪುಗಳೇಂದಿ



# ಸ್ವಾಮಿತ್ವ

ಶ್ರೇಯ ಗಂಗಾ ನಗರದ ಸಿ.ಬಿ.ಐ. ಬಸ್ ನಿಲ್ದಾಣದಲ್ಲಿ ಮೆಜೆಸ್ಟಿಕ್ ಬಸ್ಸಿಗಾಗಿ ಕಾದಿರುವಾಗ ಅವಳ ಕಛೇರಿಯಲ್ಲಿ ಕ್ಯಾಷಿಯರ್ ಆಗಿ ಸೇವೆ ಸಲ್ಲಿಸುತ್ತಿರುವ ಕಾರ್ತಿಕ್ ತನ್ನ ಟೂ–ವೀಲರಲ್ಲಿ ಅವಳ ಮುಂದೆ ಪ್ರತ್ಯಕ್ಷನಾದ.

“ಹಾಯ್ ಶ್ರೇಯ ! ಗುಡ್ ಮಾರ್ನಿಂಗ್. ದಿನಾಗಲೂ ಇಲ್ಲಿಂದಲೇ ಬಸ್ ಹತ್ತುತ್ತಿಯಾ ? ಬೈದ ಬೈ ನಾನು ಸ್ವಲ್ಪ ಅವಸರ ಕೆಲಸದ ಮೇಲೆ ಮೈಸೂರಿಗೆ ಹೋಗಬೇಕಾಗಿದೆ. ದಯಮಾಡಿ ಈ ಲೀವ್‌ಲೆಟರನ್ನು ಮ್ಯಾನೇಜರಿಗೆ ತಲುಪಿಸುವೆಯಾ ?” ಎನ್ನುತ್ತ ಒಂದು ದಿನದ ರಜೆ ಬೇಡಿ ಆಫೀಸ್ ಮ್ಯಾನೇಜರಿಗೆ ಮನವಿ ಮಾಡಿದ್ದ ಪತ್ರವನ್ನು ಅವಳಿಗೆ ನೀಡಿದನು.

“ಓ.ಕೆ. ಕಾರ್ತಿಕ್; ವಿತ್‌ಪ್ಲೆಷರ್ ನಾಳೆ ಬಂದುಬಿಡ್ತಿ ತಾನೆ ? ಆಲ್ ದ ಬೆಸ್ಟ್. ಹ್ಯಾಪಿ ಜರ್ನಿ; ಜಾಗರೂಕತೆಯಿಂದ ಗಾಡಿ ನಡೆಸಿ ಮಹರಾಯರೆ” ಎಂದವಳಿಗೆ, “ಥ್ಯಾಂಕ್‌ಯು ಮಹಾರಾಣಿಯವರೇ ! ತಮ್ಮ ಆಜ್ಞೆಯನ್ನು ತಪ್ಪದೆ ಪರಿಪಾಲಿಸುತ್ತೇನೆ” ಎನ್ನುತ್ತ , ‘ಸರ್ರ್....’ ಎಂದು ಗಾಡಿಯೊಂದಿಗೆ ಮಾಯವಾದ ಕಾರ್ತಿಕ್.

ಈ ದೃಶ್ಯವನ್ನು ದೂರದಿಂದ ನೋಡುತ್ತಿದ್ದ ಮಾಧವನ್‌ಗೆ ತಡೆದುಕೊಳ್ಳಲಾಗದ ಹೊಟ್ಟೆಕಿಚ್ಚು ಹೊತ್ತಿ ಹರಿಯಿತು. ಕಂಗಳೆರಡು ಬೆಂಕಿಯಂತೆ ಕೆಂಪಾದವು. ಮೆಲ್ಲಗೆ ಶ್ರೇಯಳತ್ತ ಬಂದು ಮೌನ ತಾಳಿ ನಿಂತ.

“ಏನು ಮಹಾರಾಜರಿಗೆ ಕೋಪವೇ ? ನಾರ್ಮಲ್ ಮೂಡಿನಲ್ಲಿಲ್ಲ ಅಂತ ಅನಿಸುತ್ತೆ” ಎಂದ ಶ್ರೇಯಳತ್ತ ಕೋಪದ ನೋಟ ಬೀರಿದ.

ಶ್ರೇಯ ! ಆ ಕಾರ್ತಿಕ್ ಯಾವುದೋ ಪತ್ರವನ್ನು ಕೊಟ್ಟ ಹಾಗಿದೆ ನಿನ್ನ ಕೈಗೆ ?

“ಹೌದು, ಕೊಟ್ಟ , ಏನೀಗ ?”

“ಯಾವ ಲೆಟರ್ ಅದು ?”

“ಯಾಕೆ ಕೇಳ್ತೀಯಾ ?”

“ಆ ಲೆಟರನ್ನು ತೋರಿಸು. ಈಗಲೇ ನೋಡಬೇಕು ನಾನು ಅದನ್ನು” ಎಂದು ಅಧಿಕಾರ ವಾಣಿಯಿಂದ ಕೇಳಿದ ಮಾಧವನ್.

“ಯಾಕೆ ನೋಡಬೇಕು ?” ಎಂದು ಪ್ರಶ್ನಿಸಿದಳು ಶ್ರೇಯ.

“ನಾನು ನೋಡಲೇ ಬೇಕು. ಕಾರಣ ನಿನ್ನ ಹತ್ತಿರ ಹೇಳಿಕೊಳ್ಳೋಕೆ ಸಮಯವಿಲ್ಲ” ಎನ್ನುತ್ತ ಅವಳ ಭುಜವನ್ನು ಅಲಂಕರಿಸಿದ್ದ ವ್ಯಾನಿಟಿ ಬ್ಯಾಗನ್ನು ಬಲವಂತವಾಗಿ ಕಸಿದು, ಜಿಪ್ಪನ್ನು ತೆರೆದು, ಆ ಪತ್ರವನ್ನು ಕೈಗೆತ್ತಿಕೊಂಡನು.

ಮಾಧವನ ಈ ಅನಾಗರಿಕ ವರ್ತನೆಯಿಂದ ಆಘಾತಕ್ಕೊಳಗಾದ ಶ್ರೇಯ, ಅದು ಸಾರ್ವಜನಿಕ ಸ್ಥಳವಾಗಿದ್ದರಿಂದ ಶಾಂತವಾಗಿ ಅವನಿಂದ ಮತ್ತೆ ಬ್ಯಾಗನ್ನು ಪಡೆದು ಭುಜಕ್ಕೆ ನೇತಾಕಿಕೊಂಡಳು.

“ಏನಾಯಿತು ನಿನಗೆ  ಹುಚ್ಚೇನಾದರೂ ಹಿಡಿದಿದೆಯೇ ಮಾಧವನ್ ? ಪಬ್ಲಿಕ್ ಪ್ಲೇಸಲ್ಲಿ ಅಸಭ್ಯವಾಗಿ ವರ್ತಿಸಬೇಡ ಪ್ಲೀಸ್” ಎಂದೆಲ್ಲ ಅವಳು ಹೇಳಿದ್ದನ್ನು ಕಿವಿಗೆ ಹಾಕಿಕೊಳ್ಳದೆ, ಆ ಪತ್ರವನ್ನು ಓದಿ, ಅದು ಕೇವಲ ಲೀವ್ ಲೆಟರ್ ಎಂದು ತಿಳಿದು ನಿಟ್ಟುಸಿರುಬಿಟ್ಟು ಅವಳಿಗೆ ಕೊಟ್ಟ .

“ಅವನು ಲೀವ್‌ಲೆಟರ್ ಕೊಟ್ಟ ಕೂಡಲೇ ಯಾಕೆ  ತಗೊಂಡೆ ? ನೀನು ಕೊರಿಯರ್ ಸರ್ವಿಸ್ ಏನಾದರೂ ನಡೆಸುತ್ತಿದ್ದಿಯಾ ? ಇವತ್ತು ಲೀವ್‌ಲೆಟರ್ ಕೊಡುತ್ತಾನೆ. ನಾಳೆ...”

“ಯಾಕೆ ನಿಲ್ಲಿಸಿಬಿಟ್ಟೆ ಹೇಳು. ನಾಳೆ ಲವ್‌ಲೆಟರ್ ಕೊಡಬಹುದು ಅಂತ ಹೇಳ್ತಿಯಾ ?”

“ನಿನಗೆ ಅರ್ಥವಾದರೆ ಸರಿ.”

“ಕೊಟ್ಟರೆ ಕೊಡಲಿ ಬಿಡು. ಅವನು ಹಾಗೇನಾದರೂ ಕೊಟ್ಟರೂ ತೆಗೆದುಕೊಳ್ತೀನಿ. ಏನೀಗ ?” ಎಂದು ಸ್ವಲ್ಪ ಖಾರವಾಗಿಯೇ ಹೇಳಿದಳು ಶ್ರೇಯ.

ಶ್ರೇಯಳ ಮಾತನ್ನು ತಡೆಯಲಾರದೆ ಕೋಪದಿಂದ ಅವಳ ಕಡೆ ತಿರುಗಿ ನೋಡಿದ ಮಾಧವನ್, ಯಾರೂ ನಿರೀಕ್ಷಿಸದ ಸಮಯದಲ್ಲಿ ‘ರಪ್’ ಎಂದು ಅವಳಿಗೆ ಕಪಾಳ ಮೋಕ್ಷ ಮಾಡೇಬಿಟ್ಟ .

ದೀಪಾವಳಿ ಪಟಾಕಿಯನ್ನು ನೆನಪಿಸಿದ ಅವನ ಏಟಿನ ಸದ್ದಿಂದ ಆ್ಯಪಲ್ ಹಣ್ಣಿನಂತೆ ಕೆಂಪಾಯಿತು ಶ್ರೇಯಳ ಕೆನ್ನೆ. ಒಂದು ಕ್ಷಣ ಅವಳನ್ನು ವಿವಸ್ತ್ರಗೊಳಿಸಿ ಮೆರವಣಿಗೆ ಮಾಡಿಸಿದ ಹಾಗೆ ಅವಮಾನಕ್ಕೆ ತುತ್ತಾದಳವಳು. ಬಸ್ ನಿಲ್ದಾಣದಲ್ಲಿದ್ದ ಜನರೆಲ್ಲ ಅವಳನ್ನೇ ನೋಡಿದ ಹಾಗೆ ಅನಿಸಿತು. ಸುತ್ತಮುತ್ತಲೂ ಬಸ್ ಪ್ರಯಾಣಿಕರು ಇದ್ದದ್ದರಿಂದ ಆ ಅವಮಾನವನ್ನು ತಡೆದುಕೊಂಡಳು ಶ್ರೇಯ.

ಕಳೆದ ಒಂದು ವರ್ಷದಿಂದ ಮಾಧವನ್‌ಅನ್ನು ಪ್ರೀತಿಸುತ್ತಿದ್ದ ಶ್ರೇಯಳ ಮನಸ್ಸಿನಲ್ಲಿ ಅವನ ‘ಸ್ವಾಮಿತ್ವ’ವೆಂಬುವ ‘ಪೊಸೆಸಿವ್‌ನೆಸ್’ ಹಾಗೂ ‘ಶಾರ್ಟ್ ಟೆಂಪರ್’ ಎನ್ನುವ ಮುಂಗೋಪ ಬೀಳ್ಬಿಟ್ಟಿದ್ದನ್ನು ಕಂಡು ಅವನ ಬಗ್ಗೆ ಮರು ಪರಿಶೀಲನೆ ಮಾಡಬೇಕಾಗಿರುವ ಸಂದರ್ಭ ಬಂದಿದೆ ಎಂಬ ಜ್ಞಾನೋದಯವಾಯಿತು.

ಎರಡು ತಿಂಗಳ ನಂತರ –

ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಲಾಲ್‌ಬಾಗ್‌ನಲ್ಲಿ

ಆಯೋಜಿಸಿದ್ದ ಫಲ-ಪುಷ್ಪಗಳ ಪ್ರದರ್ಶನವನ್ನು ವೀಕ್ಷಿಸೋಕೆ ಬಂದಿದ್ದಳು ಶ್ರೇಯ. ಪ್ರಿಂಟೆಡ್ ಕಾಟನ್ ಸೀರೆಯಲ್ಲಿ ದೇವತೆಯೊಬ್ಬಳು ಧರೆಗಿಳಿದ್ದಾಗೆ ಕಾಣಿಸಿಕೊಂಡಳವಳು. ಲಾಲ್‌ಬಾಗಿನ ಮೆಯಿನ್ ಗೇಟಿನತ್ತ ಆಟೋದಿಂದ ಇಳಿದವಳಿಗಾಗಿಯೇ ಕಾದು ನಿಂತಿದ್ದ ಮಾಧವನ್ ಹತ್ತಿರ ನಡೆದು ಬಂದಳು. ಅವಳನ್ನು ಕಂಡ ಕೂಡಲೇ ಅರಳಿದ ಅವನ ಮುಖ, ಅವಳ ಉಡುಗೆಯನ್ನು ಕಂಡು ಸಾಕಷ್ಟು ಬದಲಾವಣೆ ಆಯಿತು.

ಸ್ವಲ್ಪವು ಸಹನೆ ಇಲ್ಲದವನಂತೆ ನೇರವಾಗಿ ಕೇಳತೊಡಗಿದನವನು.

"ಇಲ್ಲಿ ಬರುವಾಗ ಯಾವ ಡ್ರೆಸ್ ತೊಟ್ಟುಕೊಂಡು ಬರೋಕೆ ಹೇಳಿದೆ ನಿನಗೆ ?"

"ನೆನಪಿಲ್ಲ. ನನಗೆ ಇಷ್ಟವಾದ ಸೀರೆಯನ್ನು ಉಟ್ಟುಕೊಂಡು ಬಂದಿದ್ದೇನೆ ನಾನಿಲ್ಲಿ."

"ಸೀರೆ ಬೇಡ; ಒಳ್ಳೆ ಚುಡಿದಾರ್ ಡ್ರೆಸ್ ಮಾಡಿಕೊಂಡು ಬಾ ಎಂದ್ಹೇಳಿಲ್ಲವಾ ನಾನು ?"

"ಯಾಕೆ ಈಗ ಏನಾಯಿತು ? ಸೀರೆಗಿಂತ ಒಳ್ಳೆ ಡ್ರೆಸ್ಸುಂಟೆ ? ಇಷ್ಟವಾದರೆ ನನ್ನನ್ನು ನೋಡು; ಇಲ್ಲವಾದರೆ ಕಣ್ಣು ಮುಚ್ಚಿಕೋ !"

ಅವರ ಸಂಭಾಷಣೆಯನ್ನು 'ಫ್ಲವರ್ ಶೋ' ವೀಕ್ಷಿಸೋಕೆ ಬಂದವರೆಲ್ಲಾ ಗಮನಿಸುತ್ತಿರುವುದನ್ನು ಕಂಡು ತನ್ನ ಧ್ವನಿಯನ್ನು ತಗ್ಗಿಸಿ ಮಾತಾಡೋಕ್ಕೆ ಪ್ರಯತ್ನಿಸಿದಳು ಶ್ರೇಯ.

"ನನಗೆ ನಿನ್ನನ್ನು ಸೀರೆಯಲ್ಲಿ ನೋಡೋಕೆ ಇಷ್ಟವಿಲ್ಲ. ನನ್ನ ಮಾತನ್ನು ಕೇಳೋಕೆ ನೀನು ತಯಾರಿಲ್ಲ" ಎಂದು ಸಿಟ್ಟಿನಿಂದ ನುಡಿದ ಮಾಧವನನ್ನು ನೋಡಿ,

"ಅದಕ್ಕೆ ನಾನೇನು ಮಾಡಲಿ ? ಬಾಳಲ್ಲಿ ಇದೇನು ದೊಡ್ಡ ಸಮಾಚಾರ ? ಯಾವ ಡ್ರೆಸ್ ತೊಟ್ಟುಕೊಂಡು ಬಂದರೇನು ? ಬೇರೆ ವಿಷಯವಿದ್ದರೆ ಮಾತನಾಡು" ಎನ್ನುತ್ತ ಸಮಸ್ಯೆಯನ್ನು ದಿಕ್ಕು ತಿರುಗಿಸಿದಳು ಶ್ರೇಯ.

"ಶ್ರೇಯ ! ನಾನು ನಿನ್ನ ಭಾವಿ..."

"ಓಹೋ ! ಭಾವಿ ಗಂಡನಾಗುವವನು ಎಂದ್ಹೇಳೋಕೆ ಬರ್ತಿಯಾ ? ಈಗ ನಡೆಯುತ್ತಿರುವುದು ವರ್ತಮಾನ ಕಾಲ, ಭವಿಷ್ಯಕಾಲ ಬರಲಿ; ಆಮೇಲೆ ನೋಡೋಣ. ನಿನ್ನ ಭಾವಿ ಹೆಂಡತಿಯ ಮೇಲೆ ಈಗಲೇ ಅಧಿಕಾರವನ್ನು ಚಲಾಯಿಸಬೇಡ ಮಿಸ್ಟರ್ ಮಾಧವನ್ ! ನಾನು ಅಂತಹ ಅಂತಸ್ಥನ್ನು ಪಡೆದ ಮೇಲೆ ನಿನ್ನ ಬೇಕು-ಬೇಡಗಳನ್ನು ಚರ್ಚಿಸಿ ತೀರ್ಮಾನಕ್ಕೆ ಬರೋಣ. ಅಲ್ಲಿಯ ತನಕ ಸ್ವಲ್ಪ ಬಾಯಿ ಮುಚ್ಚಿಕೊಂಡು ನನ್ನ ಭಾವನೆಗಳಿಗೆ ಬೆಲೆ ಕೊಡುತ್ತೀಯಾ ?"

ಶ್ರೇಯ ಹೇಳಿ ಮುಗಿಸುವುದರಲ್ಲಿ ಕೋಪದ ಶಿಖರವೇರಿದ ಮಾಧವನ್ ಬಾಯಿಗೆ ಬಂದ ಹಾಗೆ ಅವಳನ್ನು ಏಕವಚನದಲ್ಲಿ ಬೈಯ್ಯೋಕೆ ಶುರು ಮಾಡಿದನು.

"ಏನೇ ! ಎಷ್ಟೊಂದು ಸೊಕ್ಕಿರಬೇಕು ನಿನಗೆ ? ನನ್ನ ಮಾತಿಗೆ ಎದುರು ಮಾತಾಡತೀಯಾ ?" ಎಂದು ಕ್ರೋಧದಿಂದ ಕೇಳಿದನು.

"ಸಾಕು ನಿಲ್ಲಿಸೋ; ನಿನಗೆ ನನ್ನ ಮೇಲೆ ಇಷ್ಟೊಂದು ಒಡೆತನ, ಯಜಮಾನಿಕೆ, ಸ್ವಾಮಿತ್ವ ಇರುತ್ತದೆಂದು ಭಾವಿಸಿರಲಿಲ್ಲ ನಾನು. ಯಾವ ರೀತಿ ಬೇಕಾದರೂ ವರ್ತಿಸೋಕೆ ಹೆಂಗಸರು, ಗಂಡಸರ ಕೈಗೊಂಬೆಗಳಲ್ಲ ತಿಳಿದುಕೊ ಮೊದಲು" ಎಂದು ಮಾತಿನ ಬಾಂಬ್ ಹಾರಿಸಿದಳು ಶ್ರೇಯ.

"ಹರೇ ! ಹಾಗೇನಾ ? ಈಗ ನನಗೆ ಎಲ್ಲಾ ಗೊತ್ತಾಯಿತು; ನಿನ್ನ ಆಫೀಸ್ ಕ್ಯಾಷಿಯರ್ ಕಾರ್ತಿಕ್ ಜತೆ ನಿನಗೆ ಅಫೇರ್ಸ್ ಇರುತ್ತದೆ ಅಂತ ನನಗೆ ಅನುಮಾನವಿತ್ತು. ಈಗ ನನ್ನ ಸಂಶಯ ಸರಿಯೆಂದೆನಿಸುತ್ತದೆ."

"ಛೇ ! ಮುಚ್ಚುತ್ತಿಯಾ ಬಾಯನ್ನು ? ಇಂತಹ ಒಂದು ಅನುಮಾನದ ಪ್ರಾಣಿಯನ್ನು ನಾನೆಲ್ಲೂ ಇದಕ್ಕಿಂತ ಮುಂಚೆ ನೋಡಿಲ್ಲ."

"ನೀನು ಯಾರ ಹತ್ತಿರವಾದರೂ ಸೋಷಿಯಲಾಗಿ ಮೂವ್ ಆಗಬಹುದು, ಅದನ್ನು ನೋಡಿ ನೋಡದಹಾಗೆ ಬಿದ್ದಿರಬೇಕಾ ನಾನು ?"

"ಯೂ ಸೀ ಮಿಸ್ಟರ್ ಮಾಧವನ್ ! ನೀನಿನ್ನು ನನ್ನ ಗಂಡನಾಗಿಲ್ಲ ತಿಳಿದುಕೋ. ನಾಳೆ ಕಥೆ ನಾಳೆ ಮಾತನಾಡೋಣ. ಇವತ್ತಿನ ವಿಚಾರವನ್ನು ಮಾತ್ರ ಈಗ ಚರ್ಚಿಸೋಣ."



"ಆಹಾ ! ಇಷ್ಟೊಂದು ತಿಮಿರಾ ನಿನಗೆ ? ಅದಕ್ಕೆ ಹೆಂಗಸರನ್ನು ಕೆಲಸ ಮಾಡೋಕೆ ಕಳಿಸಬಾರದೆಂಬುದು. ಸಂಪಾದಿಸುವ ಅಹಂ ನಿನಗೆ. ನಿನ್ನಂತ ಹೆಂಗಸರಿಗೆ ಹಿತ ಬಯಸುವವರಿಗಿಂತ ಆಫೀಸ್ ಕೆಲಸನೇ ಮುಖ್ಯವಾಗಿರುತ್ತದೆ" ಎಂದೆಲ್ಲಾ ಮನಸ್ಸಿಗೆ ಬಂದ ಹಾಗೆ ಅವಳಿಗೆ ಕಿಡಿ ಕಾರಿದನು ಮಾಧವನ್. ಅವನನ್ನು ತೊರೆದು ತನ್ನ ಗೆಳತಿಯೊಬ್ಬಳಿಗೆ ಫೋನ್ ಮಾಡಿ ಕರೆಸಿ ಅಂದಿನ ಫಲ-ಪುಷ್ಪ ಪ್ರದರ್ಶನವನ್ನು ನೋಡಿ ಬಂದಳು ಶ್ರೇಯ.

ತಿಂಗಳೊಂದು ಉರುಳ್ಹೋಯಿತು ಲಾಲ್‌ಬಾಗ್ ಘಟನೆಯ ನಂತರ ಶ್ರೇಯಳನ್ನು ಹಲವಾರು ಸಮಯ ಭೇಟಿ ಮಾಡೋಕೆ ಮಾಧವನ್ ಪ್ರಯತ್ನಿಸಿದರೂ ಎಲ್ಲ ವ್ಯರ್ಥವಾದವು.

ಶ್ರೇಯಳ ಮನೆಗೆ ಮಾಧವನ್ ಮನೆಯಿಂದ ಬಂದ ಫೋನ್ ಕರೆಯನ್ನು ಸ್ವೀಕರಿಸಿದಳು ಅವಳ ತಾಯಿ ಪಾರ್ವತಿ. ಮಾಧವನ ತಂದೆ ಮಾತನಾಡಿದರು. "ನಾಳೆ ಶುಭ ದಿನವಾಗಿದೆ. ನಮ್ಮ ಮಗ ಹಾಗೂ ನಿಮ್ಮ ಮಗಳು ಪ್ರೇಮಿಗಳಾಗಿರುವುದು ನಮ್ಮ ಎರಡು ಕುಟುಂಬಗಳಿಗೆ ತಿಳಿದೇ ಇದೆ. ನಾಳೆ ನಿಮ್ಮ ಮಗಳು ಶ್ರೇಯಳ ಸಾಂಪ್ರದಾಯಿಕ ವಧು ಪರೀಕ್ಷೆ ಮಾಡೋಕೆ ನಿಮ್ಮ ಮನೆಗೆ ಬರೋಣ ಅಂತಿದ್ದೇವೆ. ನಿಮಗೆ ಅನುಕೂಲವಿದೆಯೇ ? ಹಾಗಾದರೆ ಶ್ರೇಯಳನ್ನು ನಾಳೆ ಒಂದು ದಿನ ಆಫೀಸಿಗೆ ರಜೆ ಹಾಕೋಕ್ಕೆ ಹೇಳ್ತಿರಾ ?"

ಶ್ರೇಯಳ ತಂದೆಯನ್ನು ಲೈನಲ್ಲಿ ಕಾಯೋಕ್ಕೆ ಹೇಳಿ, ಲ್ಯಾಂಡ್ ಲೈನ್ ಫೋನಿನ ರಿಸೀವರನ್ನು ಒಂದು ಕೈಯಿಂದ ಮುಚ್ಚಿ, ಗಂಡನ ಹತ್ತಿರ ಕೇಳಿದಳು ಪಾರ್ವತಿ.

"ಫೋನ್ ಪಕ್ಕದಲ್ಲಿದ್ದ ಶ್ರೇಯ, "ಆಮೇಲೆ ನೋಡಿಕೊಳ್ಳೋಣ; ನಾವೆಲ್ಲರೂ ನಾಳೆ ಟೂರ್‌ಗೆ ಹೊರಟಿದ್ದೇವೆ; ತಿರುಗಿ ಬರೋಕೆ ಒಂದು ವಾರವಾದರು ಆಗಬಹುದು ಅಂತ ಹೇಳಿಬಿಡಮ್ಮ" ಎಂದು ಹೇಳಿದ ಮಗಳನ್ನು ಆಶ್ಚರ್ಯದಿಂದ ನೋಡಿದ ಪಾರ್ವತಿ ಹತ್ತಿರ,

"ನನ್ನ ಮಗಳು ಹೇಳಿದರೆ ಅದರಲ್ಲಿ ಏನಾದರೂ ಅರ್ಥವಿರುತ್ತದೆ. ಅವಳ ಮಾತಿನ ಪ್ರಕಾರ ಹೇಳ್ಬಿಡು ಪಾರ್ವತಿ. ಇನ್ನೊಂದು ದಿನ ನಾವೇ ಫೋನ್ ಮಾಡಿ ಅವರನ್ನು ಕರೆಸೋಣ. ಅಷ್ಟರಲ್ಲಿ ಶ್ರೇಯ ಯಾಕೆ ಹೀಗೆ ಹೇಳುತ್ತಾಳೆ ಎಂಬುದರ ಬಗ್ಗೆ ಅವಳ ಬಳಿ ಚರ್ಚಿಸಿ ತಿಳಿದುಕೊಳ್ಳೋಣ." ಎಂದು ನುಡಿದರು ಪಾರ್ವತಿಯ ಗಂಡ ಗಣೇಶನ್.

ಮಗಳಿನ ಮಾತನ್ನೇ ಮಾಧವನ ತಂದೆಗೆ ಫೋನ್ ಮೂಲಕ ಮರು ಪ್ರಸಾರ ಮಾಡಿದಳು ಪಾರ್ವತಿ.

ಶ್ರೇಯಳತ್ತ ಮುಖ ಮಾಡಿ "ಇದೇನು ವಿಚಿತ್ರವಾಗಿದೆಯಲ್ಲಾ ನಿನ್ನ ಮಾತು ? ಮಾಧವನು ನೀನು ಒಂದು ವರ್ಷದಿಂದ ಒಬ್ಬರಿಗೊಬ್ಬರು ಪ್ರೀತಿಸುತ್ತಿರುವುದು ನಮಗೂ ತಿಳಿದಿದೆ. ಮತ್ಯಾಕೆ ಹೀಗೆ ಮಾತಾಡ್ತಿಯಾ ?" ಎಂದ ತಾಯಿಗೆ

"ಆಫೀಸಿಗೆ ಹೋಗಿ ಬಂದ ಮೇಲೆ ವಿವರವಾಗಿ ಹೇಳ್ತೀನಮ್ಮ" ಎನ್ನುತ್ತ ತನ್ನ ವ್ಯಾನಿಟಿ ಬ್ಯಾಗನ್ನು ಭುಜಕ್ಕೆ ನೇತುಹಾಕಿಕೊಂಡು ಸರ್... ಎಂದು ಹೊರಟ ಮಗಳನ್ನು ವಿಚಿತ್ರವಾಗಿ ನೋಡಿದರು ಪೋಷಕರು ಹಾಗೂ ಶ್ರೇಯಳ ಅಣ್ಣ ಕಮಲೇಶ್.

ಅವಳು ನಿರೀಕ್ಷಿಸಿದ ಹಾಗೆ ವಿಷಯ ತಿಳಿದು ಮಾಧವನ್ ಅಂದು ಸಂಜೆ ತನ್ನ ಟೂ ವ್ಹೀಲರ್ ಸಹಿತ ಶ್ರೇಯಳ ಆಫೀಸ್ ಮುಂದೆ ಅವಳಿಗಾಗಿ ಕಾದಿದ್ದನು. ಅವಳನ್ನು ಕಂಡ ಕೂಡಲೇ, "ಶ್ರೇಯ ! ನಿನ್ನ ಜತೆ ಅವಸರವಾಗಿ ಮಾತನಾಡಬೇಕಿದೆ. ಬಾ ಹೋಟೆಲ್‌ನಲ್ಲಿ ಕಾಫಿ ಕುಡಿದುಕೊಂಡೇ ಮಾತನಾಡೋಣ" ಅಂತ ಹೇಳಿ ತನ್ನ ಯಮಹ ಗಾಡಿಯಲ್ಲಿ ಅವಳನ್ನು ಕುಳ್ಳಿರಿಸಿ ಕರೆದುಕೊಂಡು ಹೋದನು. ಸ್ಟೀವರ್ಡ್‌ಗೆ ಎರಡು ಕಾಫಿ ತರಲು

ಆರ್ಡರ್ ಕೊಟ್ಟು ಶ್ರೇಯಳನ್ನು ದೀರ್ಘವಾಗಿ ನೋಡಿ,

"ಬೆಳಿಗ್ಗೆ ನಮ್ಮಪ್ಪ ಮಾಡಿದ ಫೋನ್ ಕರೆಗೆ ನಿಮ್ಮ ಮನೆ ಕಡೆಯಿಂದ ಸರಿಯಾದ ಉತ್ತರ ಸಿಗಲಿಲ್ಲ. ಏನು ಕಾರಣ ?" ಎಂದು ಶುರು ಮಾಡಿದವನಿಗೆ, "ನನ್ನಮ್ಮ ಹೇಳಿದ್ದೆ ಸರಿಯಾದ ಉತ್ತರ. ಹಾಗೆ ಹೇಳಲು ನಾನೇ ಹೇಳಿದೆ ಎಂದು ಸ್ಪಷ್ಟವಾಗಿ ಉತ್ತರಿಸಿದಳು ಶ್ರೇಯ.

"ಹಾಗಾದರೆ ನಿನ್ನ ಉದ್ದೇಶವಾದರೂ ಏನು ? ಶ್ರೇಯ ನಾನು ನಿನ್ನನ್ನು ಎಷ್ಟೊಂದು ಆಳವಾಗಿ..."

"ಪ್ರೀತಿಸುತ್ತೇನೆ... ಅಂತಾ ಹೇಳ್ತಿಯಲ್ಲಾ ? ಕ್ಷಮಿಸಿ ಬಿಡು ಮಾಧವನ್ ! ಅಂತಹ ವಿಚಾರ ನನ್ನ ಮನದಲ್ಲಿ ಮೊದಲಿದ್ದದೇನೋ ನಿಜ. ಆದರೆ ಈಗ ಆ ತರಹ ಹುಚ್ಚು ವಿಚಾರಗಳಿಗೆ ಅಲ್ಲಿ ಜಾಗವಿಲ್ಲ. ನಿನ್ನಂತಹ ಸ್ವಾಮಿತ್ವ ವಿಚಾರವುಳ್ಳವನು, ಹೆಂಗಸರನ್ನು ಗುಲಾಮರನ್ನಾಗಿ ಭಾವಿಸುವ, ಮುಂಗೋಪ ತುಂಬಿದ, ಎಲ್ಲಕ್ಕಿಂತ ಮೇಲಾಗಿ ಸಂಶಯವುಳ್ಳ ಗಂಡಸನ್ನು ಮದುವೆಯಾದರೆ ನಾನು ಮಾತ್ರವಲ್ಲ, ಯಾವ ಹೆಣ್ಣೂ ನೆಮ್ಮದಿಯಿಂದ ಜೀವನ ನಡೆಸುವುದು ಅಸಾಧ್ಯವಾದದ್ದು. ಸಹೋದ್ಯೋಗಿ ನೀಡಿದ್ದ ಲೀವ್‌ಲೆಟರನ್ನು ಸಂಶಯದಿಂದ ಲವ್‌ಲೆಟರೆಂದು ತಿಳಿದುಕೊಂಡು ಸಾರ್ವಜನಿಕ ಸ್ಥಳವೆಂದು ನೋಡದೆ ಬ್ಯಾಗನ್ನು ಕಸಿದು ತಪಾಸಣೆ ಮಾಡಿದ್ದು, ಹಾಡಗಲಲ್ಲಿ ಬಸ್ ಪ್ರಯಾಣಿಕರು ತುಂಬಿದ ಸ್ಥಳದಲ್ಲಿ ಕೆನ್ನೆ ಮೇಲೆ ಹೊಡೆದದ್ದು ಇಂತಹ ಅಯೋಗ್ಯ ನಡತೆಯ ಜತೆ ಸಂದೇಹವೆನ್ನುವ ವಿಷ ತುಂಬಿಕೊಂಡಿರುವ ನೀನು ಹಾಗೂ ನಾನು ಮದುವೆಯಾದರೂ ಸುಖ ಸಂಸಾರ ಮಾಡೋದೆಂಬುದು ಸುಲಭದ ಮಾತಲ್ಲ" ಎಂದು ನುಡಿದವಳತ್ತ ,

"ಸಾರಿ ಶ್ರೇಯ ! ಇದೆಲ್ಲಾ ನಿನ್ನ ಮೇಲಿರುವ ನನ್ನ ಸ್ವಾಮಿತ್ವತನಕ್ಕಾಗಿ ನಾನು ಮಾಡಿರೋದು. ನನ್ನನ್ನು ಸ್ವಲ್ಪ ಅರ್ಥಮಾಡಿಕೋ. ನಾಳೆ ನನ್ನ ಹೆಂಡತಿ ಯಾಗಲಿರುವವಳು ಬೇರೆ ಗಂಡಸಿನ ಹತ್ತಿರ ಮಾತನಾಡಿದರೆ ನನಗೆ ಸಹಿಸಿಕೊಳ್ಳೋಕೆ ಆಗೋದಿಲ್ಲ. ಆದ್ದರಿಂದ ಆ ರೀತಿ ಮೂರ್ಖತನದಿಂದ ವರ್ತಿಸಿಬಿಟ್ಟೆ. ಐ ಆ್ಯಮ್ ರಿಯಲಿ ಸಾರಿ. ಆದರೆ ನಿನ್ನನ್ನು ನಾನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದೇನೆ ಎಂಬುದರಲ್ಲಿ ನಿನಗೇನು ಸಂಶಯವೇ ಬೇಡ" ಎಂದು ಭವ್ಯವಾಗಿ ನುಡಿದನು ಮಾಧವನ್.

"ಸಾಕಾಯಿತು ನಿಮ್ಮಂತಹ ಸ್ಯಾಡಿಸ್ಟ್ ಗಂಡಸರ ಸಹವಾಸ ಇಟ್ಟುಕೊಂಡು ತಪ್ಪು ಮಾಡಿಬಿಟ್ಟೆ. ನೀವು ಗಂಡಸರು, ಯಾವ ಹೆಣ್ಣಿನ ಜತೆ ಸೇರಿ ಗಂಟೆಗಟ್ಟಲೆ ಹರಟೆ ಮಾಡಬಹುದು, ಹಲ್ಲು ಕಿಸಿಯಬಹುದು, ಗಾಡಿ ಮೇಲೆ ಕುಳ್ಳಿರಿಸಿಕೊಂಡು ಡ್ರಾಪ್ ಕೊಡಬಹುದು, ಹೋಟೆಲ್ ಸಿನಿಮಾ ಎಂದು ಕರೆದೊಯ್ಯಬಹುದು. ಅಂತಹ ಕೆಲಸವೇನಾದರೂ ನಾವು ಮಾಡಲು ಹೋದರೆ ಸಹಿಸಲಾರದೆ ಸಂದೇಹದಿಂದ ನೋಡುವುದು, ನಡತೆ ಕೆಟ್ಟವಳೆಂದು ಪಟ್ಟ ಕಟ್ಟುವುದು; ಇದು ಯಾವ ನ್ಯಾಯ ? ನಿನಗೂ ನನಗೂ ಹೊಂದಾಣಿಕೆ ಆಗುವುದಿಲ್ಲ. ಇನ್ನು ನಿನ್ನ ದಾರಿ ನೀನು ನೋಡಿಕೊಳ್ಳಬಹುದು." ಅವನ ಮುಖದ ಮೇಲೆ ಹೊಡೆದ ಹಾಗೆ ಮಾತನಾಡಿ ಹೊರಟವಳನ್ನು ಅಡ್ಡಗಟ್ಟಿ, "ನಾನು ಹೇಳುವುದನ್ನು ಸ್ವಲ್ಪ ಕೇಳಿದ ಮೇಲೆ ನೀನು ಧಾರಾಳವಾಗಿ ಹೋಗಬಹುದು. ನಿನ್ನಣ್ಣ ಕಮಲೇಶ್ ನನ್ನ ತಂಗಿ ಪ್ರಿಯಾಳನ್ನು ಪ್ರೀತಿಸುವ ವಿಚಾರ ನಿನಗೂ ಗೊತ್ತಿದೆ ತಾನೆ ? ನಾವಿಬ್ಬರೂ ದೂರವಾದರೆ ಅದರ ಪರಿಣಾಮ ಅವರ ಮೇಲೆ ಬೀರುವುದಿಲ್ಲವೇ ? ಎಂದು ಬ್ರಹ್ಮಾಸ್ತ್ರವನ್ನು ಬಿಟ್ಟನು ಮಾಧವನ್.

ಅದನ್ನು ಕೇಳಿ ಸ್ವಲ್ಪವೂ ಬೇಸರವಾಗದ ಶ್ರೇಯ, "ನೀನು ಇಂತಹ ಮಹಾ ಅಸ್ತ್ರವನ್ನು ನನ್ನ ವಿರುದ್ಧವಾಗಿ ಪ್ರಯೋಗಿಸಬಹುದೆಂದು ನನಗೆ ಗೊತ್ತಿದೆ ಮಾಧವನ್. ನಮ್ಮ ಪ್ರೀತಿ ಮುರಿದದ್ದಕ್ಕೂ ಅವರಿಬ್ಬರ ಮಧ್ಯೆ ಪ್ರೀತಿ ಬಾಳುವುದಕ್ಕೂ ಯಾವ ಸಂಬಂಧವೂ ಇಲ್ಲ" ಎಂದು ಸ್ಪಷ್ಟವಾಗಿ ನುಡಿದಳು.

"ಹಾಗಾದರೆ ನನ್ನ ತಂಗಿಯನ್ನು ಖಂಡಿಸಿ ನಾನು ಅವಳನ್ನು ಗೃಹಬಂಧನ ಮಾಡಿಸಿ ಆ ಪ್ರೀತಿಯ ಹಕ್ಕಿಗಳ ರೆಕ್ಕೆಗಳನ್ನು ಮುರಿಯಬಹುದಲ್ಲವೇ ?" ಎಂದವನ ಮುಖ ನೋಡಿ,

"ನೀನು ಇಂತಹ ಕೆಲಸ ಮಾಡಬಲ್ಲವನೆಂಬುವುದು, ನೀನು ಇಚ್ಛಿಸಿದ ಕೆಲಸ ಆಗದೇ ಹೋದರೆ ಎಷ್ಟು ಕೆಳಮಟ್ಟಕ್ಕಾದರೂ ಇಳಿಯೋಕೆ ಸಿದ್ಧವಾಗಿರುತ್ತೀಯಾ ಎಂಬುದರ ಬಗ್ಗೆ ನನಗೆ ಅರಿವಿದೆ. ನಿನ್ನ ತಂಗಿ ಸಿಗದೇ ಹೋದರೆ ನನ್ನಣ್ಣ ದಾಡಿ ಬೆಳೆಸಿಕೊಂಡು ದೇವದಾಸನ ತರಹ ಬೀದಿ ಬೀದಿಯಾಗಿ ಅಲೆದಾಡಿ ಅಲೆಮಾರಿಯೆಂಬ ಪಟ್ಟವನ್ನು ಕಟ್ಟಿಕೊಳ್ಳುವವನಲ್ಲ. ಇಂಜಿನಿಯರಿಂಗ್ ಪದವೀಧರನಾಗಿರುವ ಅವನಿಗೆ 'ನಾ ಮುಂದು; ತಾ ಮುಂದು' ಎಂದು ಹೆಣ್ಣು ಕೊಡೋಕೆ ಸಾಕಷ್ಟು ಜನರು ಸಾಲಲ್ಲಿ ನಿಂತಿರುವರು. ಆದರೂ ನಿಜವಾದ ಪ್ರೇಮಿಗಳನ್ನು ದೂರ ಮಾಡಿದ ಪಾಪದ ಕೊಡವನ್ನು ನೀನು ಹೊರಲೇಬೇಕಾಗುತ್ತದೆ. ಮತ್ತೆ ನಿನ್ನ ತಂಗೀನು ನೀ ಮಾಡಿದ ನೀಚ ಕೆಲಸ ತಿಳಿದರೆ ನಿನ್ನನ್ನು ದ್ವೇಷಿಸೋಕೆ ಶುರುಮಾಡುವುದು ಖಚಿತ. ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡು. ಈಗ ಸಮಯವಾಗಿದೆ ನಾನು ಬರಲೆ ? ಕಾಫಿ ಬಂದರೆ ನನ್ನದು ಸೇರಿ ಎರಡು ಗ್ಲಾಸ್ ಕಾಫಿಯನ್ನು ನೀನೇ ಕುಡಿದು ಬಿಡು." ಎಂದ್ಹೇಳಿ ಅವನ ಪ್ರತಿಕ್ರಿಯೆಗೆ ಕಾಯದೆ ಸರಸರವೆಂದು ನಡೆಯತೊಡಗಿದಳವಳು. ತನ್ನ ಬ್ರಹ್ಮಾಸ್ತ್ರ ತನಗೆ ಭೂಮರಾಂಗ್ ಅಸ್ತ್ರವಾಗಿ ತಿರುಗಿ ಬಂದು ಬಡಿದದ್ದನ್ನು ಅರಿತು, ಏನು ಮಾಡಲಾಗದೆ ದಿಗ್ಭ್ರಮೆಗೆ ಒಳಗಾದನು ಮಾಧವನ್.

"ಆಗಸ ಬೀದಿಯಲ್ಲಿ ಕಾರ್ಮೋಡಗಳ ಮೆರವಣಿಗೆ ಗುಡುಗುಗಳ ತಪ್ಪಡಿಯ ಮಧ್ಯೆ ಜೋರಾಗಿ ನಡೆಯುತ್ತಿತ್ತು. ಯಾವ ಕ್ಷಣದಲ್ಲಾದರೂ ಮಳೆ ಬರುವ ಮುನ್ಸೂಚನೆಯಿಂದ ಮಣ್ಣಿನ ವಾಸನೆ ಗಮಗಮವೆಂದು ಅವನ ಮೂಗಿಗೆ ತಗುಲಿತು."

**ಡಾ|| ವಿ. ಪುಗಳೇಂದಿ**
"ವಿವೇಕ್ ಮ್ಯಾನ್ಷನ್", ಸಂಖ್ಯೆ. ೪೬೭, ನಾಗಭೂಷಣ ಲೇಔಟ್
ವಿಜಯವಿಠ್ಠಲ ನಗರ, ಸಿರುಗುಪ್ಪ – ೫೮೩ ೧೨೧, ಬಳ್ಳಾರಿ ಜಿಲ್ಲೆ



## ಆರೋಗ್ಯಕಾರಿ ನುಗ್ಗೇಕಾಯಿ ಸೊಪ್ಪು ...

ನುಗ್ಗೇಕಾಯಿಯನ್ನು ಸಾಂಬಾರ್‌ನಲ್ಲಿ ಬಳಸಲಾಗುತ್ತದೆ. ಆದರೆ ನುಗ್ಗೇಸೊಪ್ಪು ಸಹ ಒಂದು ಉತ್ತಮ ಆಹಾರವಾಗಿದ್ದು, ಹಲವು ತೊಂದರೆಗಳಿಗೆ ಸಮರ್ಥ ಔಷಧಿಯೂ ಆಗಿದೆ. ಇದು ರುಚಿಕರವೂ, ಹೆಚ್ಚಿನ ನಾರು ಹೊಂದಿರುವ ಸೊಪ್ಪೂ ಆಗಿರುವ ಕಾರಣ ದಕ್ಷಿಣ ಭಾರತದಲ್ಲಿ ಸಾಂಬಾರ್ ಆಗಿ ಉಪಯೋಗಿಸಲ್ಪಡುತ್ತದೆ.

ನುಗ್ಗೇಕಾಯಿಯಂತೆ ನುಗ್ಗೇಸೊಪ್ಪಿನಲ್ಲಿಯೂ ಹಲವಾರು ಆ್ಯಂಟಿ ಆಕ್ಸಿಡೆಂಟುಗಳೂ ಮತ್ತು ಇತರ ರಕ್ತದಲ್ಲಿ ಕೊಲೆಸ್ಟ್ರಾಲ್ ಮಟ್ಟ ಕಡಿಮೆಗೊಳಿಸುವಲ್ಲಿ ಹಾಗೂ ಅಧಿಕ ರಕ್ತದ ಒತ್ತಡವನ್ನು ಕಡಿಮೆಗೊಳಿಸುವಲ್ಲಿ ನೆರವಾಗುತ್ತದೆ. ನುಗ್ಗೇಕಾಯಿ ಎಲೆಗಳ ಸೌಂದರ್ಯವರ್ಧಕ ಗುಣಗಳು : ಇವು ಮಧುಮೇಹಿಗಳ ರಕ್ತದಲ್ಲಿ ಅಧಿಕ ಪ್ರಮಾಣದಲ್ಲಿರುವ ಸಕ್ಕರೆಗೆ ವಿರುದ್ಧವಾಗಿ ಕೆಲಸ ಮಾಡುತ್ತವೆ, ಪರಿಣಾಮವಾಗಿ ರಕ್ತ ಸಕ್ಕರೆಯನ್ನು ತಾಳಿಕೊಳ್ಳುವ ಶಕ್ತಿ ಹೆಚ್ಚಿಸುತ್ತದೆ ಹಾಗೂ ರಕ್ತದಲ್ಲಿ ಥಟ್ಟನೇ ಅಧಿಕ ಪ್ರಮಾಣದ ರಕ್ತ ನುಗ್ಗದಿರುವಂತೆ ನೋಡಿಕೊಳ್ಳುತ್ತದೆ. ಅಲ್ಲದೆ ನೈಟ್ರಿಕ್ ಆಮ್ಲದ ಪ್ರಮಾಣದಲ್ಲಿ ಗಣನೀಯವಾದ ಇಳಿಕೆ ಮತ್ತು ರಕ್ತದ ನೀರಿನಲ್ಲಿ ಗ್ಲೂಕೋಸ್ ಮಟ್ಟ ಕಡಿಮೆಗೊಳಿಸಿ ಇನ್ಸುಲಿನ್ ಮತ್ತು ಪ್ರೋಟೀನುಗಳನ್ನು ಹೆಚ್ಚಿಸುತ್ತದೆ. ಇದರಿಂದ ರಕ್ತದಲ್ಲಿ ಗ್ಲೂಕೋಸ್ ಮಟ್ಟ ಆರೋಗ್ಯಕರವಾಗಿರಲು ನೆರವಾಗುತ್ತದೆ.

ನುಗ್ಗೆಯಲ್ಲಿದೆ ಲೆಕ್ಕಕ್ಕೆ ಸಿಗದ ಆರೋಗ್ಯ ಗುಣಗಳಿವೆ. ನುಗ್ಗೇಸೊಪ್ಪನ್ನು ದಂಟಿನಿಂದ ಬಿಡಿಬಿಡಿಯಾಗಿ ಬಿಡಿಸಿ ನೇರವಾಗಿ ಸಾಂಬಾರ್‌ನಲ್ಲಿ ಇತರ ತರಕಾರಿಗಳೊಂದಿಗೆ ಸೇರಿಸಿ ಬೇಯಿಸಿ ತಿನ್ನಬಹುದು. ತಿಳಿಸಾರು, ಮಜ್ಜಿಗೆ ಹುಳಿ, ತಂಬುಳಿ, ಮೊದಲಾದ ರೂಪದಲ್ಲಿಯೂ ಸೇವಿಸಬಹುದು.

**ಹನುಮಂತ. ಮ. ದೇಶಕುಲಕರ್ಣಿ**
ಸಾ|| ಭೋಗೇನಾಗರಕೊಪ್ಪ – ೫೮೧ ೧೯೬ , ಕಲಘಟಗಿ ತಾಲೂಕು, ಧಾರವಾಡ ಜಿಲ್ಲೆ



# ವಿದಾಯ ಹೇಳಿದ ಬಾಕ್ಸಿಂಗ್ ದಂತಕಥೆ ಮಹಮದ್ ಅಲಿ

೧೯೬೦ರ ದಶಕದಲ್ಲಿ ಅಮೆರಿಕದಲ್ಲಷ್ಟೇ ಅಲ್ಲ, ವಿಶ್ವದಾದ್ಯಂತ ಮನೆಮಾತಾಗಿದ್ದ, ಅಂದಿನ ದಿನಗಳಲ್ಲಿ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಕ್ಷಿಪ್ರಗತಿಯಲ್ಲಿ ಪ್ರಭುತ್ವಗಳಿಂದ ಜರುಗುತ್ತಿದ್ದ ಜನವಿರೋಧಿ ನೀತಿಗಳಿಗೆ ಪ್ರತಿರೋಧ ಒಡ್ಡುತ್ತಿದ್ದ ಸಮುದಾಯಗಳಿಗೆ ಸ್ಫೂರ್ತಿಯ ಸೆಲೆಯಂತಿದ್ದ, ಮಹಮದ್ ಅಲಿ ಇತ್ತೀಚೆಗೆ ಅಮೆರಿಕದ ಕೆಂಟುಕಿಯಲ್ಲಿ ಪಾರ್ಕಿನ್‌ಸನ್ಸ್ ಕಾಯಿಲೆಯಿಂದ ದೀರ್ಘಕಾಲ ನರಳಿ ಕೊನೆಯುಸಿರೆಳೆದಿದ್ದಾನೆ. ಅದೇ ಕೆಂಟುಕಿಯ ಲೂಯಿಸ್‌ವಿಲ್‌ನಲ್ಲಿ ೧೯೪೨ರ ಜನವರಿ ೧೭ರಂದು ಜನಿಸಿದ ಕ್ಯಾಶಿಯಸ್ ಕ್ಲೇ ೧೯೬೦ರಲ್ಲಿ ಇಟಲಿಯ ರೋಮ್‌ನಲ್ಲಿ ಜರುಗಿದ ಒಲಿಂಪಿಕ್ಸ್ ಕ್ರೀಡೆಗಳಲ್ಲಿ ಲೈಟ್‌ವೇಟ್ ಬಾಕ್ಸಿಂಗ್ ವಿಭಾಗದಲ್ಲಿ ಪದಕ ಗಳಿಸಿದ್ದು, ವರ್ಣಭೇದದ ವಿರುದ್ಧ ಪ್ರತಿಭಟಿಸಿದ್ದು, ೧೯೬೪ರ ಫೆಬ್ರವರಿಯಲ್ಲಿ ಸನ್ನಿ ಲಿಸ್ಟನ್ ವಿರುದ್ಧ ಜಯಗಳಿಸಿ ವಿಶ್ವದ ಹೆವಿವೇಟ್ ಬಾಕ್ಸಿಂಗ್ ವಿಶ್ವ ಚಾಂಪಿಯನ್ ಆದದ್ದು, ಆನಂತರ ಇಸ್ಲಾಂಗೆ ಮತಾಂತರಗೊಂಡು ಮಹಮದ್ ಅಲಿ ಆದದ್ದು, ಎಲ್ಲವೂ ಈತನ ಅಸಾಧಾರಣ ಮತ್ತು ಅಷ್ಟೇ ವಿಚಿತ್ರ ವ್ಯಕ್ತಿತ್ವವನ್ನು ಪರಿಚಯಿಸುತ್ತವೆ.

ಬಾಲ್ಯದಿಂದಲೂ ಪ್ರತಿಭಟನಾ ಸ್ವಭಾವ ಹೊಂದಿದ್ದ ಅಲಿ ತನ್ನ ಸುತ್ತಮುತ್ತ ಜರುಗುತ್ತಿದ್ದ ಸಾಮಾಜಿಕ ಅನ್ಯಾಯಗಳ ವಿರುದ್ಧ, ಅಮೆರಿಕದಲ್ಲಿ ತಾಂಡವವಾಡುತ್ತಿದ್ದ ಕರಿಯರ ವಿರುದ್ಧದ ಜನಾಂಗೀಯ ದ್ವೇಷಕ್ಕೆ ಧಿಕ್ಕಾರ ಹೇಳುತ್ತಲೇ ಉಗ್ರವಾದಿ ಕರಿಯರ ಪ್ರತ್ಯೇಕತಾವಾದಿ ಚಳುವಳಿಗೆ ತನ್ನ ಬೆಂಬಲ ಸೂಚಿಸಿ ರಾಷ್ಟ್ರವ್ಯಾಪಿಯಾದ ವಿವಾದದ ಅಲೆಗಳನ್ನೆಬ್ಬಿಸಿದ.

ಇತಿಹಾಸದಲ್ಲಿ ಅವನ ಹೆಸರು ಬಹುಕಾಲ ಉಳಿಯುವುದು ಈ ಕಾರಣಗಳಿಗೆ :

ಹೆವಿವೇಟ್ ಬಾಕ್ಸಿಂಗ್ ಕ್ಷೇತ್ರದಲ್ಲಿ ತಾನು ಗಳಿಸಿದ್ದ ಉನ್ನತ ಸ್ಥಾನಕ್ಕೆ ಯಾರೂ ಸಾಟಿಯಾಗಲಾರರು ಎಂಬುದನ್ನು ಅನೇಕ ಬಾರಿ ಸಾಬೀತುಪಡಿಸಿದ. ತನಗೆ ಎದುರಾಳಿಗಳು ಯಾರೂ ಇಲ್ಲ ಎಂದು ಘೋಷಿಸುತ್ತ, "ಅಲಿ ದ ಗ್ರೇಟೆಸ್ಟ್" ಎಂದು ತನ್ನನ್ನು ತಾನೇ ಕರೆದುಕೊಳ್ಳುವ ಉದ್ಧಟತನವನ್ನು ಪ್ರದರ್ಶಿಸಿದ. ವಿಯಟ್ನಾಂ ಯುದ್ಧದ ಸಂದರ್ಭದಲ್ಲಿ ಅಮೆರಿಕದ ಸೇನೆಗೆ ಸೇರಬೇಕೆಂದು ಸರ್ಕಾರದಿಂದ ೧೯೬೬ರಲ್ಲಿ ಕರೆ ಬಂದಾಗ, ಆ ಕರೆಯನ್ನು ನಿರಾಕರಿಸುತ್ತ ಅವನು ನೀಡಿದ ಹೇಳಿಕೆ ಹೀಗಿದೆ :

"ಈ ಬೃಹತ್ ಮತ್ತು ಅತ್ಯಂತ ಬಲಿಷ್ಠ ರಾಷ್ಟ್ರವಾದ ಅಮೆರಿಕದ ಪರ ಯುದ್ಧದಲ್ಲಿ ಭಾಗವಹಿಸಿ ನನ್ನ ಸಹೋದರರರನ್ನು, ಅಥವಾ ಮುಗ್ಧ ಕರಿಯರನ್ನು, ಅಥವಾ ಹಸಿವಿನಿಂದ ಬಳಲುತ್ತಿರುವ ಬಡಜನರನ್ನು ಕೊಲ್ಲಲು ನನ್ನ ಮನಸ್ಸು ಒಪ್ಪುತ್ತಿಲ್ಲ. ಅದಿರಲಿ, ಅವರನ್ನು ಗುಂಡಿಟ್ಟು ಕೊಲ್ಲಲು ಕಾರಣವೇನು ? ಅವರು ನನ್ನನ್ನೆಂದೂ 'ನೀನೊಬ್ಬ ನೀಗ್ರೊ' ಎಂದು ಹೀಯಾಳಿಸಿಲ್ಲ. ನನ್ನನ್ನು ಗಲ್ಲಿಗೇರಿಸಿಲ್ಲ. ನನ್ನ ವಿರುದ್ಧ ನಾಯಿಗಳನ್ನು ಛೂ ಬಿಟ್ಟಿಲ್ಲ. ನನ್ನ ರಾಷ್ಟ್ರೀಯತೆ ಕುರಿತು ಅನುಮಾನ ವ್ಯಕ್ತಪಡಿಸಿಲ್ಲ. ನನ್ನ ತಾಯಿಯ ಮಾನಭಂಗ ಮಾಡಿಲ್ಲ. ನನ್ನ ತಂದೆಯನ್ನು ಕೊಂದಿಲ್ಲ. ನಾನು ಅವರನ್ನೇಕೆ ಕೊಲ್ಲಬೇಕು ಹೇಳಿ. ಈ ಯುದ್ಧಕ್ಕೆ ನನ್ನ ಧಿಕ್ಕಾರವಿದೆ. ನನ್ನನ್ನು ಜೈಲಿಗೆ ತಳ್ಳುತ್ತೀರಿ ತಾನೆ ? ಇಗೋ, ನಾನೇ ನಿಮ್ಮೊಡನೆ ಬರುತ್ತೇನೆ ಜೈಲಿಗೆ."

ಈ ಮಾತುಗಳು ಸಾಮ್ರಾಜ್ಯಶಾಹಿ, ಯುದ್ಧ ಪಿಪಾಸು ಅಮೆರಿಕದ ಆಂತರಿಕ ಮತ್ತು ವಿದೇಶಾಂಗ ನೀತಿಗಳಿಗೆ ಕನ್ನಡಿ ಹಿಡಿಯುತ್ತವೆ ಮತ್ತು ಅವನಲ್ಲಿದ್ದ ಮಾನವೀಯ ಮೌಲ್ಯಗಳಿಗೆ ಸಾಕ್ಷಿಯಂತಿವೆ. ಅವನ ಈ ವರ್ತನೆಗೆ, ಗಟ್ಟಿ ನಿಲುವಿಗೆ ಪ್ರತಿಕ್ರಿಯಿಸುತ್ತ ಅಮೆರಿಕದ "ದೇಶಭಕ್ತ" ಬಾಕ್ಸಿಂಗ್ ಸಂಸ್ಥೆ ಅವನ ಪರವಾನಗಿಯನ್ನು ರದ್ದುಗೊಳಿಸುತ್ತದೆ. ಹಲವಾರು ಹೆಸರಾಂತ ಪತ್ರಕರ್ತರೂ ಅವನ ಹೇಳಿಕೆಯನ್ನು ತೀವ್ರ ಖಂಡನೆಗೆ ಗುರಿಪಡಿಸುತ್ತಾರೆ.

೧೯೬೭ರಲ್ಲಿ ಅವನು ತಪ್ಪಿತಸ್ಥನೆಂದು ಜರೆದು ಕೋರ್ಟು ಅಲಿಗೆ ಶಿಕ್ಷೆ ನೀಡಿ ೫ ವರ್ಷ ಜೈಲಿಗೆ ತಳ್ಳುತ್ತದೆ. ಅಮೆರಿಕದ ಸುಪ್ರೀಮ್ ಕೋರ್ಟ್ ೧೯೭೧ರಲ್ಲಿ ಅವನನ್ನು ಜೈಲಿನಿಂದ ಬಿಡುಗಡೆ ಮಾಡುವಂತೆ ತೀರ್ಪು ನೀಡುತ್ತದೆ.

ಅವನ ಬಾಕ್ಸಿಂಗ್ ಪರವಾನಗಿ ರದ್ದಾದ ಅವಧಿಯಲ್ಲಿ ಮಹಮದ್ ಅಲಿ ಸುಮ್ಮನೆ ಕೂರಲಿಲ್ಲ. ದೇಶದಲ್ಲೆಲ್ಲಾ ಸುತ್ತಾಡುತ್ತಾ ನೂರಾರು ಕಾಲೇಜುಗಳು, ವಿಶ್ವವಿದ್ಯಾನಿಲಯಗಳಿಗೆ ಭೇಟಿ ನೀಡಿ ವಿಯೆಟ್ನಾಂ ಯುದ್ಧದ ವಿರುದ್ಧ ಹಾಗೂ ಕೆಲವು ಸಾಮಾಜಿಕ ಸಮಸ್ಯೆಗಳು ಕುರಿತು ತನ್ನ ವಿರೋಧವನ್ನು ವ್ಯಕ್ತಪಡಿಸುತ್ತ ವಿದ್ಯಾರ್ಥಿಗಳ ಸುಪ್ತಪ್ರಜ್ಞೆಯನ್ನು ಬಡಿದೆಬ್ಬಿಸಲು ಸತತವಾಗಿ ದುಡಿದ. ತನ್ನ ಬಗ್ಗೆ ಕೊಚ್ಚಿಕೊಳ್ಳುವುದು, ಭಾವೋದ್ರೇಕದ ಹೇಳಿಕೆಗಳನ್ನು ಸಾರ್ವಜನಿಕವಾಗಿ ನೀಡುತ್ತಿದ್ದು ಅವನ ಜಾಯಮಾನ, ನಿಜ. ಆದರೂ ಅಲಿ ವೈಯಕ್ತಿಕವಾಗಿ ಒಬ್ಬ ಮರ್ಯಾದಸ್ಥ. ಬಾಕ್ಸಿಂಗ್ ಬರ್ಬರ ಕ್ರೀಡೆ ಎಂಬುದನ್ನು ಅಲ್ಲಗಳೆಯಲಾಗದು. ಆದರೂ ಆ ಕ್ರಿಯೆಯಲ್ಲಿ ತೊಡಗಿಕೊಂಡು ಕೀರ್ತಿಯ ಶಿಖರವನ್ನೇರಿದ ಅಲಿ ವೈಯಕ್ತಿಕವಾಗಿ ಸೂಕ್ಷ್ಮಪ್ರಜ್ಞೆ ಹೊಂದಿದ್ದವನು. ಹಾಸ್ಯ ಪ್ರವೃತ್ತಿಯ ವ್ಯಕ್ತಿ. ಚತುರಭಾಷಿ. ಅವನು ಇಸ್ಲಾಂ ಧರ್ಮವನ್ನು ಅಪ್ಪಿಕೊಂಡದಕ್ಕೂ ಅವನ ಸೂಕ್ಷ್ಮಪ್ರಜ್ಞೆಗೂ ಸಂಬಂಧವಿಲ್ಲ. ಬಹುಶಃ ಅಂದಿನ ದಿನಗಳಲ್ಲಿ ಅಮೆರಿಕದಲ್ಲಿ ರಾಜಕೀಯ ಕ್ಷೇತ್ರದಲ್ಲಿ ಯುದ್ಧ ಪಿಪಾಸು ಜನರಲ್ ಮೆಕಾರ್ತಿಯ ಕಮ್ಯುನಿಸಂ ವಿರೋಧಿ ನೀತಿಗಳ ವಿರುದ್ಧ ಏಳುತ್ತಿದ್ದ ಅಲೆಗಳ ಹಿನ್ನೆಲೆಯಲ್ಲಿ ಅವನ ಆ ತೀರ್ಮಾನವನ್ನು ಮೌಲ್ಯಮಾಪನ ಮಾಡಬೇಕೆಂದೆನಿಸುತ್ತದೆ.

ಮಹಮದ್ ಅಲಿಯಂತೆಯೇ ಖ್ಯಾತ ಗಾಯಕ ಪಾಲ್ ರೋಬ್ಸನ್, ಬೀಟಲ್ಸ್ ಸದಸ್ಯ ಮತ್ತು ಗಾಯಕ ಜಾನ್ ಲೆನನ್ ಮತ್ತು ಲ್ಯಾಟಿನ್ ಅಮೆರಿಕದ ಜನಪ್ರಿಯ ಗಾಯಕಿ ಜೋನ್ ಬೇಜ಼್, ಈ ಮೂರೂ ಮಂದಿ ಅಮೆರಿಕದ ಹಲವಾರು ನಗರಗಳಿಗೆ ಭೇಟಿಯಿತ್ತು ವಿಯೆಟ್ನಾಂ ಯುದ್ಧ ವಿರೋಧಿ ಗೀತೆಗಳನ್ನು ಹಾಡಿ ಅಲ್ಲಿನ ಸರ್ಕಾರದ ಆಕ್ರಮಕಾರಿ ನೀತಿಗಳನ್ನು ಪ್ರತಿಭಟಿಸಲು ಜನಸಾಮಾನ್ಯರನ್ನು ಪ್ರೇರೇಪಿಸಿದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಜಗತ್ತಿನ ಯಾವುದಾದರೊಂದು ರಾಷ್ಟ್ರದ ಮೇಲೆ ದಬ್ಬಾಳಿಕೆ ನಡೆಸಲು ಅಥವಾ ಯುದ್ಧದಲ್ಲಿ ತೊಡಗಲು ಯಾವಾಗಲೂ ಹವಣಿಸುತ್ತಲೇ ಇರುವ ರಾಷ್ಟ್ರ ಅಮೆರಿಕ. ಆ ರಾಷ್ಟ್ರದ ಮಾನವ ವಿರೋಧಿ ನೀತಿಗಳ ವಿರುದ್ಧ, ೬೦ರ ದಶಕ ಲಕ್ಷಾಂತರ ಕಾರ್ಮಿಕರು, ಜನಸಾಮಾನ್ಯರು, ಕಲಾವಿದರು, ಕ್ರೀಡಾಪಟುಗಳು, ವಿಜ್ಞಾನಿಗಳು ಬೀದಿಗಿಳಿದು ಪ್ರತಿಭಟಿಸುತ್ತಿದ್ದ ಕಾಲ. ಆನಂತರ ಅಂತಹ ಪ್ರತಿಭಟನೆಗಳ ಕಾವು ಅಷ್ಟಾಗಿ ಕಂಡುಬರುತ್ತಿಲ್ಲ. ಆ ಕಾರಣಕ್ಕಾಗಿಯೇ ತಮ್ಮ ರಾಷ್ಟ್ರದ ಪ್ರಭುತ್ವದ ದುಷ್ಟ ನೀತಿಗಳ ವಿರುದ್ಧ ಪ್ರತಿಭಟಿಸುತ್ತ ವಾಸ್ತವಾಂಶವನ್ನು ತಿಳಿಯ ಹೇಳಲು ಮಹಮದ್ ಅಲಿ, ಮರ್ಲನ್ ಬ್ರ್ಯಾಂಡೊ, ಚಾರ್ಲಿ ಚಾಪ್ಲಿನ್, ಪಾಲ್ ರೋಬ್ಸನ್, ಜೋನ್ ಬೇಜ಼್‌ನಂತಹವರಿಂದ ಸ್ಫೂರ್ತಿ ಪಡೆದು ಜನರಲ್ಲಿ ಹೋರಾಟದ ಕಿಚ್ಚು ಹಚ್ಚುವಂಥ ಕ್ರಾಂತಿಕಾರಿ ಮನಸ್ಸುಳ್ಳ ಹೋರಾಟಗಾರರು ಅಮೆರಿಕಾಕ್ಕೆ ಬೇಕಾಗಿದೆ. ಅಂತೆಯೇ ಎಲ್ಲೆಲ್ಲಿ ಜನವಿರೋಧಿ ಪ್ರಭುತ್ವಗಳಿವೆಯೋ ಅಲ್ಲಿಯೂ ಸಹ ಇಂತಹ ಮನಸ್ಸುಗಳು ಮುನ್ನೆಲೆಗೆ ಬರುವ ಅವಶ್ಯಕತೆ ಇದೆ.

ಈ ಹಿನ್ನೆಲೆಯಲ್ಲಿ ಎಲ್ಲ ಸಾಮ್ರಾಜ್ಯಶಾಹಿ ನೀತಿಗಳ ವಿರುದ್ಧ, ವರ್ಣಭೇದದ ವಿರುದ್ಧ ಸಾಮಾಜಿಕ ನ್ಯಾಯದ ಪರವಾಗಿ, ಹೋರಾಡುತ್ತಿರುವವರ ನಡುವೆ ಮಹಮದ್ ಅಲಿ ಸಾಕ್ಷಿಪ್ರಜ್ಞೆಯಂತೆ ಕಂಡುಬರುತ್ತಾನೆಂದರೆ ಉತ್ಪ್ರೇಕ್ಷೆಯಾಗಲಾರದು.

**ಸೂರ್ಯಕಿರಣ್**
೨೪, ೧೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲನಿ, ಜಯನಗರ ಪೂರ್ವ, ಬೆಂಗಳೂರು–೧೧

# ಪಾಂಡವರ ಗುಡಿಗಳು ಮತ್ತು ಕೋತರ ಹುಡುಗಿ



*ಬೊಂಬೆಗಳಿಗೆ ಚಂದನದ ಅಲಂಕಾರ*



*ಗೈಡ್ ಪದ್ಮಾವತಿ*

ನೀಲಗಿರಿಯ ಬಗ್ಗೆ ಪುಸ್ತಕ ರಚಿಸುತ್ತಿದ್ದ ಸಂದರ್ಭದಲ್ಲಿ, ಕ್ಷೇತ್ರಕಾರ್ಯ ನಡೆಸುತ್ತಿದ್ದಾಗ ಬೆಟ್ಟಗಳ ಮೇಲೆ ಕೆಲವು ಕಡೆ ಪಾಂಡವರ ಗುಡಿಗಳಿರುವ ತಾಣಗಳಿಗೆ ಹೋಗಿ ಅವುಗಳ ಫೋಟೋ ತೆಗೆಯುವ ಅವಕಾಶ ಲಭಿಸಿತ್ತು. ಸಾಮಾನ್ಯವಾಗಿ ಒಂದೇ ರೀತಿಯಲ್ಲಿರುವ ಅವನ್ನು ಗೋರಿಯ ಗುಡ್ಡೆಗಳು (Barrows and Cairns) ಎಂದು ಪುರಾತತ್ವ ತಜ್ಞರು ಗುರುತಿಸುತ್ತಾರೆ. ಇವುಗಳ ಮೇಲೆ ಹೊದಿಸಿರುವ ಕಲ್ಲು ಚಪ್ಪಡಿಗಳ ಪ್ರಕಾರದಿಂದ ಇವುಗಳನ್ನು ಸುಲಭವಾಗಿ ಗುರುತಿಸಬಹುದು. ಈ ಗುಡ್ಡೆಗಳಲ್ಲಿ ಕೆಲವನ್ನು ಅಗೆದು ನೋಡಿದಾಗ ಪ್ರಾಚೀನ ಕಾಲದ ಮನುಷ್ಯರು ಬಳಸುತ್ತಿದ್ದ ಮಣ್ಣಿನ ಪಾತ್ರೆಗಳು, ಆಯುಧಗಳು, ಆಭರಣಗಳು – ಮುಂತಾದ ವಸ್ತುಗಳು ಲಭಿಸಿದ್ದು, ಮಾನವಶಾಸ್ತ್ರ ಮತ್ತು ಮಾನವ ಇತಿಹಾಸವನ್ನು ಅಂದಾಜು ಮಾಡುವಲ್ಲಿ ಅವು ವಸ್ತು ದಾಖಲೆಗಳು ಎಂದು ತಜ್ಞರು ಗುರುತಿಸುತ್ತಾರೆ.

ಬೃಹತ್ ಶಿಲಾಯುಗದ ಕಾಲದ ಗೋರಿಗಳಾದ ಇವು ದಕ್ಷಿಣ ಭಾರತದ ಅನೇಕ ಕಡೆಗಳಲ್ಲಿವೆ. ಕೆಲವು ಕಡೆ ಅವನ್ನು ಮೋರಿಯರ ಮನೆಗಳು ಎಂದೂ ಕರೆಯುತ್ತಾರೆ. ನೀಲಗಿರಿಯ ಮೂಲನಿವಾಸಿಗಳು ಅವನ್ನು 'ಪಂಚಪಾಂಡವರ ಗುಡಿಗಳು' ಎನ್ನುತ್ತಾರೆ.

ಎರಡೂ ಬದಿಯಲ್ಲಿ ಸುಮಾರು ಎರಡು ಅಡಿಗಳಷ್ಟು ಅಗಲದ ಚಪ್ಪಟೆ ಕಲ್ಲುಗಳನ್ನು ನೆಟ್ಟು, ಮೇಲ್ಗಡೆ ಅಂಥದೇ ಕಲ್ಲನ್ನು ಹೊದಿಸಿರುತ್ತಾರೆ. ಒಳಗಡೆ ಒಂದು ಸಣ್ಣ ಕಲ್ಲನ್ನು ಸ್ಥಾಪಿಸಿದ್ದು, ಅವುಗಳಲ್ಲಿ ಕೆತ್ತಿದ ರೂಪಗಳಿರುತ್ತವೆ. ಸ್ಥಳೀಯರು ಅವನ್ನು ದೇವತೆಗಳ ಶಿಲ್ಪಗಳೆಂದು ನಂಬುತ್ತಾರೆ. ಅವುಗಳನ್ನು ಪೂಜಿಸುವುದೂ ಉಂಟು! ತಜ್ಞರು ಅವು ವೀರಗಲ್ಲುಗಳು ಅಥವಾ ಮಾಸ್ತಿಕಲ್ಲುಗಳು ಎಂದು ಗುರುತಿಸುತ್ತಾರೆ.

ಮಾನವಶಾಸ್ತ್ರ ಮತ್ತು ಮಾನವ ಇತಿಹಾಸದ ಅಧ್ಯಯನದ ದೃಷ್ಟಿಯಿಂದ ಇಂಥ ಪುರಾತನ ಸ್ಮಾರಕಗಳನ್ನು ಪುರಾತತ್ವ ಇಲಾಖೆ ರಕ್ಷಿತ ತಾಣಗಳೆಂದು ಗುರುತಿಸಿದೆ. ಕೆಲವು ಕಡೆ ಅವು ಊರ ದೇವರ ಗುಡಿಯ ಆವರಣದಲ್ಲಿರುತ್ತವೆ, ಮತ್ತೆ ಕೆಲವು ಕಡೆ ಊರಿನಿಂದ ಹೊರಗೆ ಕಾಡಿನೊಳಗಿರುತ್ತವೆ. ಮಾರ್ಗದರ್ಶಿಗಳು ಆಸಕ್ತರನ್ನು ಅಂಥ ಆರ್ಕಿಯಲಾಜಿಕಲ್ ತಾಣಗಳಿಗೆ ಕರೆದೊಯ್ಯುತ್ತಾರೆ.

ಬನಗುಡಿ ಶೋಲೆ ಎಂಬ ಹಾಲು ಕುರುಬರ ಊರಿಗೆ ಹೊಂದಿಕೊಂಡಂತೆ, ಕಾಡಿನೊಳಗಡೆ ಐದಾರು ಗುಡಿಗಳು ಒಂದೇ ಕಡೆ ಇರುವ ಅಂಥ ತಾಣವೊಂದಿದೆ. ಆ ಊರು ನೀಲಗಿರಿಯ ಪೂರ್ವ ಇಳಿಜಾರಿನಲ್ಲಿ ಕೋತಗಿರಿಯಿಂದ ಸುಮಾರು ೨೦ ಕಿ. ಮೀ. ದೂರದಲ್ಲಿದೆ. ಸುತ್ತಲೂ ಟೀ ತೋಟ ಆವರಿಸಿಕೊಂಡು ಇಕ್ಕಟ್ಟಿನ ಸ್ಥಳದಲ್ಲಿದೆ. ಸಾಧಾರಣ ಎಲ್ಲ ಆದಿವಾಸಿಗಳ ಊರುಗಳೂ ಹೀಗೆ ಇವೆ ! ದೇವರಾಜನ್ ಎಂಬ ಸ್ಥಳೀಯ ಯುವಕ ನಮ್ಮ ಮಾರ್ಗದರ್ಶಿ. ಊರಿನಲ್ಲಿ ಅಗತ್ಯ ಮಾಹಿತಿ ಸಂಗ್ರಹಿಸಿ, ಫೋಟೋ ತೆಗೆದುಕೊಂಡದ್ದಾಯಿತು. ಪಾಂಡವರ ಗುಡಿಗಳಿರುವುದು ಕಾಡಿನೊಳಗಡೆ. ಅಲ್ಲಿಂದ ಸುಮಾರು ೫೦೦ ಮೀಟರುಗಳಷ್ಟು ನಡೆದು ಹೋಗಬೇಕು. ತಿರುಗಾಟದಲ್ಲಿ ಜೊತೆಯಾಗಿದ್ದ ನನ್ನ ಪತ್ನಿ ಶಾಂತಾ ಅಲ್ಲಿಗೆ ಬರಲು ಹಿಂದೇಟು ಹಾಕಿದಳು. ನಾವು ಹುಡುಕಿ ಹೊರಟದ್ದೆಲ್ಲ ದಾರಿಬದಿಯಲ್ಲೇ ಸಿಗಬೇಕೆಂದು ಬಯಸುವವಳು ಆಕೆ! ಅಲ್ಲದೆ ಒಂದೆರಡು ತಿಂಗಳ ಹಿಂದೆ, ಬಸ್ಸಿಗೆಂದು ಓಡುವಾಗ ಬಿದ್ದು ಮಂಡಿ ನೋವು ಮಾಡಿಕೊಂಡಿದ್ದಳು.

---

**ಚಿತ್ರಲೇಖನ : ಪರಂಜ್ಯೋತಿ**

'ನೀ ಕ್ಯಾಪ್' ಧರಿಸುವಂತೆ ಡಾಕ್ಟರ್ ಸಲಹೆ ಮಾಡಿದ್ದರು. ಹಾಗಾಗಿ ಅವಳನ್ನು ಒತ್ತಾಯ ಮಾಡುವಂತಿರಲಿಲ್ಲ. ಜಬರ್‌ದಸ್ತ್ ಮಾಡುವಂತಿರಲಿಲ್ಲ! ಶಾಂತಾ ಅಲ್ಲಿಯ ಯುವತಿಯರೊಂದಿಗೆ ಮಾತುಕತೆಯಾಡುತ್ತ ಕುಳಿತಳು. ನಾವು ಕಾಡುದಾರಿಯಲ್ಲಿ ನಡೆದೆವು.

ದೇವರಾಜನ್ ದಾರಿಯಲ್ಲೇ ನಿಂತ. ಚಪ್ಪಲಿಗಳನ್ನು ಕಳಚಿಡುವಂತೆಯೂ, ಗುಡಿಗಳ ತೀರಾ ಸಮೀಪಕ್ಕೆ ಹೋಗಬಾರದೆಂದೂ ಸಲಹೆ ನೀಡಿದ. ಅದೊಂದು ರಕ್ಷಿತ ತಾಣ. ಫೋಟೋ ತೆಗೆದುಕೊಳ್ಳಲು ಅಡ್ಡಿಯಿರಲಿಲ್ಲ. ಸಾವಿರಾರು ವರ್ಷಗಳ ಹಿಂದೆ ಅಲ್ಲಿ ಮನುಷ್ಯನೆಲೆಗಳಿದ್ದ ದಾಖಲೆಗಳು ಅವು. ಇಲ್ಲಿಯವರೆಗೆ ಜೊತೆಯಲ್ಲಿ ಬಂದ ನನ್ನಾಕೆ ಈ ಗುಡಿಗಳನ್ನು ನೋಡದೆ ಉಳಿದಳಲ್ಲ ಎಂದುಕೊಂಡೆ.

* * *

ಕೋಕಲ್ ಎಂಬ ಕೋತರ ಊರು ಊಟಿಯಿಂದ ಸುಮಾರು ೩೦ ಕಿ. ಮೀ. ದೂರದಲ್ಲಿದೆ. ಶೋಲೂರು ಟೀ ತೋಟಕ್ಕೆ ಸಮೀಪದಲ್ಲಿರುವುದರಿಂದ ಅದನ್ನು ಶೋಲೂರು ಕೋಕಲ್ ಎಂದೂ ಕರೆಯುತ್ತಾರೆ.




ಅಲ್ಲಿನ ಉದಯ ಕುಮಾರ್ ಎಂಬ ಕೋತರ ಗೃಹಸ್ಥ ನಮ್ಮ ಮಾರ್ಗದರ್ಶಿ. ಅವರು ಮತ್ತವರ ಪತ್ನಿ ಬುಡಕಟ್ಟು ವೈದ್ಯರೂ ಹೌದು. ಹಿಂದಿನ ಬಾರಿ ಅವರಿಂದ ಮಾಹಿತಿ ಸಂಗ್ರಹಿಸುತ್ತಿದ್ದಾಗ, ಸಮೀಪದಲ್ಲೇ ಪಂಚಪಾಂಡವರ ಗುಡಿ ಇರುವ ಬಗ್ಗೆ ತಿಳಿಸಿದ್ದರು. ಆಗಿಂದಾಗಲೇ ಗುಡಿಯತ್ತ ಹೊರಟುಬಿಡುವ ತವಕ ನನ್ನದು. ಆದರೆ ಅವರು ಬೇರೊಂದು ಕಡೆ ಹೋಗಬೇಕಾಗಿದ್ದುದರಿಂದ ಆಗ ಅದು ಸಾಧ್ಯವಾಗಲಿಲ್ಲ.

ಕೆಲವು ತಿಂಗಳು ಕಳೆದ ನಂತರ ಮತ್ತೆ ಕ್ಷೇತ್ರ ಕಾರ್ಯ ಮುಂದುವರಿಯಿತು. ಕೋಕಲ್ ಸಮೀಪದಲ್ಲಿರುವ ಗುಡಿ ಇತರ ಕಡೆಗಳಲ್ಲಿರುವುದಕ್ಕಿಂತ ದೊಡ್ಡದು ಎಂದು ಅವರು ನನ್ನ ಕುತೂಹಲ ಕೆರಳಿಸಿದ್ದರು. ಅವರನ್ನು ಸಂಪರ್ಕಿಸಿ, ಅವರು ಊರಿನಲ್ಲಿರುವ ದಿನವನ್ನು ಖಚಿತಪಡಿಸಿ ಕೊಂಡೆವು. ಅಲ್ಲಿ ನಮಗಿದ್ದುದು ಗುಡಿಯ ದರ್ಶನ ಮಾತ್ರ. ಅದನ್ನು ಮುಗಿಸಿಕೊಂಡು, ಮಧ್ಯಾಹ್ನ ಗೂಡಲೂರಿನ ಸಮೀಪದ ಆದಿವಾಸಿಗಳ ಹಾಡಿಗೆ ಹೋಗುವ ಕಾರ್ಯಕ್ರಮ ಹಾಕಿಕೊಂಡೆವು.

ಶೋಲೂರು ಟೀ ಎಸ್ಟೇಟ್‌ವರೆಗೆ ಸಲೀಸಾಗಿ ಚಲಿಸಿದ ನಮ್ಮ ಬಾಡಿಗೆ ಕಾರು, ಕೋಕಲ್ ಸಮೀಪಿಸಿದಂತೆ, ಹೊಂಡ ಬಿದ್ದಿದ್ದ ರಸ್ತೆಯಲ್ಲಿ ಎಡವುತ್ತ, ಮುಗ್ಗರಿಸುತ್ತ ಸಾಗಿ ನಮ್ಮ ಮೈಯನ್ನು ನಜ್ಜುಗುಜ್ಜಾಗಿಸಿತು !

ಹೇಗೋ ಊರು ತಲುಪಿದೆವು. ಉದಯಕುಮಾರರ ಮನೆಯಲ್ಲಿ ಬಿಸಿ ಬಿಸಿ ಟೀ ನೀಡಿದರು. ಅನಂತರ ನಮ್ಮ ಉತ್ಸಾಹ ಕುಗ್ಗಿಸುವಂಥ ಸುದ್ದಿ ನಮಗಾಗಿ ಕಾದಿತ್ತು.

ಹಿಂದಿನ ರಾತ್ರಿ ಊರಿನ ಗಣ್ಯವ್ಯಕ್ತಿಯೊಬ್ಬರು ನಿಧನರಾಗಿದ್ದು, ಉದಯ ಕುಮಾರರು ಆಗಷ್ಟೆ ಸಾವಿನ ಮನೆಯಿಂದ ಹಿಂದಿರುಗಿದ್ದರು. ಹಾಗಾಗಿ ಮಾರ್ಗದರ್ಶಕರಾಗಿ ನಮ್ಮನ್ನು ಗುಡಿಗೆ ಕರೆದೊಯ್ಯುವಂತಿರಲಿಲ್ಲ. ಒಳ್ಳೆ ಯಡವಟ್ಟಾಯಿತಲ್ಲ ಎನ್ನಿಸಿತು ನನಗೆ. ಪೆಚ್ಚು ಮೋರೆ ಹಾಕಿಕೊಳ್ಳುವುದರ ಹೊರತು ಬೇರೆ ಮಾರ್ಗವೇನೂ ಇರಲಿಲ್ಲ.

ನಮ್ಮ ಆತಂಕವನ್ನು ಅರ್ಥಮಾಡಿಕೊಂಡ ಅವರು, "ನೀವೇನೂ ವರಿ ಮಾಡಿಕೊಬೇಡಿ. ನಿಮ್ಮ ಜೊತೆಗೊಬ್ಬರನ್ನು ಕಳಿಸಿಕೊಡುತ್ತೇನೆ. ನೀವು ಗುಡಿಗೆ

ಕಾವ್ಯಲೋಕ



## ನಾವೇ ಹಚ್ಚಿದ ಹಣತೆ

### ಬೆಳಕಿಲ್ಲ ನಮಗೆ

ನಾವು ಹಚ್ಚಿದ ಹಣತೆ
ನಮ್ಮ ಮಣ್ಣಿನದ್ದು
ಬತ್ತಿ ನಮ್ಮ ನೆಲದೀ ಬೆಳೆದದ್ದು
ಎಣ್ಣೆ ನಮ್ಮ ನೆಲದ ಗಿಡದ್ದು
ಬೆಂಕಿ ನಮ್ಮ ಒಡಲ ಉರಿಯದ್ದು

ನಾವೇ ಹಚ್ಚಿದ ಹಣತೆ
ಬೆಳಕಿಲ್ಲ ನಮಗೆ
ಇಡೀ ಬದುಕನ್ನು ಬತ್ತಿಯಾಗಿ ಹೊಸೆದು
ಅನ್ನವಿಲ್ಲದ ಒಡಲು ಉರಿಯಾಗಿ ನಿಂತು
ಬೆಳಕಿಲ್ಲದೆ, ಇರುಳಲ್ಲಿ
ನಲುಗಿ ನರಳುತ್ತಿರುವವರು ನಾವು

ನಾವೇ ಹಚ್ಚಿದ ಹಣತೆ
ಬೆಳಕಿಲ್ಲ ನಮಗೆ
ನಾವೇ ಹಚ್ಚಿದ ಹಣತೆಯಡಿ
ಬಂಡವಾಳಗಾರರ ಬಡಾಯಿ
ಸಿರಿವಂತರ ಸಿರಿ
ಎಲ್ಲವೂ ಉಜ್ವಲಿಸುತ್ತ
ಕೂಲಿಯಾಳಿನ ಬದುಕು
ಕೇವಲ ಖಾಲಿ ಮಾತ್ರ.

ನಾವೇ ಹಚ್ಚಿದ ಹಣತೆ
ಬೆಳಕಿಲ್ಲ ನಮಗೆ
ದೀಪದ ಕೆಳಗೆ ಎಂದಿಗೂ ಕತ್ತಲೆ
ಆ ಕತ್ತಲೆಯೊಳು
ನಾವೂ ಬೆತ್ತಲೆ



**ಆಶಾ ಎ., ಕನ್ನಡ ಪ್ರಾಧ್ಯಾಪಕರು, ಸರ್ ಎಂ. ವಿ. ಕಾಲೇಜು, ಹಾಲಾಡಿ ರಸ್ತೆ, ಶಿವಕುಮಾರಸ್ವಾಮಿ ಬಡಾವಣೆ, ದಾವಣಗೆರೆ**



*ಪಾಂಡವರ ಗುಡಿ, ಚಿನ್ನ ಕುನ್ನೂರು*



*ಪಾಂಡವರ ಗುಡಿ, ಶೋಲೋರ್ ಕೋಕಲ್*

ಹೋಗಿ ಬನ್ನಿ !" ಎಂದರು.

ಹಾಗೆ ನಮಗೆ ಅಂದಿನ ಮಾರ್ಗದರ್ಶಿಯಾಗಿ ಬಂದವಳು, ಅವರ ಮಗಳು ಪದ್ಮಾವತಿ. ಪ್ಲಸ್ ಟೂ ವಿದ್ಯಾರ್ಥಿನಿ. ಈ ಹುಡುಗಿ ನಮಗೆ ಏನು ಮಾರ್ಗದರ್ಶನ ಮಾಡಿಯಾಳು ಎನ್ನಿಸಿತು ನನಗೆ.

ಆದರೆ ಬೆಳಗಿನ ಚಳಿಯಲ್ಲಿ, ಆ ಭಯಂಕರ ರಸ್ತೆಯಲ್ಲಿ ಪಡಿಪಾಟಲು ಪಟ್ಟುಕೊಂಡು ಬಂದದ್ದು ಸದ್ಯ ವ್ಯರ್ಥವಾಗಲಿಲ್ಲ ಎಂದು ಸಂತೋಷವಾಯಿತು.

ಗುಡಿಯ ಕಡೆ ಹೊರಟಾಗ ಶಾಂತಾ ಎಂದಿನಂತೆ ಕಾರಿನಲ್ಲಿ ಕುಳಿತಿರುವಾಗ ತನ್ನ ಹಳೆಯ ರಾಗ ಪ್ರಾರಂಭಿಸಿದಳು. ಹಳ್ಳತಿಟ್ಟಿನ ಕಾಡು ದಾರಿಯಲ್ಲಿ ನಡೆಯಲು ಆಕೆಗೆ ಕಷ್ಟವಾಗುತ್ತದೆ ಎಂಬುದನ್ನರಿತಿದ್ದ ನಾನು ಆಕೆಯನ್ನು ಹೆಚ್ಚು ಒತ್ತಾಯಿಸಲು ಹೋಗಲಿಲ್ಲ.

ಆದರೆ ನಮ್ಮ ಹೊಸ ಗೈಡು ಪದ್ಮಾವತಿ ಅಷ್ಟಕ್ಕೇ ಸೋಲೊಪ್ಪಿಕೊಳ್ಳುವವಳಲ್ಲ. ಕಾರು ನಿಂತಿದ್ದಲ್ಲಿಗೆ ಹೋಗಿ, ಶಾಂತಾಳೊಂದಿಗೆ ಮಾತಾಡಿ, ಆಕೆಯನ್ನು ಹೊರಡಿಸಿದಾಗ, ಈ ಹುಡುಗಿ ಒಂದು ಪವಾಡ ಮಾಡಿಬಿಟ್ಟಿತಲ್ಲ ಎಂದು ನನಗೆ ಅಚ್ಚರಿಯಾಗದೆ ಇರಲಿಲ್ಲ ! ಆದರೂ, ಅಕಸ್ಮಾತ್ ಮಂಡಿ ನೋವು ಮರುಕಳಿಸಿದರೆ ಆಕೆ ನನ್ನನ್ನು ದೂರಬಹುದು ಎಂಬ ಅಳುಕು ಒಳಗೊಳಗೆ ! ಶಾಂತಾ ಹೊರಟು ನಿಂತಾಗ ಸಂತೋಷವೇ ಆಯಿತು. ಆಕೆಯನ್ನು ನಡೆಸುತ್ತ ಕರೆದೊಯ್ಯುವ ಕೆಲಸವನ್ನು ಪದ್ಮಾವತಿ ವಹಿಸಿಕೊಂಡಿದ್ದರಿಂದ ನನ್ನ ಸಂತೋಷ ಇಮ್ಮಡಿಯಾಯಿತು ! ವಾತಾವರಣವೂ ಹಿತಕರವಾಗಿದ್ದು, ಬೆಳಗಿನ ಬಿಸಿಲು ಬೆಚ್ಚಗಾಗತೊಡಗಿತ್ತು.

ಗುಡಿಗೆ ಹೋಗಲು ಪ್ರತ್ಯೇಕ ದಾರಿಯಿರಲಿಲ್ಲ. ಒಂದು ಕೊರಕಲಿನಲ್ಲಿ ಬಂಡೆಗಳ ಮಧ್ಯೆ ಇಳಿದು, ಟೀ ಗಿಡಗಳ ನಡುವೆ ಸಾಗುತ್ತ, ಒಮ್ಮೆ ಎಡಕ್ಕೆ, ಮತ್ತೊಮ್ಮೆ ಬಲಕ್ಕೆ ತಿರುಗಿ ಸುಮಾರು ಒಂದೇ ಅಡಿಯಷ್ಟು ಅಗಲದ ಕಾಲುದಾರಿಯಲ್ಲಿ ಎಚ್ಚರದಿಂದ ಸಾಗಬೇಕು.

ನಾನು ಸ್ವಲ್ಪ ದೂರ ಮುಂದೆ ಹೋಗಿ, ಈಗ ಯಾವ ಕಡೆಗೆ ಎನ್ನುವಂತೆ ಪದ್ಮಾವತಿಯ ಮಾರ್ಗದರ್ಶನಕ್ಕಾಗಿ ಹಿಂದಿರುಗಿ ನೋಡುತ್ತ ನಿಲ್ಲುತ್ತಿದ್ದೆ.

ಪದ್ಮಾವತಿ ಶಾಂತಾಳನ್ನು ಕೆಲವೊಮ್ಮೆ ಕೈಹಿಡಿದು ನಡೆಸುತ್ತ, "ಇಲ್ಲಿ ಕಾಲಿಡಿ ಆಂಟಿ, ಈ ರೆಂಬೆ ಹಿಡಿದುಕೊಳ್ಳಿ, ಆ ಕಲ್ಲಿನ ಮೇಲೆ ಕಾಲಿಡಬೇಡಿ, ನಿಮ್ಮ ಸ್ಲಿಪ್ಪರ್ ಜಾರಬಹುದು, ಇಲ್ಲಿ ನಿಧಾನಕ್ಕೆ ಇಳಿಯಿರಿ, ಬರೀ ಹತ್ತು ನಿಮಿಷದ ದಾರಿ, ಅಗೋ ಆ ಮರ ಕಾಣಿಸುತ್ತಿದೆಯಲ್ಲ, ಅದೇ ಗುಡಿಯಿರುವ ಜಾಗ. ಹೀಗೆ ಬನ್ನಿ..." – ಮುಂತಾಗಿ ಪುಸಲಾಯಿಸುತ್ತ, ಶಾಲೆಗೆ ಮಗುವನ್ನು ಕರೆದೊಯ್ಯುವ ಅಮ್ಮನಂತೆ, ನನ್ನ ಪತ್ನಿಯನ್ನು ನಿಧಾನಕ್ಕೆ ನಡೆಸಿಕೊಂಡು ಬರುತ್ತಿದ್ದಳು. ನೀಲಗಿರಿಯವರ ಹತ್ತು ನಿಮಿಷ ನಮಗೆ ೪೦ ನಿಮಿಷವಾಯಿತು.

ಟೀ ಗಿಡಗಳ ಮಧ್ಯೆ ಒಂದು ಸಣ್ಣ ದಿಬ್ಬದ ಮೇಲಿದೆ ಆ ತಾಣ. ಸುತ್ತಲೂ ಮುಳ್ಳುತಂತಿ ಬೇಲಿ ಹಾಕಿ ಅದಕ್ಕೆ ರಕ್ಷಣೆ ಒದಗಿಸಿದ್ದರು. ಪೂರ್ವ ದಿಕ್ಕಿನಲ್ಲಿ ಕಡಿದಾದ ಕಂದರವಿದೆ. ಪದ್ಮಾವತಿ ಪಾದರಕ್ಷೆಗಳನ್ನು ಕಳಚಿಬಿಡುವಂತೆ ಸಲಹೆ ಮಾಡಿದಳು. ತಂತಿಬೇಲಿಯನ್ನು ದಾಟಲು ಇಬ್ಬರಿಗೂ ಸಹಾಯ ಮಾಡಿದಳು.

ಬೇರೆ ಕಡೆಗಳಲ್ಲಿ ನೋಡಿದವಕ್ಕಿಂತ ಸ್ವಲ್ಪ ಎತ್ತರದ ಗುಡಿಗಳು. ಮುಂದುಗಡೆ ಸ್ವಲ್ಪವೇ ಜಾಗವಿದೆ. ಫಲಕಗಳನ್ನು ಸಮೀಪದಿಂದ ನೋಡಲು ಅಡ್ಡಿಯಿರಲಿಲ್ಲ. ಬನುಗುಡಿ ಶೋಲೆಯ ದೇವರಾಜನ್‌ಗಿಂತ ಪದ್ಮಾವತಿ ಸ್ವಲ್ಪ ಉದಾರಿಯಾಗಿದ್ದಳು ! ತಾನೂ ಗುಡಿಯ ಸಮೀಪ ಬಂದು ನಿಂತಳು. ಇವು ಮನುಷ್ಯರು ನಿರ್ಮಿಸಿದುವಲ್ಲ ಎಂಬುದು ಆಕೆಯ ಅಭಿಪ್ರಾಯ !

ಆ ಪ್ರಾಚೀನ ಸ್ಮಾರಕ, ನೀಲಗಿರಿಯ ಇತಿಹಾಸ ಕುರಿತು ಯೂರೋಪಿಯನ್ ಲೇಖಕರು ಬರೆದಿರುವ ಪುಸ್ತಕಗಳಲ್ಲಿ ದಾಖಲಾಗಿದೆ. ಈಗಲೂ ತಂತಿಬೇಲಿ ಹಾಕಿ ಅದನ್ನು ರಕ್ಷಿತ ತಾಣ ಎಂದು ಗುರುತಿಸಿದ್ದಾರೆ. ಆದರೆ ಫಲಕಗಳ ಮೇಲೆ ಕೆತ್ತಲಾಗಿರುವ ರೂಪಗಳಿಗೆ ಯಾವ ರಕ್ಷಣೆಯೂ ಇದ್ದಂತಿಲ್ಲ. ಮನುಷ್ಯ ಮತ್ತು ಪ್ರಾಣಿ ರೂಪಗಳಿಗೆ ಗಂಧ ಮತ್ತು ಕುಂಕುಮದ ಬೊಟ್ಟುಗಳನ್ನಿಟ್ಟು ಅವನ್ನು ವಿರೂಪಗೊಳಿಸಲಾಗಿದೆ. ಬೊಟ್ಟುಗಳನ್ನು ಹಣೆಯ ಮೇಲೋ, ಪಾದದ ಮೇಲೋ ಇಟ್ಟುದಲ್ಲ, ಸಿಕ್ಕಿದ ಕಡೆಗೆಲ್ಲ ಬೊಟ್ಟುಗಳು. ಹೀಗೆ ಲೆಕ್ಕವಿಲ್ಲದಷ್ಟು ಬೊಟ್ಟುಗಳ ಅಲಂಕಾರ ಮಾಡಿರುವುದರ ಹಿಂದೆ ಯಾವ ಕಲಾತ್ಮಕತೆಯ ಲಕ್ಷಣಗಳೂ ನನಗೆ ಕಾಣಿಸಲಿಲ್ಲ.

ಮುಂದಿನ ಆವರಣದಲ್ಲಿ ಅತ್ತಿತ್ತ ತಿರುಗಾಡಿ ಗುಡಿಗಳ ಪರಿಶೀಲನೆ ನಡೆಸಿದೆವು. ಕುಳಿತು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡದ್ದಾಯಿತು. ಫೋಟೋ ತೆಗೆದದ್ದಾಯಿತು.

"ನಿಮ್ಮದೊಂದು ಫೋಟೋ ತೆಗೆಯುತ್ತೇನೆ ಅಂಕಲ್ !" ಎಂದು ಪದ್ಮಾವತಿ ನನ್ನನ್ನು ಪುಸಲಾಯಿಸಿದಳು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತೆಗೆದ ನೂರಾರು ಫೋಟೋಗಳಲ್ಲಿ ನನ್ನ ಮುಖ ತೋರಿಸುವ ಅವಕಾಶ ಒದಗಿರಲಿಲ್ಲ. ನಮ್ಮನ್ನು ಗುಡಿಯ ಮುಂದೆ ನಿಲ್ಲಿಸಿ ಪದ್ಮಾವತಿ ಒಂದು ಫೋಟೋ ದಾಖಲಿಸಿದಳು !

ಕೋತರ ಹುಡುಗಿ ಪದ್ಮಾವತಿಯ ಪುಸಲಾಯಿಕೆಯಿಂದ ಶಾಂತಾ ಆ ದಿಬ್ಬದ ಗುಡಿಗೆ ತಲುಪಿದ್ದಳು. ಆಕೆಯ ಮುಖದಲ್ಲಿ ಗಿರಿ ಶಿಖರ ತಲುಪಿದಂಥ ತೃಪ್ತಿಯ ಭಾವ ! ಜೊತೆಯಲ್ಲಿ ನನಗೂ ಅಂಥದೇ ಸಾರ್ಥಕ ಭಾವನೆ.

ಹಿಂದಿರುಗಿದಾಗ ಮತ್ತೊಂದು ದಾರಿ, ಟೀ ಗಿಡಗಳ ಮಧ್ಯೆ ಬೆಳೆಸಿದ್ದ ಬೀಟ್‌ರೂಟ್ ತೋಟ ತಲುಪಿದೆವು. ತೋಟದಲ್ಲಿ ಕೆಲಸ ಮಾಡುವವರು ಯಾರಾದರೂ ಇದ್ದರೆ ಅವರಿಂದ ಒಂದಷ್ಟು ಬೀಟ್‌ರೂಟ್ ಸೊಪ್ಪು ಕೇಳಿಸಿ ಬೆಂಗಳೂರಿಗೆ ಒಯ್ಯಬಹುದಲ್ಲ ಎನ್ನಿಸಿತು ಮನೆಯಾಕೆಗೆ. ವಿಷಯ ತಿಳಿದದ್ದೆ ತಡ, ಪದ್ಮಾವತಿ ತೋಟಕ್ಕಿಳಿದು ನಾಲ್ಕೈದು ಬೀಟ್‌ರೂಟ್ ಗೆಡ್ಡೆ, ಸೊಪ್ಪಿನ ಸಹಿತ ಕಿತ್ತು ತಂದಳು. ತೋಟದವರು ಕಂಡರೆ ನಮ್ಮನ್ನು ಅಲ್ಲಿಂದ ಓಡಿಸದೇ ಬಿಡುವುದಿಲ್ಲ ಎನ್ನಿಸಿ ಆತಂಕವಾಯಿತು "ಅಂಕಲ್ ತೋಟದವರು ನಮ್ಮ ಪರಿಚಿತರೇ. ಅಲ್ಲದೆ ತಮ್ಮ ತೋಟದ ಬೀಟ್‌ರೂಟ್ ಬೆಂಗಳೂರಿಗೆ ಹೋಗುತ್ತದೆಂದರೆ ಅವರೇನೂ ಆಕ್ಷೇಪಿಸುವುದಿಲ್ಲ" ಎಂದು ಪದ್ಮಾವತಿ ನಮಗೆ ಸಮಾಧಾನ ಹೇಳಿದಳು.

ಉದಯಕುಮಾರರಿಗೆ ಮತ್ತು ನಮ್ಮ ಗೈಡು ಪದ್ಮಾವತಿಗೆ ವಿದಾಯ ಹೇಳಿ, ನಮ್ಮ ಸವಾರಿ ಗೂಡಲೂರು ದಾರಿ ಹಿಡಿಯಿತು.

ತಿರುಗಾಟದ ಸಂದರ್ಭದಲ್ಲಿ ನಮಗುಂಟಾದ ಮರೆಯಲಾಗದ ಅನುಭವಗಳ ಪೈಕಿ ಇದೂ ಒಂದು.

---

ಚಿತ್ರಲೇಖನ : **ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧–ಬಿ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭







**ನಿವೇದನೆ** (ಆತ್ಮಕಥನ)
ಮರಾಠಿ ಮೂಲ : ಧರ್ಮಾನಂದ ಕೊಸಾಂಬಿ
ಇಂಗ್ಲಿಷ್‌ನಿಂದ ಕನ್ನಡಕ್ಕೆ : ಡಾ॥ ಗೀತಾ ಶೆಣೈ
**ಪುಟ : ೨೨೮**
**ಬೆಲೆ : ರೂ. ೧೬೦**
**ನವಕರ್ನಾಟಕ ಪ್ರಕಾಶನ** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಧರ್ಮಾನಂದ ಕೊಸಾಂಬಿಯವರ ಜೀವನಪಥವೆಂದರೆ ನಿಜವಾದ ಕಲ್ಲು ಮುಳ್ಳುಗಳ ದಾರಿಯೇ ಸರಿ. ಇವರು ಬೌದ್ಧಧರ್ಮದ ಜ್ಞಾನವನ್ನು ಪ್ರಸಾರ ಮಾಡುತ್ತ, ಅನೇಕ ಪಾಲಿ ಗ್ರಂಥಗಳನ್ನು ಸಂಗ್ರಹಿಸಿ ಅಭ್ಯಾಸ ಮಾಡುತ್ತ ಕಾಲ್ನಡಿಗೆಯಲ್ಲೇ ದೇಶ ಸಂಚಾರ ಮಾಡಿದವರು. ವಿದ್ವತ್ಪೂರ್ಣವಾದ ಹಲವು ಗ್ರಂಥಗಳನ್ನು ರಚಿಸಿರುವವರು. ಅವರ ಜೀವನವೆಂದರೇನೇ ಪ್ರವಾಸಾನುಭವಗಳ ಬೃಹತ್ಕಥನ. ಅದನ್ನು ವಿನಯದಿಂದ ಓದುಗರಲ್ಲಿ ನಿವೇದಿಸಿಕೊಂಡಿದ್ದಾರೆ. ಭಾರತದ ನೆಲದಲ್ಲಿ ಹುಟ್ಟಿ ಬೆಳೆದ ಬೌದ್ಧಧರ್ಮವು ಅಶೋಕನ ಕಾಲದಲ್ಲಿ ವಿಜೃಂಭಿಸಿ ನಂತರ ಕಾರಣಾಂತರದಿಂದ ನಶಿಸಿಹೋದ ತರುವಾಯ ಬುದ್ಧನ ಸಂದೇಶವನ್ನು ಸಾರುವ ಮಹತ್ತರ ಕಾರ್ಯವನ್ನು ಧರ್ಮಾನಂದರು ಕೈಗೊಂಡರು. ತನ್ನ ಕೊನೆಯ ದಿನಗಳನ್ನು ಅವರು ಗಾಂಧೀಜಿಯ ವಾರ್ಧಾ ಆಶ್ರಮದಲ್ಲಿ ಕಳೆದು ಅಲ್ಲಿಯೇ ಕೊನೆಯುಸಿರೆಳೆದರು. ಇವರ ಬಗ್ಗೆ ಗಾಂಧೀಜಿ ಆಡಿದ ಮಾತುಗಳು ಹೀಗಿವೆ : "ಹಿನ್ನೆಲೆಯಲ್ಲಿದ್ದು ಮೌನವಾಗಿ ಕೆಲಸ ಮಾಡಲು ಬಯಸಿದ, ಸ್ವತಃ ತನ್ನನ್ನು ತಾನು ಹೊಗಳಿಕೊಳ್ಳದ ವಿದ್ವಾಂಸ ಮತ್ತು ಲೋಕಹಿತಕ್ಕಾಗಿ ತನ್ನನ್ನು ಸಮರ್ಪಿಸಿಕೊಂಡ ವ್ಯಕ್ತಿ." ಕೊಸಾಂಬಿಯವರು ಬೌದ್ಧಧರ್ಮದ ಸಿದ್ಧಾಂತ ಮತ್ತು ಆಚರಣೆಗಳನ್ನು ಮೊದಲು ತಾನು ತಿಳಿದುಕೊಂಡು ಅದರಲ್ಲಿನ ಮಾನವೀಯ ಅಂಶಗಳಿಗೆ ಮನಸೋತು, ಮನುಷ್ಯರಿಗೆ ಅವು ಎಷ್ಟು ಪ್ರಯೋಜನಕಾರಿಯೆಂದು ಸಾರುತ್ತ ಬೌದ್ಧಭಿಕ್ಷುವಾಗಿ ಸಂಚರಿಸಿದ ಕಥನವಿದು.

**ಸ್ವಾತಂತ್ರ್ಯಾನಂತರದ ಭಾರತ** — ಸಿ. ಆರ್. ಕೃಷ್ಣರಾವ್
**ಪುಟ : ೧೨೮** — **ಬೆಲೆ : ರೂ. ೯೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

'ಯಾರಿಗೆ ಬಂತು, ಎಲ್ಲಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ' ಎಂದು ಕವಿ ಸಿದ್ದಲಿಂಗಯ್ಯ ದನಿ ಎತ್ತಿದ್ದಾರೆ. ನಾವು ಸ್ವಾತಂತ್ರ್ಯವನ್ನನುಭವಿಸಿ ನೆಮ್ಮದಿಯಿಂದಿದ್ದೇವೆಯೇ ? ಭಾರತ ದೇಶ ಸ್ವಾತಂತ್ರ್ಯ ಗಳಿಸಿತು ಎನ್ನುವುದು ನಿಜವಾದರೂ ಅಲ್ಲಿ ನಡೆದದ್ದು ಏನೆಂದರೆ ವಿದೇಶಿ ಬಂಡವಾಳಶಾಹಿಯಿಂದ ದೇಶಿ ಬಂಡವಾಳಶಾಹಿಗೆ ಅಧಿಕಾರದ ಹಸ್ತಾಂತರವಷ್ಟೆ. ಸ್ವಲ್ಪ ಮಟ್ಟಿನ ಅಭಿವೃದ್ಧಿ ಪ್ರಾರಂಭದಲ್ಲಿ ಕಂಡಿದ್ದು ನಿಜ, ಆದರೆ ಅದರ ಪ್ರಯೋಜನ ಕಬಳಿಸಿದ್ದು ಶ್ರೀಮಂತವರ್ಗ. ಬಡವರ ಹೆಸರಿನಲ್ಲಿ ಸಿರಿವಂತರ ಉದ್ಧಾರ. ಈ ಕೃತಿ ದೇಶ ಸ್ವಾತಂತ್ರ್ಯ ಗಳಿಸಿದ ನಂತರದ ರಾಜಕೀಯ ಬೆಳವಣಿಗೆಯ ವಿಶ್ಲೇಷಣೆ ಮಾಡುತ್ತದೆ. ಅಧಿಕಾರದ ಗದ್ದುಗೆ ಹಿಡಿದವರು ಕ್ರಮೇಣ ಶ್ರೀಮಂತವರ್ಗಗಳತ್ತ ವಾಲಿ, ಆದರ್ಶಗಳನ್ನು ಮರೆತು ಬಡವರನ್ನು ಕಡೆಗಣಿಸಿದರು. ಸ್ವಪ್ರತಿಷ್ಠೆ–ವ್ಯಕ್ತಿಪೂಜೆ ಮೇಲುಗೈಯಾಯಿತು. ಅರವತ್ತೊಂಬತ್ತು ವರ್ಷಗಳಲ್ಲಿ ಪ್ರಾಮಾಣಿಕತೆ ಹೇಳಹೆಸರಿಲ್ಲದಂತಾಗಿ ಭ್ರಷ್ಟಾಚಾರ ಮೇರೆ ಮೀರಿತು. ಎಲ್ಲ ರಂಗಗಳಲ್ಲೂ ಆತಂಕ–ಭಯೋತ್ಪಾದನೆ – ಸ್ವಾರ್ಥ – ವಂಚನೆ ಕಾಣುತ್ತಿವೆ. ಜನಪರವಾಗಿರಬೇಕಾದ ಸರಕಾರ ಜನವಿರೋಧಿಯಾಗಿ ಸಾಗಿ ಅದು ಮೂಡಿಸಿದ ಹೆಜ್ಜೆಗುರುತುಗಳನ್ನು ಎಡಪಂಥೀಯ ದೃಷ್ಟಿಕೋನದಿಂದ ವಿಮರ್ಶಿಸಿ ನಿಮ್ಮ ಮುಂದಿಡಲಾಗಿದೆ. ನಮ್ಮಲ್ಲಿ ಒಳಿತಿಗಿಂತ ಕೆಡುಕೇ ಹೆಚ್ಚು ಎಂಬಂತೆ ಹಲವಾರು ಹಗರಣಗಳು ನಡೆದಿದ್ದನ್ನು ಕೃತಿಯಲ್ಲಿ ಪ್ರಸ್ತಾಪಿಸಿದೆ. ಲೇಖಕರು ಸ್ವಾತಂತ್ರ್ಯಪೂರ್ವ ಹಾಗೂ ನಂತರದ ದಿನಗಳನ್ನು ಕಣ್ಣಾರೆ ಕಂಡವರಾದ್ದರಿಂದ ಕೃತಿಯ ಮೌಲ್ಯ ಇನ್ನಷ್ಟು ಹೆಚ್ಚಿದೆ.




**ಆರೋಗ್ಯ ಆಶಯ** (ಆರೋಗ್ಯ ರಕ್ಷಣೆ ಮತ್ತು ಅದರ ಸಾಮಾಜಿಕ, ಆರ್ಥಿಕ, ರಾಜಕೀಯ ಆಯಾಮಗಳು) — ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ
**ಪುಟ : ೩೬೮** — **ಬೆಲೆ : ರೂ. ೨೫೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

'ಆರೋಗ್ಯ ಆಶಯ' ಕೃತಿ ಒಂದು ಘೋರ ಸತ್ಯವನ್ನು ನಮ್ಮ ಮುಂದಿಡುತ್ತದೆ. ವೈದ್ಯಕೀಯ ಚಿಕಿತ್ಸೆ ದುಬಾರಿಯಾಗಿ ಶ್ರೀಸಾಮಾನ್ಯನಿಗೆ ಎಟುಕದ ಗಗನ ಕುಸುಮವಾದದ್ದು ಯಾಕೆ ಮತ್ತು ಹೇಗೆಂದು ತಿಳಿಸುವ ಲೇಖನಗಳಿವು. ಕಾಯಿಲೆ ವಾಸಿಯಾಗಬೇಕಾದರೆ ಗಳಿಸಿದ್ದನ್ನೆಲ್ಲ ವ್ಯಯಿಸಬೇಕಾದ ಪರಿಸ್ಥಿತಿ ಇಂದಿನದು. ವೈದ್ಯಕೀಯ ರಂಗ ಸೇವಾ ಮನೋಭಾವದಿಂದ ದೂರ ಸರಿದು ಹಣ ಗಳಿಸುವ ದಾರಿಯಲ್ಲಿ ಸಾಗಿದ್ದು ಇದಕ್ಕೆ ಕಾರಣ. ವೈದ್ಯಕೀಯ ಸೀಟುಗಳು ಅತಿ ಹೆಚ್ಚಿನ ಬೆಲೆಗೆ ಮಾರಾಟಕ್ಕಿವೆ. ನಿರ್ವಾಹವಿಲ್ಲದೆ ಖರೀದಿಸಿ, ಓದಿ ಡಿಗ್ರಿ ಪಡೆದ ವೈದ್ಯರು ಹಣ ಗಳಿಸದೆ ಇನ್ನೇನು ತಾನೆ ಮಾಡಿಯಾರು ? ಬೆರಳೆಣಿಕೆಯಷ್ಟು ಸಂಖ್ಯೆಯ ಪ್ರಾಮಾಣಿಕ ವೈದ್ಯರು ವ್ಯವಸ್ಥೆಯನ್ನೇ ಬದಲಿಸುವಷ್ಟು ಶಕ್ತರಲ್ಲ. ಹಲವು ಕೋಟಿ ವ್ಯಯಿಸಿ ಸುಸಜ್ಜಿತ ಆಸ್ಪತ್ರೆ ತೆರೆದು, ಹಾಕಿದ ಬಂಡವಾಳ ಭರಿಸಿ, ಲಾಭ ಗಳಿಸುವ ದೃಷ್ಟಿಕೋನವಿದ್ದಲ್ಲಿ ಸೇವೆ ಎಲ್ಲಿರುತ್ತದೆ ? ಅಲ್ಲಿ ಅತ್ಯಾಕರ್ಷಕ ವೇತನ ಮತ್ತು ಕಮಿಷನ್ ಆಧಾರದ ಮೇಲೆ ಪರಿಣತ–ತಜ್ಞ ವೈದ್ಯರ ನೇಮಕ ನಡೆಯುತ್ತದೆ. ಎಲ್ಲವೂ ವ್ಯವಹಾರ – ವ್ಯಾಪಾರಿ ಮನೋಭಾವ. ಸರಕಾರಿ ಆಸ್ಪತ್ರೆಗಳ ವೈಫಲ್ಯದ ಹಿನ್ನೆಲೆಯಿಂದಾಗಿ ಖಾಸಗಿ ಆಸ್ಪತ್ರೆಗೆ ಹೋಗಲೇಬೇಕಾದ ಅನಿವಾರ್ಯತೆ. ಔಷಧ ಕಂಪೆನಿಗಳಂತೂ ತಮ್ಮ ಪ್ರತಿನಿಧಿಗಳ ಮೂಲಕ ವೈದ್ಯರಿಗೆ ಆಮಿಷವೊಡ್ಡಿ, ಶಿಫಾರಸು ಮಾಡಿ ಅಸಂಖ್ಯ ಗುಳಿಗೆ – ಔಷಧಿ ತಯಾರಿಸಿ ಮಾರಾಟದ ಗುಂಗಿನಲ್ಲಿರುತ್ತಾರೆ. ಒಂದೇ ಕಾಯಿಲೆಗೆ ಸಾವಿರಾರು ತರದ ಔಷಧಿಗಳು. ಹೊಸ ಹೊಸ ಕಾಯಿಲೆ ! ಹೊಸ ಹೊಸ ಔಷಧಿ !! ಹೊಸ ಹೊಸ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳು !!! ಜನರು ಮಾತ್ರ ಸದಾ ರೋಗಿಗಳು. ಇಂಥ ಮೈನವಿರೇಳಿಸುವ ಅವೆಷ್ಟೋ ಸಂಗತಿಗಳನ್ನು ಇಲ್ಲಿ ಓದಿನೋಡಿ.

**ಭಗವದ್ಗೀತೆ : ಒಂದು ವಿಮರ್ಶೆ** — ಎಂ. ಸಿ. ಡೋಂಗ್ರೆ
**ಪುಟ : ೯೬** — **ಬೆಲೆ : ರೂ. ೭೫**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ನಿಂತ ನೀರು ಕೊಳೆತು ನಾರುತ್ತಿದ್ದರೂ ಅಡ್ಡಿಯಿಲ್ಲ, ಅದು ಹರಿದು ಹೊಸ ನೀರು ಬರಲು ಅವಕಾಶ ಕೊಡದ ಸನಾತನಿಗಳು ಬದಲಾವಣೆಯ ವಿರೋಧಿಗಳು. ಇಂದಿನ ಕಾಲಕ್ಕೆ ಪ್ರಸ್ತುತವಲ್ಲದ ಭಗವದ್ಗೀತೆಯನ್ನು ಭಗವಂತನ ಉವಾಚವೆಂದು ಸಾರುತ್ತ ಇಂದಿಗೂ ಅದನ್ನು ಹೊಸ ಪೀಳಿಗೆಗೆ ಅರೆದು ಕುಡಿಸುವ ಹುನ್ನಾರ ನಡೆದಿದೆ. ಹಲವು ದೇಶೀಯ – ವಿದೇಶೀಯ ವಿದ್ವಾಂಸರು, ಸಂಶೋಧಕರು ಭಗವದ್ಗೀತೆಯನ್ನು ಓದಿ ಕಟುವಾಗಿ ಟೀಕಿಸಿ, ವಿಮರ್ಶಿಸಿ ಅಲ್ಲಿನ ಗೊಂದಲಗಳ ಬಗ್ಗೆ ಆಕ್ಷೇಪವೆತ್ತಿದ್ದಾರೆ. ಮೂಲ ಭಗವದ್ಗೀತೆ ಎಂಭತ್ನಾಲ್ಕು ಶ್ಲೋಕಗಳಿಂದ ಕೂಡಿದ್ದು, ಅದಕ್ಕೆ ಕಾಲಾನಂತರ ಧಾರ್ಮಿಕ ಪುನರುತ್ಥಾನದ ಅಂಗವಾಗಿ ಇನ್ನಷ್ಟು ಶ್ಲೋಕಗಳು ಸೇರ್ಪಡೆಗೊಂಡ ಬಗೆಗೆ ಗಮನ ಸೆಳೆದಿದ್ದಾರೆ. ಮೋಕ್ಷ ಸಂನ್ಯಾಸಯೋಗ ಗೀತೆಯಲ್ಲಿ ಸೇರ್ಪಡೆಗೊಂಡ ಬಗೆಗೆ ಶಂಕರಾಚಾರ್ಯರ ಕೊಡುಗೆಯೆಂದು ಅನುಮಾನಿಸಲಾಗಿದೆ. ಪಾಶ್ಚಾತ್ಯ ವಿದ್ವಾಂಸರೂ ಕೂಡ ಸಂಸ್ಕೃತ ಕಲಿತು ಮಹಾಭಾರತ – ಭಗವದ್ಗೀತೆ ಓದಿ, ತರ್ಜುಮೆಗೊಳಿಸಿ ಅಲ್ಲಿನ ವಿರೋಧಾಭಾಸಗಳನ್ನು ಕೆದಕಿ ತೋರಿದ್ದಾರೆ. ಹೀಗೆ ಕಾರ್ಮಿಕ ವಿರೋಧಿ, ಸ್ತ್ರೀ ವಿರೋಧಿ ಮತ್ತು ಇಹಕ್ಕಿಂತ ಪರವೇ ಲೇಸೆಂದು ಸಾರುವ ಭಗವದ್ಗೀತೆಯನ್ನು ನಾವು ಪುರಸ್ಕರಿಸಬೇಕೇ – ತಿರಸ್ಕರಿಸಬೇಕೇ ? ಭಗವದ್ಗೀತೆ ಒಂದು ಗೊಂದಲದ ಗೂಡು, ಓದಿದರೆ ಸರಿಯಾಗಿ ಅರ್ಥವಾಗಲಾರದು. ಅರ್ಥವಾದವರು ಬಲವಾಗಿ ಟೀಕಿಸದೆ ಬಿಡಲಾರರು !

– **ಇಂದಿರಾಕುಮಾರಿ**, ಯಶವಂತಪುರ, ಬೆಂಗಳೂರು – ೨೨

# ನೆನಪುಗಳ ಮಾತು ಮಧುರ...

ಡಾ॥ ಶೈಲಾ ಯು.

**ಮಾ**ರಣಕಟ್ಟೆಯ ಜಾತ್ರೆಗೆ ಮಕ್ಕಳೊಂದಿಗೆ ಹೊರಟಿದ್ದೇನೆ. ನೆನಪುಗಳು ಮರುಕಳಿಸುತ್ತಿವೆ. ಅವರನ್ನು ನೆಪವಾಗಿಟ್ಟುಕೊಂಡು ಎಷ್ಟೊಂದು ಬಾರಿ ನನ್ನ ಬಾಲ್ಯದ ದಿನಗಳನ್ನು ಮೆಲುಕುಹಾಕಿದ್ದೇನೋ, ನನಗೇ ನೆನಪಿಲ್ಲ. ಯಾವಾಗಲೂ ಯಾವುದಕ್ಕೂ ಬಿಡುವಿಲ್ಲ... ಬಿಡುವಿಲ್ಲ... ಎಂಬ ಗೊಣಗಾಟವನ್ನು ತತ್ಕಾಲಕ್ಕೆ ನಿಲ್ಲಿಸಿ, ನನಗಾದ ಅನುಭವ ಮಕ್ಕಳಿಗೂ ಕಿಂಚಿತ್ ಸಿಗಲಿ ಎಂಬ ಆತುರದಲ್ಲಿ, ಸಿಗುವುದೇ ಎಂಬ ಕಾತುರದಲ್ಲಿ, ನನ್ನ ಅಕ್ಕರೆಯ ಅಜ್ಜಿ ನಮಗೆಲ್ಲ ಪ್ರೀತಿ ಉಣಬಡಿಸಿದ ಆ ಆವರಣ ಈಗ ಹೇಗಿದೆ ಎಂದು ನೋಡಲು ಹೋಗುತ್ತಿದ್ದೇನೆ. ಅಂದು ಆ ಊರು ಎಷ್ಟೊಂದು ಆತ್ಮೀಯವಾಗಿತ್ತು! ಅಲ್ಲಿನ ಹಾದಿಗಳು ಹೂಗಳಿಂದ ತುಂಬಿ ಎಷ್ಟೊಂದು ಪರಿಮಳಭರಿತವಾಗಿದ್ದವು! ಹಣ್ಣುಗಳಿಂದ ಎಷ್ಟೊಂದು ಸವಿಯಾಗಿದ್ದವು ಆ ದಿನಗಳು !...

ಕುಂದಾಪುರ ತಾಲೂಕಿನ ಕುಗ್ರಾಮವೊಂದು ನನ್ನಜ್ಜಿಯ ಮನೆ ಇರುವ ಊರು. ತಿಂದುಣ್ಣುವುದಕ್ಕೆ ಅಷ್ಟೇನೂ ಕೊರತೆಯಿಲ್ಲದ ನನ್ನಜ್ಜಿಯ ಮನೆ ತುಂಬ ಜನ. ಐವರು ಸೋದರಮಾವಂದಿರು, ಅವರ ಮಕ್ಕಳು ಎಲ್ಲ ಸೇರಿದ್ದ ಕುಟುಂಬ. ಆಗ ಎಲ್ಲ ಶಾಲೆಗಳೂ ಸರಕಾರಿ ಶಾಲೆಗಳೇ, ಎಲ್ಲ ಕಲಿಕೆಯೂ ಕನ್ನಡ ಮಾಧ್ಯಮದಲ್ಲೇ.

ಅಮ್ಮನೂ ಹೆಚ್ಚಾಗಿ ನಮ್ಮೊಂದಿಗೆ ಅಜ್ಜಿಯ ಮನೆಗೆ ಬರುತ್ತಿದ್ದಳು. ಏನಾದರೂ ವಿಶೇಷ ಕಟ್ಟಲೆಗೆ ಬರುತ್ತಿದ್ದುದನ್ನು ಬಿಟ್ಟರೆ ನಮ್ಮಪ್ಪ, ಅಮ್ಮನ ತವರುಮನೆಗೆ ಬರುತ್ತಿದ್ದುದೇ ಕಡಿಮೆ. ಒಮ್ಮೊಮ್ಮೆ ಅನಿವಾರ್ಯ ಕಾರಣಗಳಿಗೆ ನಮಗೆ ರಜೆ ಸಿಕ್ಕಿದ ಕೂಡಲೇ ಅಮ್ಮನಿಗೆ ನಮ್ಮ ಜೊತೆ ಹೊರಟುಬರಲಾಗುತ್ತಿರಲಿಲ್ಲ. ಆಗ ಅಮ್ಮ ಊರಕಡೆ ಹೋಗುವ ಯಾರಾದರೂ ಪರಿಚಯಸ್ಥರಿದ್ದರೆ ನಮ್ಮನ್ನು ಅವರ ಜೊತೆ ಕಳುಹಿಸುತ್ತಿದ್ದಳು. ನಾವೂ ನಿಶ್ಚಿಂತೆಯಿಂದ ಅವರ ಜೊತೆ ಹೊರಡುತ್ತಿದ್ದೆವು.

ಅಮ್ಮನ ಜೊತೆಗೆ ಹೋಗುತ್ತಿದ್ದಾಗಿನ ಕತೆಯೇ ಬೇರೆ. ನಾವು ಬಸ್ಸಿಳಿದು ಬರುವ ಕಾಲುದಾರಿಯಲ್ಲಿ ಸಿಗುವ ಪರಿಚಯಸ್ಥರ ಮನೆಗಳು, ಅಮ್ಮನ ಬಾಲ್ಯದ ಗೆಳತಿಯರ ಅಮ್ಮಂದಿರು ಮಾತನಾಡಿಸುವಾಗ ಅವರ ಕರೆಗೆ ಓಗೊಟ್ಟು ಅವರ ಮನೆಗಳಿಗೆ ಹೊಕ್ಕು ಅಲ್ಲಿಂದ ಹೊರಟು ಅಜ್ಜಿಮನೆ ಸೇರುವಾಗ ಮಕ್ಕಳಾದ ನಮ್ಮ ತಾಳ್ಮೆ ಕಳೆದೇ ಹೋಗುತ್ತಿತ್ತು. ಅಂತೂ ನಮ್ಮ ರಗಳೆ ತಡೆಯಲಾರದೆ ಅಮ್ಮ ತನ್ನ ಮುಗಿಯದ ಮಾತಿನ ಮಳೆಯನ್ನು ಅರ್ಧಕ್ಕೆ ನಿಲ್ಲಿಸಿ ಅಲ್ಲಿಂದ ಹೊರಡುತ್ತಿದ್ದಳು.

ಅಜ್ಜಿಯ ಮನೆ ತಲುಪಿ ಒಬ್ಬರನ್ನು ನೂಕಿ ಇನ್ನೊಬ್ಬರು ಮುನ್ನುಗ್ಗಿ ಅಜ್ಜಿಯನ್ನು ಅಪ್ಪಿ ಹಿಡಿದರೆ ಆಗುತ್ತಿದ್ದ ಸಂತೋಷ ಅಷ್ಟಿಷ್ಟಲ್ಲ. ನಮ್ಮ ಗೌಜಿಗೆ ಮನೆಯಿಂದ ಎಲ್ಲರೂ ಹೊರಬಂದು ನಮ್ಮ ಸಂತೋಷದಲ್ಲಿ ಪಾಲುದಾರರು. ಸಿಹಿತಿಂಡಿ ಪ್ರಿಯೆ ಅಜ್ಜಿಗೆ ಅಮ್ಮ ಕಳುಹಿಸಿದ ಸಿಹಿತಿಂಡಿ, ಎಲೆ-ಅಡಿಕೆ ಸಾಮಾನುಗಳನ್ನು ಕೊಟ್ಟರೆ ಆಯ್ತು. ಅಲ್ಪತೃಪ್ತಳಾದ ಅಜ್ಜಿಗೆ ಆಗುವ ಖುಷಿ ಅಂತಿಂಥದ್ದಲ್ಲ. ಮನೆ ಹೊಕ್ಕ ನಮ್ಮನ್ನು ಅತ್ತೆ-ಮಾವ, ಅವರ ಮಕ್ಕಳು ಎಲ್ಲರೂ ಆದರಿಸುವವರೇ; ಸುತ್ತಮುತ್ತ ಎತ್ತ ನೋಡಿದರೂ ಎಲ್ಲ ಪ್ರೀತಿಸುವವರೇ. ಮಾವನಿಗಂತೂ ನಾವೆಲ್ಲ ಪಟ್ಟಣದಲ್ಲಿ ಓದುತ್ತಿದ್ದ ಬುದ್ಧಿವಂತ ಮಕ್ಕಳೆಂಬ ಅಭಿಮಾನ.

ಅಜ್ಜಿಯ ಮನೆಯೆದುರು ಸುಮಾರಾಗಿದ್ದ ದೊಡ್ಡ ಅಂಗಳ ಇತ್ತು. ನಡುವೆ ಅಜ್ಜಿ ತನ್ನ ಕೈಯಾರ ಮಾಡಿದ ಮಣ್ಣಿನ ದೊಡ್ಡ ತುಳಸೀಕಟ್ಟೆ. ಅದರೊಳಗೆ



ಸಮೃದ್ಧವಾಗಿ ಅಂಕೆಯಿಲ್ಲದೆ ಬೆಳೆದ ತುಳಸೀ ಗಿಡ. ಅದರ ಬುಡದಲ್ಲೇ ಮನೆಯಲ್ಲಿ ಒಬ್ಬರಲ್ಲ ಇನ್ನೊಬ್ಬರ, ಒಂದಿಲ್ಲೊಂದು ಚಿಕ್ಕಮಗುವಿನ ಹೊಟ್ಟೆನೋವನ್ನು ನಿವಾರಿಸಲು ಅಗತ್ಯವಿರುವ 'ಪಂಚಪತ್ರೆ' ಎನ್ನುವ ಮೂಲಿಕೆಯ ಗಿಡ, ಇವುಗಳ ಎಡೆಯಲ್ಲಿ ಅವಿತಿರುವ ಒಂದೆರಡು ನಸುಹಸಿರು–ಹಳದಿಮಿಶ್ರಿತ ಬಣ್ಣದ ಗೋಂಕರು ಕಪ್ಪೆಗಳು. ಪ್ರತಿದಿನ ಬೆಳಗ್ಗೆ ತುಳಸೀ ಪೂಜೆ ಮಾಡುವ ಅಜ್ಜಿಗೆ ವಿಶೇಷ ಕಳೆ. ಪೂಜೆಯ ಬಳಿಕ ಕಟ್ಟೆಯೊಳಗಿನ ಆ ಕಪ್ಪೆಗಳಲ್ಲಿ ಒಂದರ ಕಾಲುಗಳ ಎಡೆಯಲ್ಲಿ ಕೈ ಹಾಕಿ ಹಿಡಿದು ಅಜ್ಜಿ ನಮ್ಮ ಬಳಿ ಬರುತ್ತಿದ್ದಳು. ಆ ಹೊತ್ತಿಗೆ ಮಾತ್ರ ನಮಗೆಲ್ಲ ಗಾಬರಿ, ಭಯ, ಹೇವರಿಕೆ. ಹೀಗಾಗಿ ನಾವು ಮಕ್ಕಳೆಲ್ಲಾ ಹೆದರಿ ಬೊಬ್ಬಿಟ್ಟು ಮನೆಯೊಳಗೆ ಒಂದೇ ಓಟ.



ಅಂಗಳದ ಒಂದು ಕಡೆ ಹಟ್ಟಿ, ಇನ್ನೊಂದು ಕಡೆ ಮನೆ. ಹಟ್ಟಿಯಲ್ಲಿ ಅಜ್ಜಿಯ ಕಾಲಕ್ಕೆ ಎಮ್ಮೆಗಳಿದ್ದವು. ಉಳುಮೆಗೆ ಒಂದು ಜೊತೆ ಕೋಣಗಳು. ಒಳ್ಳೆಯ 'ಕರಾವು' ಇತ್ತು. ಎಮ್ಮೆ ಹಾಲಿನ ಮೊಸರು, ಬೆಣ್ಣೆ ಮತ್ತು ತುಪ್ಪದ ರುಚಿಯೇ ವಿಶಿಷ್ಟ. ಅಜ್ಜಿ ದೊಡ್ಡ ದೊಡ್ಡ ಪಿಂಗಾಣಿ ಭರಣಿಗಳಲ್ಲಿ ತುಪ್ಪ ಮಾಡಿ ತುಂಬಿಡುತ್ತಿದ್ದಳು. ದೀಪಾವಳಿ ಹಬ್ಬದಂದು ಎಣ್ಣೆನೀರಿನ ಸ್ನಾನ ಆದ ಬಳಿಕ ತಿನ್ನಲು ಮೆಂತೆ ಕಡುಬು; ಅದರ ಮೇಲೆ ಕಡುಬು ಮುಳುಗುವಂತೆ ತುಪ್ಪದ ಅಭಿಷೇಕ.

ಅಂಗಳದಿಂದ ಒಂದಾಳು ತಗ್ಗಿನಲ್ಲಿ, ಹತ್ತಿಪ್ಪತ್ತು ಹೆಜ್ಜೆ ದೂರದಲ್ಲಿರುವ ಆವರಣವಿಲ್ಲದ ಬಾವಿ. ಬಾವಿಯ ಸುತ್ತ ಕೆಂಪು ಬಣ್ಣದ ದಾಸವಾಳ ಹೂವಿನ, ನಸು ನೇರಳೆ, ನಸು ಹಳದಿ, ನಸು ಗುಲಾಬಿ ಮತ್ತು ಬಿಳಿ ಬಣ್ಣದ ಗೊರಟೆ ಹೂವಿನ ಗಿಡಗಳ ಪೊದೆ. ಬಾವಿಯ ಮೇಲೆ ಅಡ್ಡಲಾಗಿ ಹಾಕಿರುವ ಮರದ 'ದಡೆ'ಯ ಮೇಲೆ ಸೋದರತ್ತೆ ಅಥವಾ ಅವರ ಮಕ್ಕಳು ಕಾಲಿಟ್ಟು ಹಗ್ಗ ಇಳಿಸಿ ನೀರೆತ್ತುವುದನ್ನು ನೋಡುವಾಗ ನಮಗೆ ನಡುಕ.

ಅಜ್ಜಿಯ ಮನೆಯ ವಿನ್ಯಾಸವೇ ನಮ್ಮ ಮಟ್ಟಿಗೆ ಮೈನವಿರೇಳಿಸುವಂಥದ್ದು. ಅದೇನು ಆರಂಕಣದ ಮನೆಯಲ್ಲ. ಮರದ ಕಲಾತ್ಮಕ ಕುಸುರಿ ಕೆಲಸವೂ ಅಲ್ಲಿಲ್ಲ. ಅದು ಮಣ್ಣಿನ ಗೋಡೆಗಳ ಚಿಕ್ಕದಾದ ಚಾವಡಿ ಮನೆ, ಅಷ್ಟೆ. ಆ ಚಾವಡಿಯಲ್ಲಿ ಅತ್ಯಂತ ಸರಳ ಕೆತ್ತನೆಯ ಮರದ ಒಂದು ದೊಡ್ಡ ಕಂಬ. ಅದರ ಆಚೀಚೆ ಕೆಲವು ಕೋಣೆಗಳು. ಚಾವಡಿಯ ಕೆಳಗಿನ ಅಗಲವಾದ ಜಗುಲಿಯಂತಹ ಭಾಗದ ಒಂದು ಬದಿಯಲ್ಲಿ, ಭತ್ತ ಕುಟ್ಟುವ ಒರಳು. ಅದರಲ್ಲಿ ಮೂರು ಮಂದಿ ಹೆಂಗಸರು ಹಾಡುತ್ತ ಭತ್ತ ಕುಟ್ಟುವ ದೃಶ್ಯ ನಿಜಕ್ಕೂ ಒಂದು ವಿಸ್ಮಯ. ಅವರು ಒಂದು ನಿರ್ದಿಷ್ಟ ಲಯಕ್ಕನುಗುಣವಾಗಿ ಎಂಬಂತೆ ಒನಕೆಯನ್ನು ಒರಳಿನೊಳಕ್ಕೆ ಹಾಕುತ್ತ, ಒರಳಿನ ಹೊರಭಾಗದಲ್ಲಿರುವ ಭತ್ತವನ್ನು ಒರಳಿನೊಳಗೆ ಕಾಲಿನಿಂದ ನೂಕುವುದು; ಮತ್ತೆ ಭತ್ತವನ್ನು ಕುಟ್ಟುವ ಕೆಲಸ ನಿಲ್ಲಿಸದೆ ನಡುವೆಯೇ ಕಾಲಿನಿಂದಲೇ ಹೊರಕ್ಕೆ ಹಾರಿಸುವುದು. ಒಬ್ಬರ ಒನಕೆಯೂ ಯಾರ ಕಾಲಿಗೂ ತಾಗದು... ಅಬ್ಬಾ! ಎಂಥ ಚಾಕಚಕ್ಯತೆ.

ಚಾವಡಿಯನ್ನು ದಾಟಿ ನಡುಮನೆಗೆ ಬಂದರೆ, ಅಲ್ಲೇ ಬದಿಯಲ್ಲಿ ನೇತಾಡುವ 'ಸಿಕ್ಕ'. ಅದರಲ್ಲಿ ಒಂದು ಪುಟ್ಟ ಮಡಕೆಯಲ್ಲಿ ಹಾಲು ಅಥವಾ ಬೆಣ್ಣೆ ತೇಲಿಸಿಕೊಂಡಿರುವ ಕಡೆದ ಮಜ್ಜಿಗೆ. ನಡುಮನೆಯ ಒಂದು ಪಾರ್ಶ್ವದಲ್ಲಿ ಭತ್ತ, ಅಕ್ಕಿ ಮತ್ತು ಇತರ ಧಾನ್ಯಗಳ ಚೀಲಗಳನ್ನು ಕೂಡಿಡುವ ಚಿಕ್ಕ 'ಒರಿಕೋಣೆ'. ಅದರ ಬಾಗಿಲು ತುಂಬ ತಗ್ಗಿನದು. ನಾವು ಅದರೊಳಗೆ ಹೋಗುತ್ತಿದ್ದುದೇ ಕಡಿಮೆ. ಮನೆಯ ಹೊರಪಾರ್ಶ್ವದಲ್ಲಿ ಬಾಣಂತಿ ಕೋಣೆ. ಅದು ಕೂಡ ನಮ್ಮ ಇಷ್ಟದ ಜಾಗವಲ್ಲ. ಇನ್ನೊಂದು ಪಾರ್ಶ್ವದಲ್ಲಿ ಅಡುಗೆಮನೆ. ಅಲ್ಲಿ ಸದಾ ಉರಿಯುತ್ತಿರುವ ಒಲೆ. ಏನನ್ನಾದರೂ ಮಾಡುತ್ತಲೇ ಇರುವ ದೊಡ್ಡತ್ತೆ, ಚಿಕ್ಕತ್ತೆ, ದೊಡ್ಡಮ್ಮ ಮತ್ತಿತರ ಹೆಂಗಸರು.

ಮನೆಯ ಹಿಂಬದಿಯಲ್ಲಿ ಎತ್ತರದಲ್ಲಿ ಒಂದು ಚಿಕ್ಕ ಹಾಡಿ. ಅಲ್ಲಿ ನೇರಳೆಹಣ್ಣಿನ ಆಕಾಶದೆತ್ತರದ ಮರಗಳು (ಇನ್ನೂ ಎಷ್ಟೋ ಬಗೆಯ ಮರಗಳಿದ್ದರೂ ನಮಗೆ ಕಾಣಿಸುವುದು ಹಣ್ಣು ಕೊಡುವ ಮರಗಳು ಮಾತ್ರ ತಾನೇ!). ಅವುಗಳಿಗೆ ಪ್ರತಿದಿನವೂ ದಾಳಿಯಿಡುವ 'ಬುಕ್ಕ' (ಲಂಗೂರ್)ಗಳು. ಅವುಗಳ ದಾಳಿಯಿಂದಾಗಿ ಧಾರಾಕಾರವಾಗಿ ಮಳೆ ಸುರಿದಂತೆ ಕೆಳಗೆ ಬೀಳುವ ನೇರಳೆ ಹಣ್ಣುಗಳು. ಕಳಿತ ಯಥೇಚ್ಛ ಹಣ್ಣುಗಳನ್ನು ತಿನ್ನುವುದಕ್ಕೆ ನಮಗೆ ಒಂದು ಬಾಯಿ ಸಾಲದು.

ಮನೆಯ ಪಕ್ಕದ ಇಳಿಜಾರಿನಲ್ಲಿ ಒಂದು ಚಿಕ್ಕ ಗದ್ದೆಯಷ್ಟು ಜಾಗದಲ್ಲಿ ಅಜ್ಜಿ ಬೆಳೆಸಿದ ಹರಿವೆಸೊಪ್ಪಿನ ಗಿಡಗಳ 'ಹಗ್ಗಿ ಗರ'. ಅದರ ನಡುವೆ ಮುಳ್ಳುಸೌತೆಯ ಬಳ್ಳಿಗಳು. ಅದರಲ್ಲಿ ಬಿಟ್ಟ ಎಳೆ ಮುಳ್ಳು ಸೌತೆ ಮಿಡಿಗಳು. ಇಬ್ಬನಿ ಸುರಿದ ಚುಮುಚುಮು ಚಳಿಯ ಮುಂಜಾವದಲ್ಲಿ ಅಲ್ಲಿಗೆ ಹೋಗಿ ನಾವು ಬಳ್ಳಿಯಿಂದ ಅವುಗಳನ್ನು ಕೊಯ್ದು, ಕದ್ದು ತಿನ್ನುತ್ತಿದ್ದೆವು. ಅಂದಿನ ದಿನಗಳಲ್ಲಿ ಯಾರೂ ಅಡುಗೆಗಾಗಿ ಮಾರುಕಟ್ಟೆಗೆ ಹೋಗಿ ತರಕಾರಿ ತರುವ ಕ್ರಮವೇ ಇರಲಿಲ್ಲ. ಮನೆಯಲ್ಲೇ ಬೆಳೆಸಿದ ಕೆಂಪು–ಹಸಿರು ದಂಟಿನ ಬಸಳೆ ಸೊಪ್ಪು, ಹರಿವೆ ಸೊಪ್ಪು, ಬೆಂಡೆ, ತೊಂಡೆ, ಬದನೆ, ಸೌತೆ, ಮುಳ್ಳುಸೌತೆಕಾಯಿ, ಗೆಣಸು, ಮರಗೆಣಸು ಇವುಗಳದೇ ಬಳಕೆ.

ಅಜ್ಜಿಯ ಮನೆಯ ಅಂದಿನ ಚಳಿಗಾಲವೆಂದರೆ ಹೊದಿಕೆಯಿದ್ದರೂ ಮೈಯೆಲ್ಲಾ ಒದ್ದೆಯಾದಂತೆ ಭ್ರಮೆ ಮೂಡಿಸುವಂಥದ್ದು. ಮುಂಜಾವು ಅದೆಷ್ಟು ತಣ್ಣಗಾಗಿರುತ್ತಿತ್ತೆಂದರೆ ಹೊದಿಕೆಯ ಮೇಲೆ ಕೊರೆಯುವ ತಣ್ಣೀರು ಚೆಲ್ಲಿದ ಅನುಭವ. ಈ ಚಳಿಯಲ್ಲಿ ಬೆಳಗೆದ್ದು ತರಗೆಲೆಗಳನ್ನು ಒಟ್ಟುಗೂಡಿಸಿ ಹಚ್ಚಿದ ಬೆಂಕಿಯ ಎದುರು ಎಲ್ಲರೊಂದಿಗೆ ಕೂತು ನಾವೂ ಚಳಿ ಕಾಯಿಸಿಕೊಳ್ಳುತ್ತಿದ್ದೆವು. ಇಂತಹ ದಿನಗಳಲ್ಲೇ, ಅಂದರೆ ಜನವರಿ ತಿಂಗಳ ಮಕರ ಸಂಕ್ರಾಂತಿಯ ದಿನದಂದು ಮನೆಗೆ ನಾಲ್ಕಾರು ಮೈಲಿ ದೂರದ ಮಾರಣಕಟ್ಟೆಯಲ್ಲಿ ಹಬ್ಬ. ಈ ಹಬ್ಬಕ್ಕಾಗಿಯೇ ಕೆಲವು ದಿನ ಮುಂಚಿತವಾಗಿ ಅಜ್ಜಿಮನೆಗೆ ಬರುತ್ತಿದ್ದೆವು; ಹಬ್ಬದ ದಿನಕ್ಕಾಗಿ ಎದುರು ನೋಡುತ್ತಿದ್ದೆವು. ಆ ದಿನಗಳಲ್ಲಿ ರಾತ್ರಿ ಮಲಗಿರುವಾಗ ಎಲ್ಲಿಯೋ ದೂರದಲ್ಲಿ ಹುಲಿ ಕೂಗಿದ ಸದ್ದು. ಕತ್ತಲಲ್ಲಿ ಅಮ್ಮನ ಬಳಿ ಅಜ್ಜಿ, "ಕೇಳಿತೇ ಹುಲಿ ಕೂಗಿದ್ದು? ಮಾರಣಕಟ್ಟೆಯ ಜಾತ್ರೆಯ ದಿನ ಹತ್ತಿರವಾಯಿತಲ್ಲ, ಮೇಲಿನ ಮನೆಯವರ ದನ ಮೇಯಲು ಹೋದದ್ದು ಬರಲೇ ಇಲ್ಲವಂತೆ; ಹುಲಿ ಹಿಡಿಯಿತೋ ಏನೋ" ಎನ್ನುವಾಗ ನಮಗೆ ಎದೆ ಬಿರಿಯುವ ಹೆದರಿಕೆ.

ಹಬ್ಬದ ದಿನ ಮನೆಯ ದೊಡ್ಡವರು ನಮ್ಮ ಕೈಮೇಲೆ ನಾಲ್ಕಾಣೆಯನ್ನೋ ಎಂಟಾಣೆಯನ್ನೋ, ಹೆಚ್ಚೆಂದರೆ ಒಂದು ರೂಪಾಯಿಯನ್ನೋ ಹಾಕುತ್ತಿದ್ದರು, ಮಕ್ಕಳ ಹಬ್ಬದ ಖರ್ಚಿಗೆ ಅಂತ. ಅದೇ ದೊಡ್ಡ ಮೊತ್ತ ನಮಗೆ. ಅದರಲ್ಲಿ ಏನು ತೆಗೆದುಕೊಳ್ಳುವುದು, ಏನು ಬಿಡುವುದು ಎಂಬ ಗೊಂದಲ ನಮಗೆ. ಹಬ್ಬಕ್ಕೆ ಹೋಗುವುದು ಎಲ್ಲರೂ ಜೊತೆಯಾಗಿ ನಡೆದುಕೊಂಡೇ. ನಮ್ಮ ಸಂಭ್ರಮದ ಮುಂದೆ ಎಷ್ಟು ನಡೆದರೂ ದಣಿವು ಅನಿಸುತ್ತಲೇ ಇರಲಿಲ್ಲ. ದೇವಸ್ಥಾನಕ್ಕಿಂತ ಮೊದಲು 'ಹಬ್ಬದ ಗುಡಿ'. ಅಲ್ಲಿರುವ ಮುಂಡಕ್ಕಿ (ಚುರುಮುರಿ), ಕಾರಕಡ್ಡಿ (ಕರಿದ ತಿಂಡಿ), 'ಪ್ಯಾಪಿ' (ಸಕ್ಕರೆಕಡ್ಡಿ), ಜಿಲೇಬಿ ಮೊದಲಾದ ಸಿಹಿತಿಂಡಿಗಳ ಅಂಗಡಿ, ಬಳೆ ಅಂಗಡಿ, ಆಟಿಕೆ ಸಾಮಾನುಗಳ ಅಂಗಡಿ... ಇನ್ನೂ ಯಾವ್ಯಾವುದೋ ಅಂಗಡಿಗಳು. ಹೆಚ್ಚಿನ ಅಂಗಡಿಗಳವರು ಪ್ರತಿವರ್ಷವೂ ಬರುವವರು, ಎಲ್ಲರೂ ಅಜ್ಜಿಯ ಗುರುತಿನವರೇ. ಅವರೆಲ್ಲ ಅಜ್ಜಿಯನ್ನು ಮಾತಾಡಿಸುತ್ತ, ಜೊತೆಗಿರುವ ನಮ್ಮ ಬಗ್ಗೆ ವಿಚಾರಿಸುವಾಗ 'ಹಬ್ಬದ ಗರ'ದಲ್ಲಿ ನಮ್ಮಷ್ಟು ಪ್ರತಿಷ್ಠಿತರೇ ಇಲ್ಲ ಎಂಬ ಹೆಮ್ಮೆಯ ಭಾವ ನಮಗೆ. ಹಣೆಯಲ್ಲಿ ದೊಡ್ಡ ಕುಂಕುಮ ಬೊಟ್ಟಿನ ಬಳೆಗಾರ್ತಿ ಶೇಷುವಿನ ಹತ್ತಿರ ಅಜ್ಜಿಯ ಅಪ್ಪಣೆಯ ಮೇರೆಗೆ ಬಳೆ ಇಡಿಸಿಕೊಳ್ಳುವುದು ಪ್ರತಿ ವರ್ಷ ನಡೆಯುವ ಸಂಭ್ರಮದ ಕಾರ್ಯ. ವರ್ಷದ ಬೇರೆ ಸಮಯದಲ್ಲೂ ಬಳೆ ಇಡುವುದಕ್ಕಾಗಿ ಆಕೆ ಅಜ್ಜಿ ಮನೆಗೇ ಬರುತ್ತಾಳಾದರೂ ಇಲ್ಲಿ ಕಾಣುವ ಬಳೆಗಾರ್ತಿಯೇ ಬೇರೆ. ತಲೆ ತುಂಬ ನಳನಳಿಸುವ ಅರಶಿಣ ಬಣ್ಣದ ಸೇವಂತಿಗೆ ಹೂವಿನ ದಂಡೆ ಮುಡಿದ, ದೊಡ್ಡ ಮೂಗುತಿಯಿಂದ ಸಿಂಗಾರಗೊಂಡ ಅವಳನ್ನು ನೋಡುವುದಕ್ಕೆ ಎರಡು ಕಣ್ಣು ಸಾಲದು. ಈ ಹಬ್ಬದ ಗುಡಿಗೆ ಹತ್ತಿರದಲ್ಲಿ ಫಲ್ಗುಣಿ ನದಿ ದೊಡ್ಡ ತೊರೆಯಂತೆ ಹರಿಯುತ್ತದೆ. ಅದರಲ್ಲಿಳಿದು ನಡೆದೇ ಹೊಳೆ ದಾಟುವುದು, ದೇವಸ್ಥಾನಕ್ಕೆ ಹೋಗುವುದು (ಕೆಲವು ವರ್ಷದ ನಂತರದಲ್ಲಿ ಅದಕ್ಕೆ ಸಂಕ ಆಯಿತು. ಆಗಲೂ ನಾವು ಮಾತ್ರ ನದಿಯಲ್ಲಿಳಿದೇ ದಾಟುತ್ತಿದ್ದುದು. ಅದರಿಂದ ಸಿಗುವ ಸುಖವನ್ನು ಕಳೆದುಕೊಳ್ಳುವುದುಂಟೇ!). ಅಲ್ಲಿ ಸಿಗುವ ಪರಿಚಯದ ಅನೇಕರು. ಅವರ ಜೊತೆ ಮಾತನಾಡಿ ಹರಕೆ ಇದ್ದರೆ ಪೂರೈಸಿ, ಪೂಜೆ

ಮುಗಿಸಿ, ಪ್ರಸಾದ ಸ್ವೀಕರಿಸಿ ಹಿಂದಿರುಗುವಾಗ ಸ್ವಲ್ಪ ತಿಂಡಿ ಖರೀದಿ. ಮನೆಗೆ ಬಂದ ಬಳಿಕ ಎಲ್ಲರಿಗೂ ತಿಂಡಿ ಹಂಚಿಕೆ.

ನಮ್ಮೆಲ್ಲರ ದಿನನಿತ್ಯದ ಹೊಟ್ಟೆಪಾಡಿನ ಚಿಂತೆ ಹಿರಿಯರದ್ದು ಮಾತ್ರ. ನಮ್ಮದೇನಿದ್ದರೂ ಆಟದ ಲೋಕ. ಅಲ್ಲಿ ಆಡದ ಆಟಗಳಿಲ್ಲ; ಮನೆಯಾಟದಿಂದ ಹಿಡಿದು ಯಕ್ಷಗಾನದವರೆಗೆ. ತಿರುಗಾಡದ ಸ್ಥಳಗಳಿಲ್ಲ; ಮನೆ ಪಕ್ಕದ ಹಾಡಿಯ ನೇರಳೆ ಹಣ್ಣಿನ ಮರಗಳ ತೋಪಿನಿಂದ ಹಿಡಿದು ಗೋವೆಮರಗಳ ಗೇರುಗುಡ್ಡೆ, ನೆಲ್ಲಿಕಾಯಿ ಮರಗಳ 'ಬೂತನಮಕ್ಕಿ'ಯವರೆಗೆ. ಅಲ್ಲಿ ಬೆಳೆದು ನಿಂತ ಬೃಹದಾಕಾರದ 'ತಾಳೆಮರ'ಗಳು ಮತ್ತು ಅಲ್ಲಿನ ನೀರವತೆಯಲ್ಲಿ ಅವುಗಳ ಗರಿಗಳಿಂದ ಹೊರಡುವ ಸದ್ದು. ಈ ಮರಗಳ ಜೊತೆ ಅಜ್ಜಿಯಿಂದ, ಮಾವಂದಿರಿಂದ ರಾತ್ರಿ ವೇಳೆಯಲ್ಲಿ ಕೇಳಿದ ಭೂತದ ಕತೆಗಳು, ನಾವು ಓದುತ್ತಿದ್ದ 'ಚಂದಮಾಮಾ'ದ ಕತೆಗಳೂ ಸೇರಿಕೊಂಡು, ನಾವೂ ಪಾತ್ರಧಾರಿಗಳಾಗಿ ತೊಳಲಾಡುವ ಕನಸುಗಳು; ಕಾಡುವ ಕಲಸುಮೇಲೋಗರದ ಅರ್ಥರಹಿತ ಸನ್ನಿವೇಶಗಳು. ಆದರೂ ಹಗಲು ವೇಳೆಯಲ್ಲಿ ಅವುಗಳನ್ನು ಒಂದು ಬಗೆಯ ದಿಗಿಲಿನಲ್ಲೇ ನೋಡುತ್ತ, ಭಯವನ್ನು ಮನಸ್ಸಿನಲ್ಲೇ ಅಡಗಿಸಿಕೊಂಡು ಮಾವಂದಿರ ಮಕ್ಕಳ ಜೊತೆ ಚೂರಿಹಣ್ಣು, ಗರ್ಚನ ಹಣ್ಣು, ಮುಳ್ಳಣ್ಣು, ಮುಂಡಕ್ಕಿ ಹಣ್ಣು, ಚಾಪೆಹಣ್ಣು, ಮುರಿನ್ ಹಣ್ಣು ಹುಡುಕಿ ಅಲೆಯುವ ಗಮ್ಮತ್ತು. ಅದನ್ನು ಅನುಭವಿಸುತ್ತಿದ್ದ ರೀತಿ ಈಗಲೂ ಅದೇ ಬಗೆಯ ಬಾಲ್ಯದ ಮೈಯಲ್ಲಿ ಪುಳಕವನ್ನೆಬ್ಬಿಸುತ್ತದೆ. ಆ ಹಣ್ಣುಗಳ ರುಚಿ ಇಂದಿನ ಯಾವ ದುಬಾರಿ ಹಣ್ಣಿನಿಂದಲೂ ಸಿಗದು.

ಹಗಲೆಲ್ಲ ಹೀಗೇ ಕಳೆದುಹೋದರೆ ರಾತ್ರಿಯ ಸಂಗತಿಯೇ ಬೇರೆ. ಕಾಡುಗಳಿಂದ ಸುತ್ತುವರಿದ ಹಳ್ಳಿಯಾದ್ದರಿಂದ ಸಂಜೆ ಆರಕ್ಕೆಲ್ಲ ನಸುಕತ್ತಲು; ಆಮೇಲೆ ಒಮ್ಮೆಲೇ ಆವರಿಸಿಕೊಳ್ಳುವ ಕಾರ್ಗತ್ತಲು. ಅಂಗಳದಿಂದ ಕೆಳಗಿರುವ ಬಾವಿಯ ಪಕ್ಕದ ಖಾಲಿಜಾಗದಲ್ಲಿ ಕಟ್ಟಿದ ತೆರೆದ ಬಚ್ಚಲಿನಲ್ಲಿ ನಮ್ಮೆಲ್ಲರ ಸ್ನಾನ. ಒಲೆಯಲ್ಲಿ ಧಗಧಗನೆ ಉರಿಯುವ ಬೆಂಕಿ; ಮಣ್ಣಿನ ದೊಡ್ಡ ಹಂಡೆಯಲ್ಲಿ ಕೊತಕೊತನೆ ಕುದಿಯುವ ನೀರು. ಬಾವಿಯಿಂದ ನೀರು ಸೇದಿ, ಬೆರೆಸಿ ಹದಮಾಡಿಕೊಡುವ ನಮಗಿಂತ ಸ್ವಲ್ಪ ಚಿಕ್ಕವರಾದ ಮಾವನ ಮಕ್ಕಳು. ಕತ್ತಲಲ್ಲಾದರೂ ಹೀಗೆ ತೆರೆದ ಬಯಲಲ್ಲಿ ಬೇರೆ ಮಕ್ಕಳ ಎದುರೇ ಸ್ನಾನ ಮಾಡಲು ನಮಗೆ ನಾಚಿಕೆ.

ಅಜ್ಜಿಯ ಮನೆಯಲ್ಲಿ ಕೃಷಿಯೇ ಹೊಟ್ಟೆಪಾಡು. ಅವರದೇ ಆದ ಗದ್ದೆಗಳಿದ್ದು, ಮನೆಯ ಹೆಂಗಸರು-ಗಂಡಸರೆಲ್ಲರೂ ಅದರಲ್ಲಿ ಕಷ್ಟಪಟ್ಟು ದುಡಿಯಬೇಕಿತ್ತು. (ಹಾಗೆ ದುಡಿದರೆ ಮಾತ್ರ ವರ್ಷವಿಡೀ ಅಂಗಡಿಯಿಂದ ಅಕ್ಕಿ ತಾರದೆ ದಿನ ತೆಗೆಯಬಹುದಾಗಿತ್ತು). ಅವರು ಗದ್ದೆ ಕೆಲಸದಲ್ಲಿ ತೊಡಗಿದ್ದಾಗ ನಾವು ಅಲ್ಲಿಗೂ ಹೋಗಿ ಅವರ ಕಾಲಿಗೆ ತೊಡರುತ್ತಿದ್ದೆವು. ಅವರು 'ಅಗೆ' ಕೀಳುವಾಗ ನಮಗೂ ಕುತೂಹಲ; ಕೆಸರು ಗದ್ದೆಯಲ್ಲಿ ಇಳಿದು ಅವರು ಮಾಡಿದಂತೆ ಮಾಡುವ ಚಪಲ. ಯಾವುದಕ್ಕೂ ಬೈಯ್ಯದೆ ನಗುತ್ತ ನಮ್ಮನ್ನು ಗದ್ದೆಗಿಳಿಸಿ ಅಗೆ ಕೀಳುವುದನ್ನು ಹೇಳಿಕೊಡುವುದೇನು! ನಾವು ತಪ್ಪು ತಪ್ಪಾಗಿ ಕಿತ್ತಾಗ ಕೊಂಡಾಟದಿಂದ ಹಾಗಲ್ಲ ಹೀಗೆ ಎಂದು ಹೇಳಿಕೊಡುವ ಸಹನೆಯೇನು! (ಅದನ್ನೆಲ್ಲ ಅನುಭವಿಸಿದ ನಮಗೂ ಈಗ ಸಹನೆಯದೇ ಕೊರತೆ). ನಾವು ಬೇಸಿಗೆ ರಜೆಯಲ್ಲಿ ಅಜ್ಜಿಯ ಮನೆಗೆ ಹೋದಾಗ ಅಷ್ಟೆಲ್ಲ ಕೆಲಸಗಳ ನಡುವೆಯೂ ನಮ್ಮನ್ನು ವಿಚಾರಿಸುತ್ತಿದ್ದ, ನಮಗೆ ಇದ್ದುದರಲ್ಲೇ ಅಡುಗೆ ಮಾಡಿ ಪ್ರೀತಿಯಿಂದ ಬಡಿಸುತ್ತಿದ್ದ ಅತ್ತೆ, ನಾವು ಬುದ್ಧಿವಂತರೆಂಬ ಅಭಿಮಾನದಿಂದ ಮಾತನಾಡಿಸುವ ಮಾವ ಈಗೆಲ್ಲಿದ್ದಾರೆ?

ಇಡೀ ದಿನ ಗದ್ದೆ ಬಯಲಲ್ಲೋ ಇನ್ನೆಲ್ಲೋ ಆಡುತ್ತ, ಎಲ್ಲೆಲ್ಲೂ ಇರುತ್ತಿದ್ದ ಮಾವಿನಮರದಿಂದ ಉದುರುವ ಸಿಹಿಯಾದ ಹಣ್ಣುಗಳನ್ನು ಬೇಕೆಂಬಷ್ಟು ತಿಂದು ಹೊಟ್ಟೆ ಹಸಿವು ಹೆಚ್ಚಿಸಿಕೊಂಡು ಮನೆಗೆ ಬಂದರೆ ಅಲ್ಲಿ ಅಡುಗೆ ತಯಾರಿರುತ್ತಿತ್ತು. ನಾವು ಏನೇ ಮಾಡಲಿ, ಎಷ್ಟೇ ಆಡಲಿ, ಮೈ ಕೈಗೆಲ್ಲ ಮಣ್ಣು ಹೊಯ್ದುಕೊಂಡೇ ಬರಲಿ, ಒಂದೇ ಒಂದು ಬೈಯ್ಯುಳದ ಮಾತಿಲ್ಲ. ಆದರೆ ಈಗ ಮಕ್ಕಳನ್ನು ಮಣ್ಣಿಗೆ ಕಾಲಿಡಲೂ ಬಿಡದ, ಎಲ್ಲೋ ಅಪರೂಪಕ್ಕೆ ಬಿಟ್ಟರೂ ಚಪ್ಪಲಿ ಧರಿಸಿಯೇ ಹೊರಹೋಗಬೇಕೆನ್ನುವ, ಅವರ ಚಿಕ್ಕಪುಟ್ಟ ಕೀಟಲೆಗೂ ತಕ್ಷಣವೇ ತಾಳ್ಮೆ ಕಳೆದುಕೊಳ್ಳುವ ನಮ್ಮಂಥವರಿಗೆ ಏನೆನ್ನಬೇಕು? ಇದು ಬೇಸಿಗೆಯ ಕಥೆಯಾದರೆ ಮಳೆಗಾಲದ ಮಜವೇ ಬೇರೆ.

ಕರಾವಳಿ-ಮಲೆನಾಡಿನ ಮಳೆ ಹೆಸರುವಾಸಿಯಾದದ್ದು. ನಮ್ಮ ಆಟದ ಅಂಗಣವು ಮಳೆಗಾಲದಲ್ಲಿ ಮನೆಯೊಳಗೇ ಸೀಮಿತವಾಗಬೇಕಾಗುತ್ತಿತ್ತು.

ರಾತ್ರಿ ಆಯಿತೆಂದರೆ ಕಿವಿ ಕೆಪ್ಪಾಗುವಂತೆ ಕೂಗುವ ತರಹೇವಾರಿ ಕಪ್ಪೆಗಳು; ಜೀಂಗುಡುವ ಜೀರುಂಡೆಗಳು, ಒಂದು ಬಗೆಯ ನೀರವತೆ. ಮನೆಯ ಅಂಗಳ ದಾಟದರೆ, ಅದರ ಆಚೆಗಿರುವ ದನಗಳ ಹಟ್ಟಿಗೆ ಹೊಂದಿಕೊಂಡಿರುವ 'ಮಾಡಿ'ನ ಅಡಿ ಇರುವ ಜಾಗದಲ್ಲಿ ಮಳೆಗಾಲಕ್ಕೆ ಮಾತ್ರ ಸ್ನಾನದ ಮನೆಯ ಏರ್ಪಾಟು. ಅಲ್ಲಿ ಸ್ನಾನ ಮಾಡಿ ಊಟಕ್ಕೆ ಹಾಜರು. ಅದನ್ನು ಮುಗಿಸಿ ಕೈ ತೊಳೆಯುವುದಕ್ಕೂ ನಾವು ಹೊರಹೋಗಬೇಕೆಂದಿಲ್ಲ. ನಮಗಾಗಿ ಅಡುಗೆಮನೆಯ ಹೊರಭಾಗದಲ್ಲಿಟ್ಟ ದನಗಳ 'ಬಾಯರು ಡಬ್ಬಿ'ಯಲ್ಲೇ ಕೈ ತೊಳೆಯಲು ನಮಗೆ ಮಾತ್ರ ಅನುಮತಿ. ಕೈಗೇ ನೀರು ಹಾಕುವ ಮಾವನ ಮಕ್ಕಳ ಉಪಚಾರ. ರಾತ್ರಿ ಎಂಟರ ವೇಳೆಗೆಲ್ಲ ಮಧ್ಯರಾತ್ರಿಯಾಯಿತೆಂಬ ಭ್ರಮೆ ಮೂಡಿಸುವ ಕತ್ತಲು. ತಲೆ ಮಾತ್ರ ಹೊರಹಾಕಿ ಕಣ್ಣು ಹಾಯಿಸಿದರೆ ಅಲ್ಲೇನಿದೆ ? ಕತ್ತಲೋ ಕತ್ತಲು... ಎಲ್ಲೆಲ್ಲೂ ಗವ್ವೆನ್ನುವ ಕತ್ತಲು ಮಾತ್ರ. ರಾತ್ರಿ ಯಾವ್ಯಾವುದೋ ಹೊತ್ತಿಗೆ ಜೋರಾಗಿ ಬರುವ ಮೂತ್ರಶಂಕೆ. ಮನೆಯ ಮೆಟ್ಟಿಲಿಳಿದು ಹೊರಹೋಗಲು ಮೈ ಝುಮ್ಮೆನ್ನಿಸುವ ವರ್ಣಿಸಲಾಗದ ಭಯ. ಇನ್ನೇನು ಮಾಡುವುದು ? ಅಲ್ಲೇ ಮೆಟ್ಟಿಲಲ್ಲೇ ಕುಳಿತು ಮುಗಿಸಿಬಿಡುವುದೊಂದೇ ದಾರಿ. ಹೇಗೂ ಯಾವುದಕ್ಕೂ ಬೈಯ್ಯುವವರಿಲ್ಲವಲ್ಲ.

ನಮ್ಮ ಹರೆಯದ ದಿನಗಳಲ್ಲೂ ಪಟ್ಟಣದ ನಮ್ಮ ಮನೆಗೆ ಬರುತ್ತಿದ್ದ ಅಜ್ಜಿ, ತನ್ನೊಂದಿಗೆ ಹೊತ್ತು ತರುತ್ತಿದ್ದ ಅಪರಿಮಿತ ಪ್ರೀತಿ ಮತ್ತು ಪ್ರಾಣಿ-ಪಕ್ಷಿಗಳ ಆಕೃತಿಯ ಬಿಸ್ಕತ್ತುಗಳು, ದೊಡ್ಡ ಕಿತ್ತಳೆತೊಳೆಯ ಆಕಾರದ ಹುಳಿ-ಸಿಹಿ ರುಚಿಯ ಪೆಪ್ಪರ್‌ಮೆಂಟ್, ಅಕ್ಕಿಹಿಟ್ಟು ಮತ್ತು ಬೆಲ್ಲದ ಪಾಕದ ಮಿಶ್ರಣದ ಆಕ್ರೋಟ್‌ನ ಬೆಲೆ ನಿರ್ಧರಿಸಲು ನಾವಿಂದು ಶಕ್ತರೇ ? ಹಳ್ಳಿಯ ಸಂತೆಯಲ್ಲಿ ಅಜ್ಜಿ ತೆಗೆಸಿಕೊಡುತ್ತಿದ್ದ ಹತ್ತುಪೈಸೆಯ ಐಸ್‌ಕ್ಯಾಂಡಿಯ ರುಚಿ ಈಗ ನಾವು ಪ್ರತಿಷ್ಠಿತ ಮಾಲ್‌ಗಳಲ್ಲಿ ಮೆಲ್ಲುವ ಹೆಚ್ಚು ಬೆಲೆಯ ದಿಲ್‌ಕುಶ್‌ಗೋ, ಗಡ್‌ಬಡ್‌ಗೋ ಬಂದೀತೇ? ಅಜ್ಜಿಯ ಜೊತೆ ನಾವು ಹಂಚಿಕೊಳ್ಳದ ಸಂಗತಿಗಳಿಲ್ಲ-ಅಮ್ಮನ ಜೊತೆ ಮುನಿಸಿಕೊಂಡರೆ ಅಮ್ಮನ ದೂರು, ರೇಗಿಸುವ ಹುಡುಗರ ವಿಚಾರ, ಕಾಲೇಜಿನ ಗೆಳತಿಯರ ವಿಷಯ... ಏನಿಲ್ಲ, ಏನುಂಟು? ಬರಿಗಾಲಲ್ಲೇ ನಡೆದಾಡುವ ಅಜ್ಜಿಯನ್ನು 'ಚಕ್ರವ್ಯೂಹ' ಸಿನಿಮಾಕ್ಕೆ ಕರೆದುಕೊಂಡು ಹೋದರೆ ಅಲ್ಲಿ ಹೌಸ್‌ಫುಲ್ ಆಗಿರಬೇಕೇ? ಆಯ್ತು, ಅಲ್ಲಿ ಟಿಕೆಟ್ ಸಿಗಲಿಲ್ಲವೆಂದು ಇನ್ನೊಂದು ಥಿಯೇಟರ್‌ಗೆ ಓಡಿ 'ಗಂಧರ್ವಗಿರಿ' ತೋರಿಸಿದ್ದಾಯ್ತು. ಮರುದಿನವೇ ಮತ್ತೆ ಚಕ್ರವ್ಯೂಹಕ್ಕೆ. ಅಜ್ಜಿಯೂ ನಮ್ಮ ಜೊತೆಗೇ. ಅವಳು ನಮ್ಮ ಗೆಳತಿಯ ಹಾಗೆ. ಅವಳಲ್ಲಿ ನಮಗೇನೂ ಮುಜುಗರವಿಲ್ಲ. ಅದರಲ್ಲಿನ 'ಚಳಿ ಚಳಿ' ಹಾಡಿಗೆ "ಹೀಂಗಿಂದೆಲ್ಲ ನೀವ್ ಕಾಂಬೂಕಾಗ ಮಕ್ಳೇ" ಎಂಬ ಮಾತಿಗೆ 'ಹೂಂ'ಗುಟ್ಟಿದ್ದೇನು? ಮುಸಿ ಮುಸಿ ನಕ್ಕಿದ್ದೇನು? ಮರೆತಾವೆ ಆ ಕ್ಷಣಗಳು? ಇಂಥ ದಿನಗಳು ಇನ್ನು ಬಂದಾವೇ?




ಈಗ ನಮ್ಮಜ್ಜಿ ಬದುಕಿಲ್ಲ. ಆದರೆ ನಮ್ಮೆಲ್ಲ ಹರೆಯದ ಭಾವನೆಗಳಿಗೂ ಕಿವಿಯಾಗಿ, ಕಣ್ಣಾಗಿ ಅಜ್ಜಿ ನಮ್ಮ ಭಾವಕೋಶದಲ್ಲಿ ಸದಾ ಉಳಿದಿದ್ದಾಳೆ; ಉಳಿಯುತ್ತಾಳೆ. ಅಜ್ಜಿಯ ಹಳ್ಳಿಯ ಇಬ್ಬನಿಯಲ್ಲಿ ತೊಯ್ದು ಹಸಿರಾದ ಧಾನ್ಯದ ಗದ್ದೆಗಳು ನನ್ನಲ್ಲಿ ನಿಸರ್ಗದ ಕುರಿತ ಒಲವನ್ನು ಹುಟ್ಟಿಸಲು ಕಾರಣವಾಗಿವೆ. ಈಗಲೂ ಅಮ್ಮನ

ಮನೆಗೆ ಹೋದಾಗ ಅಜ್ಜಿಯ ಮನೆಗೆ ಹೋಗುವ ಅವಕಾಶ ಸಿಕ್ಕಿದರೆ ಬಿಡುವುದಿಲ್ಲ. ಆದರೆ ಅಲ್ಲಿ ಹೋದಾಗ ಸಿಗುತ್ತಿದ್ದ ಖುಷಿಯ ಪ್ರಮಾಣ ಕಡಿಮೆಯಾಗಿದೆ.

ಈಗ ಅಂಥ ಜಾಗಗಳೂ ಉಳಿದಿಲ್ಲ; ಅಂಥ ಸಂಬಂಧಗಳೂ ಅಪೂರ್ವ. ಈಗಿನ ನ್ಯೂಡಲ್ಸ್ ಆಗಲಿ, ಪೀಡ್ಜಾ – ಬರ್ಗರ್ ಆಗಲಿ ಆಗ ಇರಲಿಲ್ಲ. ಅಸಂಖ್ಯಾತ ಆಟಿಕೆಗಳು, ಬಾರ್ಬಿ ಬೊಂಬೆಗಳೂ ಇರಲಿಲ್ಲ. ಇರುವ ಕೆಲವೇ ತಿಂಡಿಗಳು, ಕೆಲವೇ ಆಟಗಳು, ನಾವೇ ಸೃಷ್ಟಿಸಿಕೊಳ್ಳುತ್ತಿದ್ದ ಆಟಿಕೆಗಳು ನಮಗೆ ಕೊಡುತ್ತಿದ್ದ ತೃಪ್ತಿ, ಆನಂದ ಅಮಿತವಾದದ್ದು. ಮುಖ್ಯವಾಗಿ ಇಂದಿನ ಮಕ್ಕಳಿಗೆ ಸಂತೋಷ ಕೊಡುವ ಮಾಧ್ಯಮಗಳೇ ಬದಲಾಗಿವೆ. ಇನ್ನಷ್ಟು ಮತ್ತಷ್ಟು ಬೇಕೆನ್ನುವ ಮಹತ್ವಾಕಾಂಕ್ಷೆ, ಅತೃಪ್ತಿ ಆ ಜಾಗವನ್ನು ಆಕ್ರಮಿಸಿದೆ. ಹೀಗಾಗಿ ಮಕ್ಕಳು ಮಕ್ಕಳಾಗಿ ಉಳಿದಿಲ್ಲ ಅಥವಾ ನಾವು ಅವರನ್ನು ಹಾಗೆ ಉಳಿಯುವುದಕ್ಕೆ ಬಿಡುತ್ತಿಲ್ಲ. ತಮ್ಮ ಸುತ್ತಮುತ್ತಲ ಆಗುಹೋಗುಗಳನ್ನು 'ತೆರೆದ ಕಣ್ಣು'ಗಳಿಂದ ನೋಡುವ ಅವಕಾಶಗಳಿಂದ ಅವರು ವಂಚಿತರಾಗಿದ್ದಾರೆ. ಅವರಿಗೆ ಶಾಲೆ, ಟ್ಯೂಶನ್ನು, ಹೋಂವರ್ಕ್‌ಗಳಿಂದ ಪುರುಸೊತ್ತೇ ಇಲ್ಲ. ಟಿ.ವಿ., ಕಂಪ್ಯೂಟರ್, ಇಂಟರ್‌ನೆಟ್‌ಗಳಿಂದ ಬಿಡುವೇ ಇಲ್ಲ. ಇಂದಿನ ಸ್ಪರ್ಧಾತ್ಮಕ ಜಗತ್ತನ್ನು ಎದುರಿಸಲು ಅವರನ್ನು ಸಜ್ಜುಗೊಳಿಸಬೇಕಾಗಿದೆ; ಯಾವ ಬೆಲೆ ತೆತ್ತಾದರೂ !

ಡಾ॥ ಶೈಲಾ ಯು.
ಕನ್ನಡ ಉಪನ್ಯಾಸಕರು, ವಿಶ್ವವಿದ್ಯಾನಿಲಯ ಕಾಲೇಜು
ಹಂಪನಕಟ್ಟ ಮಂಗಳೂರು–೫೭೫ ೦೦೧

## ಸಾದರ ಸ್ವೀಕಾರ

**ನಿನ್ನೊಳಗ ನೀನಿಲ್ಲ** *ಸುರೇಶ ಹಡಪದ, ಬಳಗಾನೂರ*
***ಪುಟ : xviii + ೫೨ = ೭೨ ಬೆಲೆ : ರೂ. ೫೦***
**ಪವನ ಪ್ರಕಾಶನ,** ಮೇಲು ಶಂಕರಲಿಂಗೇಶ್ವರ ದೇವಸ್ಥಾನದ ಹತ್ತಿರ, ಬಳಗಾನೂರು ತಾಲೂಕು, ಸಿಂಧನೂರು ಜಿಲ್ಲೆ, ರಾಯಚೂರು

**ನಾಭಿಯ ಚಿಗುರು** (ಕವಿತೆಗಳು) *ಕಿರಸೂರ ಗಿರಿಯಪ್ಪ*
***ಪುಟ : ೬೮ + xii ಬೆಲೆ : ರೂ. ೬೦***
**ಸನ್ಮತಿ ಪ್ರಕಾಶನ,** ಕಿರಸೂರ ಪೋಸ್ಟ್, ಬಾಗಲಕೋಟೆ

**ಜಾನಪದ ವರ್ತಮಾನ** *ಅರುಣ್ ಜೋಳದಕೂಡ್ಲಿಗಿ*
***ಪುಟ : vix + ೨೦೮ ಬೆಲೆ : ರೂ. ೧೫೦***
**ದೇಸಿ ಪುಸ್ತಕ,** ನಂ. ೧೨೧, ೧೩ನೇ ಮುಖ್ಯರಸ್ತೆ, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು – ೪೦

**ಪಾರಂಪರಿಕ ಸಂವಹನ ಮತ್ತು ಸಮೂಹ ಮಾಧ್ಯಮ**
*ಡಾ॥ ಬಸಪ್ಪ ಬಂಗಾರಿ*
***ಪುಟ : xx + ೬೦ ಬೆಲೆ : ರೂ. ೯೯***
**ಬಂಗಾರಿ ಪಬ್ಲಿಕೇಷನ್ಸ್,** ಗೊಟಗೋಡಿ – ೫೮೧ ೧೯೭, ಶಿಗ್ಗಾವಿ ತಾಲ್ಲೂಕು, ಹಾವೇರಿ ಜಿಲ್ಲೆ

**ಪುಸ್ತಕ ಪ್ರದಕ್ಷಿಣೆ ಮನುಷ್ಯ ಎಷ್ಟು ಓದಬಲ್ಲ**
*ಚೈತ್ರಾ ಅರ್ಜುನಪುರಿ*
***ಪುಟ : ೧೮ + ೧೭೩ = ೧೯೧ ಬೆಲೆ : ರೂ. ೧೬೦***
**ಶ್ರೀ ಸಿದ್ಧಾರೂಢ ಪ್ರಕಾಶನ,** ಕೆಂಗಲ್ ಹನುಮಂತಯ್ಯ ಬಡಾವಣೆ, ಮದ್ದೂರು – ೫೭೧ ೪೨೮, ಮಂಡ್ಯ ಜಿಲ್ಲೆ

**ಗೂನು ಬೆನ್ನಿನ ಗದ್ದೆ** *ರಮೇಶ ಗಬ್ಬೂರು*
***ಪುಟ : xviii + ೧೦೬ ಬೆಲೆ : ರೂ. ೮೦***

**ಅಲೆಮಾರಿಯ ಹಾಡು** *ರಮೇಶ ಗಬ್ಬೂರ*
***ಪುಟ : xvi + ೬೦ ಬೆಲೆ : ರೂ. ೬೦***
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಪಿಟೀಲು ಪ್ರಕಾಶನ,** ಗಬ್ಬೂರು, ರಾಯಚೂರು ಜಿಲ್ಲೆ

**ಬೊಗಸೆ ತುಂಬಾ ಬೆಳಕು** (ಕವನ ಸಂಕಲನ)
*ರೇಣುಕಾ ಎ. ಕಠಾರಿ*
***ಪುಟ : xx + ೫೨ ಬೆಲೆ : ರೂ. ೭೦***

**ದೀಪ ಹಚ್ಚಿಟ್ಟ ರಾತ್ರಿ** (ಐವತ್ತು ಗಜಲ್‌ಗಳು) *ಪ್ರಕಾಶ ಬಿ.*
***ಪುಟ : xx + ೫೪ ಬೆಲೆ : ರೂ. ೮೦***
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಪ್ರತಿಭಾನ ಸಾಂಸ್ಕೃತಿಕ ಹಾಗೂ ಬೌದ್ಧಿಕ ವೇದಿಕೆ,** ನಂ. ೧೩೩, ಶಿವಾದ್ವೈತ, ಸೆಕ್ಟರ್ – ೨, ಶಿವಬಸವ ನಗರ, ಬೆಳಗಾವಿ – ೫೯೦ ೦೧೦

**ಅರಿವಿನ ಹರಿಗೋಲು** (ಕವನ ಸಂಕಲನ)
*ಕೆ. ಬಿ. ವೀರಲಿಂಗನಗೌಡ್ರ*
***ಪುಟ : xvi + ೪೮ = ೬೪ ಬೆಲೆ : ರೂ. ೬೦***
**ನಿರಂತರ ಪ್ರಕಾಶನ,** ಲೋಯಲಾ ಕಾನ್ವೆಂಟ್ ಹಿಂಭಾಗ, ಗಾಂಧಿನಗರ, ೫ನೇ ಅಡ್ಡರಸ್ತೆ, ಬೆಟಗೇರಿ – ಗದಗ – ೫೮೨ ೧೦೨

**ಸಾಗವಾನಿ ಮರದ ಎಲೆಗಳು** *ಲಾಲಸಾಬ ಎಚ್. ನದಾಫ*
***ಪುಟ : viii + ೯೨ = ೧೦೦ ಬೆಲೆ : ರೂ. ೧೨೦***
**ಚಾಂದಬಿ ಪ್ರಕಾಶನ,** ಮನೆ ನಂ. ೩೨, ಸೆಕ್ಟರ್ ೨೯, ನವನಗರ, ಬಾಗಲಕೋಟ

**ಜೋಡಿ ಹಕ್ಕಿಗಳು** (ಕಥಾ ಸಂಕಲನ) *ಭಾರತೀ ಪುತ್ರ*
***ಪುಟ : ೪ + ೧೧೬ = ೧೨೦ ಬೆಲೆ : ರೂ. ೧೫೦***
**ಭಾರತೀಯ ಸಾಹಿತ್ಯ,** ಬಣಜಿಗರ ಬೀದಿ, ಹಳೇ ಅಂಚೆ ಕಛೇರಿ ರಸ್ತೆ, ನಾಗಮಂಗಲ – ೫೭೧ ೪೩೨

**ಗಾಂಧೀ ಗೋವಿನ ಕಥೆಯಿದು !**
*ಎಲ್. ನರಸಿಂಹಯ್ಯ ತೊಂಡೋಟಿ*
***ಪುಟ : xvi + ೧೦೨ ಬೆಲೆ : ರೂ. ೭೫***
**ಗೋಕುಲ ಪ್ರಕಾಶನ,** ವಿಜಯಗೋಕುಲ, ೪೦ ಅಡಿ ರಸ್ತೆ, ಸಪ್ತಗಿರಿ ಬಡಾವಣೆ (ಪಶ್ಚಿಮ), ತುಮಕೂರು – ೫೭೨ ೧೦೨

**ವಿಚಾರಪ್ರಭ** (ಜೀವನಾನುಭವದ ಸಾರಸಂಗ್ರಹ)
*ಉ.ಶಾ. ಬಸವಣ್ಣಪ್ಪ*
***ಪುಟ : xvi + ೬೪ ಬೆಲೆ : ರೂ. ೭೫***
**ಉಗ್ರಾಣದ ಶಾನುಭೋಗರ ಬಸವಣ್ಣಪ್ಪ ಮತ್ತು ಶರಣಪ್ಪ ಸಹೋದರರ ನೆನಪಿನ ಟ್ರಸ್ಟ್,** ಉತ್ತಂಗಿ/ಏಣಿಗಿ, ಬಸಾಪುರ, ರಿ. ನಂ. ೧/೨೦೧೫, ಹೂವಿನ ಹಡಗಲಿ, ಅಂಚೆ – ೫೮೩ ೨೧೯, ಬಳ್ಳಾರಿ ಜಿಲ್ಲೆ

**ನದಿಯ ಹಂಬಲ**(ಕವನ ಸಂಕಲನ)*ಡಾ॥ ಅಶೋಕ ನರೋಡೆ*
***ಪುಟ : xlvi + ೨೧೦ = ೨೫೬ ಬೆಲೆ : ರೂ. ೨೫೦***
**ಸಂಕ್ರಮಣ ಪ್ರಕಾಶನ,** ಬೆಂಗಳೂರು

**ಸಂಗ** *ಡಾ॥ ಬಿ. ಎಸ್. ಪ್ರಣತಾರ್ತಿಹರನ್*
***ಪುಟ : iv+xvi+೪೦೮ = ೪೨೮ ಬೆಲೆ : ರೂ. ೨೭೦***
**ಈಶ್ವರಿ ಪ್ರಕಾಶನ,** ನಂ. ೨೮೫/ಎಫ್ ೬, ಮೊದಲನೇ ಮಹಡಿ, ೫ನೇ ವೆಸ್ಟ್ ಕ್ರಾಸ್, ಉತ್ತರಾದಿಮಠದ ರಸ್ತೆ, ಮೈಸೂರು – ೫೭೦ ೦೦೪

**ಸಂಜೀವಪ್ಪ ಗಬ್ಬೂರ** (ರಂಗ ಸಂಪನ್ನರು ಮಾಲಿಕೆ)
*ರಮೇಶ ಗಬ್ಬೂರ*
***ಪುಟ : xiv + ೭೪ ಬೆಲೆ : ರೂ. ೬೦***
**ಸಿದ್ಧರಾಜು, ರಿಜಿಸ್ಟ್ರಾರ್, ಕರ್ನಾಟಕ ನಾಟಕ ಅಕಾಡೆಮಿ,** ಕನ್ನಡಭವನ, ಜೆ. ಸಿ. ರಸ್ತೆ, ಬೆಂಗಳೂರು – ೨

**ವೀಸಾದ ನಿರೀಕ್ಷೆಯಲ್ಲಿ ನೆನಪುಗಳು**
*ಡಾ॥ ಬಿ.ಆರ್.ಅಂಬೇಡ್ಕರ್, ಕನ್ನಡಕ್ಕೆ :ಸದಾಶಿವ ಮರ್ಜಿ*
***ಪುಟ : xx + ೯೨ = ೧೧೨ ಬೆಲೆ : ರೂ. ೯೦***
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಬಿಂಬ** (ಲೇಖನಗಳ ಸಂಗ್ರಹ)
*ಡಾ॥ ಬಿ. ಎಸ್. ಪ್ರಣತಾರ್ತಿಹರನ್*
***ಪುಟ : iv+xxiv+೩೮೦ = ೪೦೮ ಬೆಲೆ : ರೂ. ೨೫೦***
**ತಾರಾ ಪ್ರಿಂಟಿಂಗ್ ಪ್ರೆಸ್ ಅಂಡ್ ಪಬ್ಲಿಷಿಂಗ್ ಹೌಸ್,** ನಂ. ೨೮೫/ಎಫ್–೬, ೫ನೇ ವೆಸ್ಟ್ ಕ್ರಾಸ್, ಉತ್ತಾರಾದಿಮಠದ ರಸ್ತೆ, ಮೈಸೂರು – ೫೭೦ ೦೦೪

**ನಡೆದದ್ದೇ ದಾರಿ** (ಡಾ॥ ಬಸವರಾಜ ಸಬರದ ಸಾಹಿತ್ಯಸೂಚಿ)
*ಡಾ॥ ವಿಜಯಶ್ರೀ ಸಬರದ*
***ಪುಟ : vi+೪೮೮+೨೬ = ೫೨೦ ಬೆಲೆ : ರೂ. ೫೦೦***
**ಪಲ್ಲವಿ ಪ್ರಕಾಶನ,** ಕಲಬುರಗಿ – ೫೮೫ ೧೦೬

**ವಿಷಯ ವಚನಸಂಪುಟಗಳು – ಸಂಪುಟ–೯**
**ಮಾಯೆ, ರುದ್ರ, ವ್ರತ, ವಿರಕ್ತ**
*ಸಂ. : ಡಾ॥ ಸಂಗಮೇಶ ಸವದತ್ತಿಮಠ*
***ಪುಟ : xxxii + ೪೫೬ ಬೆಲೆ : ರೂ. ೩೦೦***

**ವಿಷಯ ವಚನಸಂಪುಟಗಳು – ಸಂಪುಟ–೧೦**
**ವೀರಶೈವ, ವೀರಮಾಹೇಶ್ವರ, ವೇದ, ಶರಣ**
*ಸಂ. : ಡಾ॥ ಸಂಗಮೇಶ ಸವದತ್ತಿಮಠ*
***ಪುಟ : xxxii+೬೫೬ = ೬೮೮ ಬೆಲೆ : ರೂ. ೩೦೦***

**ವಿಷಯ ವಚನಸಂಪುಟಗಳು – ಸಂಪುಟ–೧೧**
**ಶಿವ, ಶಿವಯೋಗ, ಶೀಲ, ಶೈವ**
*ಸಂ. : ಡಾ॥ ಸಂಗಮೇಶ ಸವದತ್ತಿಮಠ*
***ಪುಟ : xxxii + ೫೯೨ ಬೆಲೆ : ರೂ. ೩೦೦***

**ವಿಷಯ ವಚನಸಂಪುಟಗಳು – ಸಂಪುಟ–೧೨**
**ಷಟ್‌ಸ್ಥಲ, ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ** *ಸಂ. : ಡಾ॥ ಸಂಗಮೇಶ ಸವದತ್ತಿಮಠ*
***ಪುಟ : xxxii + ೭೬೨ ಬೆಲೆ : ರೂ. ೩೦೦***
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ – ೫೮೫ ೪೩೭, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

# ಅರ್ಜೆಂಟೀನಾ ನೆಲದಲ್ಲಿ ಚೆ ಹುಡುಕುತ್ತಾ...

**ಜೂ**ನ್ ೧೪ ಅರ್ಜೆಂಟೀನಾದ ಕ್ರಾಂತಿಕಾರಿ ಅರ್ನೆಸ್ಟೊ ಚೆ ಗೆವಾರ ಹುಟ್ಟಿದ ದಿನ. ವೈದ್ಯಕೀಯ ಕಲಿತು ಕ್ರಾಂತಿಕಾರಿಯಾದ, ಕಾವ್ಯಪ್ರೇಮಿಯಾಗಿದ್ದ ಚೆ ಬದಲಾವಣೆಗಾಗಿ ಪ್ರಾಣವನ್ನೂ ಲೆಕ್ಕಿಸದೆ ಹೋರಾಡಿದವ. ಅವನ ಬದ್ಧತೆ, ವಿಸ್ತೃತ ಓದು ಮತ್ತು ಸೈದ್ಧಾಂತಿಕ ಸ್ಪಷ್ಟತೆ ಕ್ರಾಂತಿಕಾರಿಗಳಲ್ಲೂ ಅಪರೂಪದ ಗುಣಗಳಾಗಿವೆ. 'ಜಗತ್ತಿನ ಯಾವುದೇ ಭಾಗದಲ್ಲಿರುವ ಶೋಷಿತನಿಗಾಗಿ ನಿನ್ನೆದೆ ಕಂಪಿಸುತ್ತಿದ್ದರೆ ನಾನು ನಿನ್ನ ಸಂಗಾತಿ' ಎಂದ ಚೆ ಗೆವಾರ ಸಮಾನತೆಗಾಗಿ ತುಡಿವ ಹೋರಾಟಗಾರರ ಕಣ್ಮಣಿ. ಕೇವಲ ೩೯ ವರ್ಷ ಬದುಕಿದ, ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಮೀರಿದ್ದ, ಆ ತರುಣನನ್ನು ಜಗತ್ತಿನ ಹಲವು ದೇಶಗಳು 'ಇವ ನಮ್ಮವ' ಅಂದುಕೊಂಡಿವೆ. ಭಾಷೆ, ದೇಶಗಳ ಗಡಿ ದಾಟಿ ಅವನು ಚಿರಂತನನಾಗಿದ್ದಾನೆ. ಅವ ಕ್ಯೂಬಾದಲ್ಲಿ ಮನೆ ಮಾತು. ಆ ದೇಶದ ಜನಪದ ಹೀರೋ. ನಾವೂ ಅಷ್ಟೇ ಚೆ ಗೆವಾರನನ್ನು ನಮ್ಮವನನ್ನಾಗಿಸಿಕೊಂಡುಬಿಟ್ಟಿದ್ದೇವೆ.

ಇಂಥ ಕ್ರಾಂತಿಕಾರಿಯ ನೆಲದಲ್ಲಿ ಇವತ್ತು ಅವನ, ಅವನು ಪ್ರತಿನಿಧಿಸುತ್ತಿದ್ದ ಕಮ್ಯುನಿಸಮ್ಮಿನ ಪ್ರಭಾವ ಎಂಥದು, ಅವರು ಅವನನ್ನೂ, ಅವನಂಥ ಇತರ ದೇಶದ ಕ್ರಾಂತಿಕಾರಿಗಳನ್ನೂ ಹೇಗೆ ಅರಗಿಸಿ ಕೊಂಡಿದ್ದಾರೆ ಎಂಬ ಕುತೂಹಲವಿತ್ತು. ಮೂರು ತಿಂಗಳ ಹಿಂದೆ ದಕ್ಷಿಣ ಅಮೆರಿಕಾಗೆ ಪ್ರವಾಸ ಹೋಗಿ ಬರಲು ಅದೂ ಒಂದು ಕಾರಣವಾಗಿತ್ತು. ಚೆ ಹುಟ್ಟಿದ ನೆಲ ನೋಡಬೇಕೆಂದು, ಅವನ ನೆಲದಲ್ಲಿ ಅವನ ಕಾಣಬೇಕೆಂದು ಹೋಗಿಬಂದದ್ದು ವಿಶಿಷ್ಟ ಅನುಭವ. ಭಾವೀ ಪ್ರವಾಸಿಗಳ ಅನುಕೂಲಕ್ಕಾಗಿ ಕೆಲವು ಮಾಹಿತಿಗಳನ್ನು ಇಲ್ಲಿ ಹಂಚಿಕೊಳ್ಳಲಾಗಿದೆ :

ಅರ್ಜೆಂಟೀನಾಗೆ ಹೋಗಬೇಕೆಂದಾಗ ಕೇಳಿಬಂದ ಮೊದಲ ಪ್ರಶ್ನೆ, 'ನಿಮ್ಮ ಬಳಿ ಉತ್ತರ ಅಮೆರಿಕದ ವೀಸಾ ಇದೆಯೆ ?' ಇಲ್ಲ, ನಮ್ಮ ಬಳಿ ಇರಲಿಲ್ಲ. 'ಉತ್ತರ ಅಮೆರಿಕದಲ್ಲಿ ಬಂಧುಗಳಿದ್ದರೆ ಅಲ್ಲಿಂದ ಹೋಗಬಹುದು. ಇಲ್ಲವಾದರೆ ಯಾರ್‍ಯಾರು ಹೋಗುತ್ತಿರುವಿರೋ ಅವರೆಲ್ಲ ಒಟ್ಟಿಗೆ ದೆಹಲಿಗೆ ಹೋಗಿ ವೈಯಕ್ತಿಕ ಸಂದರ್ಶನ ಎದುರಿಸಿ ವೀಸಾ ಪಡೆಯಬೇಕು' ಎಂಬ ಸೂಚನೆ ಟ್ರಾವೆಲ್ ಏಜೆಂಟ್ ಕಡೆಯಿಂದ ಬಂತು. ಯಾವ ಅಮೆರಿಕವನ್ನು ಚೆ ಎದುರುಹಾಕಿಕೊಂಡನೊ ಯಾವ ಅಮೆರಿಕದ ಹುನ್ನಾರದ ಫಲವಾಗಿ ಚೆ ಹತ್ಯೆಯಾಯಿತೊ, ಯಾವ ಅಮೆರಿಕ ಚೆ ನಂಬಿದ ಸಮಾಜವಾದವನ್ನು ಬುಡಮೇಲು ಮಾಡುವ ಜಾಗತೀಕರಣವನ್ನು ಪ್ರತಿಪಾದಿಸುತ್ತಿದೆಯೊ – ಅಂಥ ಅಮೆರಿಕದ ವೀಸಾ ಇದ್ದರೆ ಚೆ ದೇಶಕ್ಕೆ ವೀಸಾವೇ ಬೇಡ !

ಕಾಲಚಕ್ರ ಹೀಗೆ, ಇಷ್ಟು ಉಲ್ಟಾ ತಿರುಗಬಹುದೆ ?

ಜನವರಿ ಮೊದಲ ವಾರ. ಒಂದು ಬುಧವಾರ



ಬ್ಯೂನಸ್ ಐರಿಸ್ ನಗರವನ್ನು ಉಸಿರಲ್ಲಿ ತುಂಬಿಕೊಳ್ಳುತ್ತ ನಡೆಯುತ್ತಿರುವಾಗ ಒಂದು ಸೊವೆನಿರ್ ಶಾಪಿನ ಪೋಸ್ಟ್ ಕಾರ್ಡಿನಲ್ಲಿ ಚೆ ಗೆವಾರನ ಮುಖ ಕಾಣಿಸಿಯೇ ಬಿಟ್ಟಿತು. ಗೈಡ್‌ಗೆ ಅದನ್ನು ತೋರಿಸಿ ಚೆ ಗೆವಾರ ಎಂಬ ದೇಶಬಾಂಧವನ ಕುರಿತ ಅವಳ ಅಭಿಪ್ರಾಯ ಏನೆಂದು ಕೇಳಿದೆ. ಅವನ ಬಗೆಗೆ ತನಗೆ ಹೆಚ್ಚು ತಿಳಿದಿಲ್ಲ ಎಂದಳು. ಅವ 'ಮೋಟಾರ್ ಸೈಕಲ್ ಡೈರೀಸ್' ಎಂಬ ಪುಸ್ತಕ ಬರೆದಿರುವನೆಂದು, ಅದು ಸಿನಿಮಾ ಆಗಿದೆಯೆಂದು ಅವಳಿಗೆ ಗೊತ್ತಿರಲಿಲ್ಲ. ಚೆ ಎಂದರೆ ಒಂದು ಕಾಲದಲ್ಲಿ ತನ್ನ ದೇಶದಲ್ಲಿ ಬದುಕಿದ ಒಬ್ಬ, ಇವರು ಅವನ ಭಯಂಕರ ಫ್ಯಾನುಗಳು ಎನ್ನುವಂತೆ ಕೆಲ ವಿಷಯ ಹೇಳಿದಳು. ಚೆ ಮಗ ಕ್ಯಾಮಿಲೊ ಗೆವಾರಾ ಮತ್ತು ಕುಟುಂಬ ಈಗ ಕ್ಯೂಬಾದಲ್ಲಿದ್ದಾರೆ. ಕಾರ್ಡೋಬಾದ ಅಲ್ಟಾಗ್ರಾಸಿಯಾದ ಅವನ ಮನೆಯನ್ನು ಮ್ಯೂಸಿಯಂ ಆಗಿ ಪರಿವರ್ತಿಸಿದ್ದಾರೆ.

**ಡಾ|| ಎಚ್. ಎಸ್. ಅನುಪಮಾ**

ಮಧ್ಯಾಹ್ನ ಮೂರಕ್ಕೆ ನಮ್ಮ ದಾಖಲೆ ಪರಿಶೀಲಿಸಿದ ಅವರು ದೆಹಲಿಯಿಂದ ಫೋನ್ ಕರೆ ಮಾಡಿ ಸಂದರ್ಶನಕ್ಕೆ ಬನ್ನಿ ಎಂದರು. ವೀಸಾ ಉಚಿತ, ಆದರೆ ಸಂದರ್ಶನಕ್ಕೆ ಖುದ್ದು ಹೋಗಿಬರಲೇಬೇಕು. "ಯಾವತ್ತು ಬರುವುದು " ಎಂದು ಕೇಳಿದಾಗ "ನಾಳೆ ಅಥವಾ ನಾಳಿದ್ದು ಬನ್ನಿ" ಎಂಬ ಉತ್ತರ ಸಿಕ್ಕಿತು. ಅಯ್ಯೋ, ಅದಾಗಲೇ ಮಧ್ಯಾಹ್ನ ಮೂರು ಗಂಟೆ ಆಗಿದೆ. ಕರ್ನಾಟಕದ ಪಶ್ಚಿಮ ಕರಾವಳಿ ಹಳ್ಳಿಯಿಂದ ಇಬ್ಬರು, ಬೆಳಗಾವಿಯಿಂದ ಇಬ್ಬರು ಕೂಡಲೇ ಹೊರಟು ಮರುದಿನ ಬೆಳಿಗ್ಗೆ ೧೦.೩೦ರ ಒಳಗೆ ದೆಹಲಿ ತಲುಪುವುದು ಹೇಗೆ ? ನಮ್ಮ ಹಾಗೂ ಮಕ್ಕಳ ಪರೀಕ್ಷೆ ಷೆಡ್ಯೂಲು ಎಂಬಿತ್ಯಾದಿ ಅನಾನುಕೂಲಗಳ ಬಗ್ಗೆ ಹೇಳಿಕೊಂಡು, "ಅಪಾಯಿಂಟ್‌ಮೆಂಟ್ ನಾಳೆಗೆ ಫಿಕ್ಸ್ ಮಾಡಿಬಿಡಿ, ಬರುವುದು ಐದ್ಹತ್ತು ನಿಮಿಷ ಹಿಂದೆ ಮುಂದೆ ಆದರೂ ಖಂಡಿತಾ ಬರುತ್ತೇವೆ" ಎಂದೆವು. ಸಂದರ್ಶನದ ವೇಳೆ ೧೦.೩೦ರಿಂದ ೧೧.೩೦. ಒಂದು ನಿಮಿಷ ತಡವಾದರೂ ಸಂದರ್ಶನ ಮರುದಿನಕ್ಕೆ ಮುಂದೆ ಹೋಗುತ್ತದೆ. ಬೆಳಿಗ್ಗೆ ಸರಿಯಾಗಿ ೧೦.೩೦ಕ್ಕೆ ಅಲ್ಲಿ ಎಷ್ಟು ಜನ ಇರುತ್ತಾರೋ ಅಷ್ಟು ಜನರ ಸಂದರ್ಶನ ಮಾತ್ರ. ಅದೂ ಒಂದು ತಾಸು ಮಾತ್ರ ಎಂದರು. ಎಲ ಎಲಾ, ನಮ್ಮ ಅರಾಜಕ ಚೆ ಇಷ್ಟು ಶಿಸ್ತುಗಾರ ದೇಶದವನೆ !

ಏನು ಮಾಡುವುದು ? ಧಡಧಡ ಹೊರಟೆವು. ರಾತ್ರೋರಾತ್ರಿ ಪಯಣಿಸಿ, ಬೆಳ್ಳಂಬೆಳಗ್ಗೆ ಬೆಂಗಳೂರು ಮುಟ್ಟಿ, ಮುಖ ತೊಳೆಯದೆ ಏರ್‌ಪೋರ್ಟ್ ತಲುಪಿ, ಅಲ್ಲಿಂದ ನವದೆಹಲಿ ತಲುಪಿ, ವಿಮಾನ ನಿಲ್ದಾಣದಿಂದ ಓಡೋಡಿ ಹೋಗುವ ಹೊತ್ತಿಗೆ ಸಮಯ ೧೨.೩೦ ಆಗೇಬಿಟ್ಟಿತು ! ಅವತ್ತು ಗುರುವಾರ, ವೀಸಾ ಆಗದು. ಮರುದಿನ ಶುಕ್ರವಾರ ಬೆಳಿಗ್ಗೆ ೧೦.೩೦ರ ಒಳಗೆ ಹೋಗಿ, ಕಾದು ಪಡೆಯಲೇಬೇಕು. ಇಲ್ಲದಿದ್ದರೆ ಮತ್ತೆರಡು ದಿನ ಕಾಯಬೇಕು, ಏಕೆಂದರೆ ಅವರಿಗೆ ವಾರದಲ್ಲಿ ಐದೇ ದಿನ ಇರುವುದು !

ಈ ಧಾವಂತದಲ್ಲೇ ಒಂದು ದಿನ ದೆಹಲಿಯಲ್ಲಿ ತಂಗಬೇಕಾದ ಅನಿವಾರ್ಯತೆಯಿಂದಾಗಿ ಮತ್ತೊಮ್ಮೆ ಮಿನಾರು–ಕೋಟೆ–ಚೌಕ–ಭವನ–ಸ್ಮಾರಕಗಳನ್ನೆಲ್ಲ ಸುತ್ತಿ ಬಂದದ್ದಾಯಿತು. ನಮ್ಮಲ್ಲೆ ನೋಡುವುದು ಎಷ್ಟೆಲ್ಲ ಬಾಕಿಯಿದೆ, ವೀಸಾಗೇ ಇಷ್ಟು ಕಷ್ಟಪಟ್ಟು ಅಷ್ಟು ದೂರ ಹೋಗಬೇಕೆ ಎಂಬ ಭಾವವೂ ಸುಳಿದುಹೋಯಿತು.

ಮರುದಿನ ಬೆಳಿಗ್ಗೆ ದೆಹಲಿಯ ಚಳಿ ಲೆಕ್ಕಿಸದೆ ಮುಂಚೆಯೇ ಹೋಗಿ ಕಾನ್ಸುಲೇಟ್ ಎದುರು ನಿಂತೆವು. ಸಂದರ್ಶನ ೧೦.೩೦ಕ್ಕೆ ಶುರು. ಮೊದಲೇ ಹೋಗಿದ್ದರೇನು, ಗೇಟಿನ ಹೊರಗೇ ಕಾಯಿರಿ ಎಂದರು. ಚಳಿಯ ಬೆಳಿಗ್ಗೆ ಗೋಡೆಯಾಚೆ ಕಾಯುತ್ತಾ ನಿಂತೆವು. ನಮ್ಮಂತೆಯೇ ಹಿಂದಿನ ದಿನ ಬಂದು ಹೋದ ಬೇರೆಯವರೂ ಇದ್ದರು. ಅಲ್ಲಿ ಗೇಟ್‌ಕೀಪರನಾಗಿದ್ದ ಭಾರತೀಯ ವ್ಯಕ್ತಿ ಅರ್ಜೆಂಟೀನಾದವರ ಶಿಸ್ತು, ಸಮಯಪಾಲನೆಗಳೆಲ್ಲ ತನ್ನ ಮೈಮೇಲೆ ಬಂದವನಂತೆ ಆಡುತ್ತಿದ್ದ. ಕ್ಷಣಕ್ಕೊಮ್ಮೆ ವಾಚು ನೋಡಿಕೊಳ್ಳುತ್ತ ಸರಿಯಾಗಿ ೧೦.೨೯ಕ್ಕೆ ಲಾಗ್ ಬುಕ್ ತೆರೆದ. ೧೦.೩೦ಕ್ಕೆ ಬರೆಯಲು ಹಚ್ಚಿದ. ೧೦.೩೧ಕ್ಕೆ ಒಳಬಿಟ್ಟ. ಅವರು ಎಷ್ಟು ಸ್ಟ್ರಿಕ್ಟ್ ಎಂಬ ಬಗೆಗೆ ಹಲವಾರು ಕತೆಗಳನ್ನು ಹೇಳಿದ. ಒಂದು ನಿಮಿಷ ಮೊದಲು ಅಥವಾ ತಡೆದುಬಿಟ್ಟರೂ ಅವನ ಕೆಲಸ ಹೋಗುವುದಂತೆ !

ಕೊನೆಗಂತೂ ನಮ್ಮ ಸರದಿ ಬಂತು. ನಂನಮ್ಮ ಫೈಲುಗಳನ್ನಾಗಲೇ ಇಟ್ಟುಕೊಂಡು ಕೂತಿರಬಹುದಾದ ರಾಯಭಾರಿ ಏನೇನು ಪ್ರಶ್ನೆ ಕೇಳುವರೋ ಎಂಬ ಆತಂಕದಲ್ಲಿ ವಿಧೇಯ ವಿದ್ಯಾರ್ಥಿಗಳಂತೆ ಒಳಹೋದೆವು.

ಅರೆ, ಈಕೆ ! ನಾವಲ್ಲಿ ಲಾಂಜಿನಲ್ಲಿ ಕುಳಿತು ಕಾಯುವಾಗ ಒಂದಡಿ ಎತ್ತರದ ಹೈಹೀಲ್ಸ್ ಚಪ್ಪಲಿ ಹಾಕಿದ ತರುಣಿ ಸ್ಕರ್ಟ್ ಕುಣಿಸುತ್ತ ಹತ್ತಾರು ಸಲ ಆಚೀಚೆ ಓಡಾಡಿದ್ದಳು. ಗಾಳಿ ಬಂದರೆ ಹಾರಿಹೋಗುವಷ್ಟು ಕೃಶವಾಗಿದ್ದ, ಹಾಲುಬಿಳಿ ಬಣ್ಣದ, ಪ್ಲಾಸ್ಟಿಕ್ ಹೂ ಮುಡಿದ ತರುಣಿ. ಅರ್ಜೆಂಟೀನಾ ರಾಯಭಾರ ಅಧಿಕಾರಿಯೇ ಈಕೆ ?!

ನಾವಿಬ್ಬರು ಆಕೆಯೆದುರು ಕುಳಿತೆವು. ನಮ್ಮ ಫೈಲ್ ನೋಡಿದಳು. ಅಬ್ಬಬ್ಬಾ ಎಂದರೂ ಹತ್ತಿಪ್ಪತ್ತು ಗ್ರಾಂ ಮಾಂಸವಿರದ ಮೊಗದಲ್ಲಿ ನಗು ತುಂಬಿ ಹರಿಯಿತು. ಕುತ್ತಿಗೆ ವಾರೆ ಮಾಡಿ, ಹುಬ್ಬು ಎತ್ತರಿಸಿ, ಕಣ್ಣರಳಿಸಿ, ಕೈಗಳೆರಡನ್ನೂ ಅಗಲಿಸಿ ಅವಳ ದೇಶಕ್ಕೆ ನಾವು ಹೋಗುತ್ತಿರುವುದಕ್ಕೆ ಸ್ವಾಗತಿಸುತ್ತ ವಂದನೆ, ಅಭಿನಂದನೆ ಎರಡನ್ನೂ ತಿಳಿಸಿದಳು.

'ಯಾಕೆ ಹೋಗುತ್ತಿದ್ದೀರಿ ದಕ್ಷಿಣ ಅಮೆರಿಕಾಗೆ ? ಅರ್ಜೆಂಟೀನಾಗೆ ? ಯಾರು ಸ್ಪಾನ್ಸರ್ ಮಾಡುತ್ತಿರುವವರು ?'

'ಸ್ಪಾನ್ಸರ್ ?! ದಕ್ಷಿಣ ಅಮೆರಿಕಕ್ಕೆ ಹೋಗುವ ಯೋಜನೆಗೆ ಎಷ್ಟು ದಿನದಿಂದ ಕಾಸು ಕೂಡಿಡುತ್ತಿದ್ದೇವೆ ಗೊತ್ತ ? ಡ್ರಗ್ ಕಂಪನಿಗಳು ಡಾಕ್ಟರುಗಳನ್ನು ಪುಕ್ಕಟೆ ಕಳಿಸುವವೆಂಬ ಆಮಿಷ ಒಡ್ಡುವುದು ನಿಜ. ಆದರೆ ನಾವವರನ್ನೆಲ್ಲ ಎಂದೋ ದೂರ ಓಡಿಸಿದ್ದೇವೆ..' ಎಂದು ಮನದಲ್ಲೇ ಅಂದುಕೊಂಡೆವು.

ಹೋಗಲು ನಮಗಿದ್ದ ಕಾರಣ ಹೇಳಿದೆವು. ಅವು ಮೂರೇ: ಚೆ, ನೆರೂಡ ಮತ್ತು ಮಚುಪಿಚು. ಚೆ ಹೆಸರು ಕೇಳಿ ಅವಳ ಪುಟ್ಟ ಕಣ್ಣು ಅರಳಿದರೂ ಅವನ ಬಗೆಗೆ ತಾನು ಹೆಚ್ಚು ತಿಳಿದಿಲ್ಲ ಎಂದಳು ! ಅವನ ಪುಸ್ತಕವನ್ನು ನಾನು ನನ್ನ ಭಾಷೆಗೆ ಅನುವಾದಿಸಿರುವೆ ಎಂದು ಮೋಟಾರ್ ಸೈಕಲ್ ಡೈರೀಸ್ ಪುಸ್ತಕ ತೋರಿಸಿದಾಗ ಅವಳಿಗೆ ಪರಮಾಶ್ಚರ್ಯವಾಯಿತು. ಆಪ್ತವಾಗಿ ಮಾತನಾಡುತ್ತ ತನ್ನ ದೇಶದಲ್ಲಿ ಇನ್ನೂ ಒಂದು ದಿನ ಹೆಚ್ಚು ಕಳೆಯಿರಿ; ಬ್ಯೂನಸ್ ಐರಿಸ್ ನಗರದ ಬೀದಿಗಳಲ್ಲಿ ಅಡ್ಡಾಡಿರಿ; ಅಲ್ಲಿನ ನೈಟ್‌ಲೈಫ್ ಅದ್ಭುತ, ಒಳ್ಳೆಯ ಚರ್ಮದ ಸಾಮಾನು ಸಿಗುತ್ತವೆ ಎಂದಳು. ಇಗ್ವಾಸು ಜಲಪಾತದಲ್ಲಿ ನಿಮ್ಮ ಮೂರು ದಿನ ಹೋಗುತ್ತದೆ. ಅಲ್ಲಿ ಅಷ್ಟೇಕೆ ಸಮಯ? ಅದಕ್ಕಿಂತ ಬ್ಯೂನಸ್ ಐರಿಸ್‌ನಲ್ಲಿಯೇ ಇನ್ನೊಂದು ದಿನ ಹೆಚ್ಚು ಕಳೆಯಲು ಏರ್ಪಾಟು ಮಾಡಿಕೊಳ್ಳಿ ಎಂದಳು. ತನ್ನ ದೇಶದಲ್ಲಿ ಅಲ್ಲಿಯ ಕರೆನ್ಸಿ ಮಾತ್ರ ನಡೆಯುವುದು, ಹಾಗಾಗಿ ಒಳ್ಳೆಯ ದರಕ್ಕೆ ಏರ್‌ಪೋರ್ಟಿನಲ್ಲೇ ಎಕ್ಸ್‌ಚೇಂಜ್ ಮಾಡಿಕೊಂಡುಬಿಡಿ ಎಂದಳು.

ನಾವು ಹ್ಞಾಂ ಹ್ಞೂಂ ಎನ್ನುವುದರಲ್ಲಿ ನಮ್ಮ ಸಂದರ್ಶನ ಮುಗಿಯಿತು. ಈ ಸಂದರ್ಶನ ಯಾಕೆ ಆನ್‌ಲೈನ್ ಮಾಡಬಾರದು ಎಂಬ ಮನದಲ್ಲಿ ಕೊರೆಯುತ್ತಿದ್ದ ಪ್ರಶ್ನೆಯನ್ನು ಕೇಳೇಬಿಟ್ಟೆವು. "ನಾವು ವೀಸಾ ಉಚಿತವಾಗಿ ನೀಡುತ್ತೇವೆ. ಆದರೆ ನಮ್ಮ ದೇಶಕ್ಕೆ ಹೋಗಿ ಬರುವವರೊಂದಿಗೆ ಮುಖತಃ ಪರಿಚಯ–ಬಾಂಧವ್ಯ ಹೊಂದಬಯಸುತ್ತೇವೆ. ಅದಕ್ಕೇ ಸಂದರ್ಶನ. ಈಗ ನೋಡಿ : ನೌ ಐ ನೋ ಎ ವಂಡರ್‌ಫುಲ್ ಫ್ಯಾಮಿಲಿ ಇನ್ ಇಂಡಿಯಾ. ಒಳ್ಳೆಯದಲ್ಲವೆ ?" ಎಂದು ಹುಬ್ಬು ಹಾರಿಸಿದಳು.

ನಂತರ ಮಕ್ಕಳ ಸಂದರ್ಶನ ಪ್ರತ್ಯೇಕವಾಗಿತ್ತು. ಅವರಿಗೂ ಅದೇ ಸಲಹೆ. ಅವರು ವೈದ್ಯ ವಿದ್ಯಾರ್ಥಿಗಳೆಂದು ತಿಳಿದು ಮತ್ತಷ್ಟು ಆಸಕ್ತಳಾಗಿ ಎಲ್ಲೆಲ್ಲಿ ಏನೇನು ನೋಡಬೇಕು, ಯಾವ ವಸ್ತು ಎಲ್ಲಿ



ಖರೀದಿಸಬೇಕು ಎಂಬ ಯಾದಿಯನ್ನೇ ಬರೆದು ಕಳಿಸಿದಳು.

ಬೆಣ್ಣೆಯಿಂದ ಕೂದಲು ತೆಗೆದಿಟ್ಟಷ್ಟು ಸುಲಭವಾಗಿ ಉಚಿತ ವೀಸಾ ಸಿಕ್ಕಿತು. ಹತ್ತೇ ಹತ್ತು ನಿಮಿಷದ ಕೆಲಸ. ಇಷ್ಟಕ್ಕೆ ಮೂರು ದಿನಗಳ ತತ್‌ಕ್ಷಣ ರಜೆ, ಅವಸರದ ಏರ್ ಟಿಕೆಟ್, ಧಾವಂತ...

ವಿಚಿತ್ರ, ಆದರೆ ವಾಸ್ತವ. ಏಕೆಂದರೆ ಅದು ಅರ್ಜೆಂಟೀನಾ !

✶ ✶ ✶

ನನ್ನ ಮಟ್ಟಿಗೆ ಅರ್ಜೆಂಟೀನಾ ಎಂದರೆ ಚೆ ಹೊರತಾದ ಕಲ್ಪನೆ ಗರಿಗೆದರುವುದೇ ಇಲ್ಲ. ಅಲ್ಲಿ ಅವನ ನೆನಪು ಇವತ್ತು ಹೇಗಿದೆಯೋ ಎಂಬ ಕುತೂಹಲ ಬಹಳವಿತ್ತು. ಭಾರತದಲ್ಲಿ ಗಾಂಧಿ, ನೆಹರು, ಭಗತ್, ಅಂಬೇಡ್ಕರ್ ಇದ್ದಂತೆ ಅಲ್ಲಿಯೂ ಅವನ ಹೆಸರಿನ ಸರ್ಕಲ್ಲು, ಸ್ಕ್ವೇರು, ಅಂಗಡಿ, ಥಿಯೇಟರು, ಇನ್ನೂ ಏನೇನೋ ಇರಬಹುದು. ಎಲ್ಲರ ತೋಳು, ಟೀ ಶರ್ಟ್, ಚಹಾ ಕಪ್ಪಿನ ಮೇಲೆ ಚೆ ಇರಬಹುದು... ಎಂದೆಲ್ಲ ಊಹಿಸಿದ್ದೆ.

ಬ್ಯೂನಸ್ ಐರಿಸ್ ತಿರುಗಲು ಹೊರಟಾಗ ಸುಂದರ ಕಟ್ಟಡಗಳು, ಸ್ಕ್ವೇರ್‌ಗಳು, ಮೆಮೊರಿಯಲ್‌ಗಳು ಹಾದು ಹೋದವು. ಅರ್ಜೆಂಟೀನಾವನ್ನು ಸ್ವಾತಂತ್ರ್ಯಗೊಳಿಸಿದ ಸ್ಯಾನ್ ಮಾರ್ಟಿನ್, ರಾಷ್ಟ್ರಾಧ್ಯಕ್ಷರು – ನಗರ ನಿರ್ಮಾತೃಗಳು – ಸೇನಾಧಿಕಾರಿಗಳು ಮತ್ತಿತರರ ನೆನಪಿನ ಚೌಕ, ಪ್ರತಿಮೆಗಳಿದ್ದವು. ಎಲ್ಲಾದರೂ ಕಂಡಾನೇ ಚೆ ಗೆವಾರ ಎನ್ನುವುದು ನನ್ನ ನಿರೀಕ್ಷೆ. ಆದರೆ ಒಂದಿಡೀ ದಿನ ಬ್ಯೂನಸ್ ಐರಿಸ್ ಸುತ್ತಿದರೂ ಅವನ ಸುಳಿವಿಲ್ಲ ! ಎಲ್ಲ ದೇಶಗಳೂ ತಮ್ಮ ಖ್ಯಾತನಾಮರನ್ನು ಒಂದೇರೀತಿ ನಡೆಸಿಕೊಳ್ಳಲಾರರು ಅಂದುಕೊಂಡರೂ ಈಗ ಅಮೆರಿಕದ ಹೆಗಲ ಮೇಲೆ ಕೈಯಿಕ್ಕಿಕೊಂಡಿರುವ ಅರ್ಜೆಂಟೀನಾ ತನ್ನ ಅಮೆರಿಕ ವಿರೋಧಿ ಮಗನನ್ನು ಮರೆಯಬಯಸುತ್ತಿದೆಯೆ ? ಗಡಿ ಮರೆತು ವಿಶ್ವವೇ ನನ್ನದೆಂದವನನ್ನು ಅವನದೇ ದೇಶ ಮರೆತೇಬಿಟ್ಟಿತೆ ? ಎಂಬ ಅನುಮಾನ ಕಾಡಿತು.

ಇಡೀ ದಕ್ಷಿಣ ಅಮೆರಿಕದ ಇತಿಹಾಸ, ರಾಷ್ಟ್ರಗಳ ಉದಯ–ಸ್ವತಂತ್ರ ಮುಂತಾದ ವಿಷಯಗಳ ಬಗೆಗೆ ಉರು ಹೊಡೆದು ಬಂದದ್ದನ್ನು ಗೈಡ್ ಒಪ್ಪಿಸುತ್ತಿದ್ದಳು. ವಿಶ್ವದ ಅತಿದೊಡ್ಡ ಫುಟ್ಪಾತ್ ಮಾರ್ಕೆಟ್ ಎನಿಸಿಕೊಂಡಿರುವ ಫಾರಿಡಾ ಸ್ಟ್ರೀಟ್‌ನಲ್ಲಿ ಪಾದಗಳು ಬಿಸಿಯೇರುತ್ತಿದ್ದವು. ರಾಯಭಾರ ಕಚೇರಿಯ ಕೃಶಾಂಗಿಯ ಮಾತಿಗೆ ವಿರುದ್ಧವಾಗಿ ವ್ಯಾಪಾರಿಗಳೆಲ್ಲರೂ ಅಮೆರಿಕನ್ ಡಾಲರ್ ತೆಗೆದುಕೊಳ್ಳಲು ತುದಿಗಾಲಲ್ಲಿ ನಿಂತಿದ್ದರು. 'ಒಳ್ಳೆಯ ರೇಟು ಕೊಡುತ್ತೇವೆ, ಎಕ್ಸ್‌ಚೇಂಜ್ ಬೇಕಾ?' ಎಂದು ಹೆಜ್ಜೆಹೆಜ್ಜೆಗೂ ಏಜೆಂಟುಗಳು ದುಂಬಾಲು ಬಿದ್ದು ಹಿಂಬಾಲಿಸುತ್ತಿದ್ದರು. ಚರ್ಮದ ವಸ್ತುಗಳ ಬೃಹತ್ ಮಳಿಗೆಗಳ ಸಾಲೇ ಇದ್ದ ಒಂದು ಕೂಡುರಸ್ತೆಯಲ್ಲಿ ಕೇಸರಿ ವಸ್ತ್ರ ತೊಟ್ಟ ಒಂದಷ್ಟು ಜನ ಸಾಲಾಗಿ ಪೋಸ್ಟರ್ ಹಿಡಿದು ನಿಂತಿದ್ದರು. ಸ್ಪ್ಯಾನಿಶ್‌ನ ಆ ಪೋಸ್ಟರಿನಲ್ಲಿ ಪ್ರಾಣಿಹಿಂಸೆಯಿಂದ ತಯಾರಾಗುವ ಚರ್ಮದ ವಸ್ತುಗಳನ್ನು ಕೊಳ್ಳಬಾರದೆಂಬ ಮನವಿ ಇತ್ತು !

## ಏಕಾಂಗಿ

ಸಿಗುವ ಒಬ್ಬೊಬ್ಬರಲ್ಲೂ
ನಾವು ದೋಷ
ಹುಡುಕುತ್ತಾ
ದೂರ ಮಾಡಿದರೆ

ಉಳಿದು ಬಿಡುವೆವು
ನಾವು ಕೊನೆಗೆ
ಏಕಾಂಗಿಗಳಾಗಿ
ಯಾರ ಬಳಿಯೂ ಇರದೆ.

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೭೩



ಹೀಗೆ ಬ್ಯೂನಸ್ ಐರಿಸ್ ನಗರವನ್ನು ಉಸಿರಲ್ಲಿ ತುಂಬಿಕೊಳ್ಳುತ್ತ ನಡೆಯುತ್ತಿರುವಾಗ ಒಂದು ಸೊವೆನಿರ್ ಶಾಪಿನ ಪೋಸ್ಟ್ ಕಾರ್ಡಿನಲ್ಲಿ ಚೆ ಗೆವಾರನ ಮುಖ ಕಾಣಿಸಿಯೇ ಬಿಟ್ಟಿತು. ಗೈಡ್‌ಗೆ ಅದನ್ನು ತೋರಿಸಿ ಚೆ ಗೆವಾರ ಎಂಬ ದೇಶಬಾಂಧವನ ಕುರಿತ ಅವಳ ಅಭಿಪ್ರಾಯ ಏನೆಂದು ಕೇಳಿದೆ. ಅವನ ಬಗೆಗೆ ತನಗೆ ಹೆಚ್ಚು ತಿಳಿದಿಲ್ಲ ಎಂದಳು. ಅವ 'ಮೋಟಾರ್ ಸೈಕಲ್ ಡೈರೀಸ್' ಎಂಬ ಪುಸ್ತಕ ಬರೆದಿರುವನೆಂದು, ಅದು ಸಿನಿಮಾ ಆಗಿದೆಯೆಂದು ಅವಳಿಗೆ ಗೊತ್ತಿರಲಿಲ್ಲ. ಚೆ ಎಂದರೆ ಒಂದು ಕಾಲದಲ್ಲಿ ತನ್ನ ದೇಶದಲ್ಲಿ ಬದುಕಿದ ಒಬ್ಬ, ಇವರು ಅವನ ಭಯಂಕರ ಫ್ಯಾನುಗಳು ಎನ್ನುವಂತೆ ಕೆಲ ವಿಷಯ ಹೇಳಿದಳು. ಚೆ ಮಗ ಕ್ಯಾಮಿಲೊ ಗೆವಾರಾ ಮತ್ತು ಕುಟುಂಬ ಈಗ ಕ್ಯೂಬಾದಲ್ಲಿದ್ದಾರೆ. ಕಾರ್ಡೋಬಾದ ಅಲ್ಟಾಗ್ರಾಸಿಯಾದ ಅವನ ಮನೆಯನ್ನು ಮ್ಯೂಸಿಯಂ ಆಗಿ ಪರಿವರ್ತಿಸಿದ್ದಾರೆ. ಅಲ್ಲಿ ಅವನ ಬಾಲ್ಯ ಕಾಲದ ಪತ್ರಗಳು, ಫೋಟೋಗಳು, ವಸ್ತುಗಳಿವೆ ಎಂದು ಅಸ್ಪಷ್ಟವಾಗಿ ತಿಳಿಸಿದಳು. ಎಲ್ಲೊ ಕೆಲ ಪ್ರವಾಸಿಗಳಷ್ಟೇ ಕಾರ್ಡೋಬಾಗೆ ಹೋಗುತ್ತಾರೆಂದು ಹೇಳುತ್ತ, "ಐ ನೋ ಹಿ ವಾಸ್ ಎ ರೆವಲ್ಯೂಷನರಿ ಅಂಡ್ ಗ್ರೇಟ್, ಬಟ್ ದಟ್ಸ್ ಇಟ್. ಇಟ್ ವಾಸ್ ಅಟ್ ದಟ್ ಟೈಂ. ಇಟ್ ವಾಸ್ ಫಾರ್ ಹಿಸ್ ಟೈಂ. ಹಿ ಹ್ಯಾವ್ ನೋ ಮೋರ್ ಟು ಸೆ ಅಬೌಟ್ ಹಿಮ್ ನೌ" ಎಂದುಬಿಟ್ಟಳು.

ಅವಳೆಂದಂತೆ ಚೆ ಅಲ್ಲೀಗ ದೂರದ ನೆನಪು...

ಅವಳು ಹೀಗೆ ಹೇಳುತ್ತಿರುವಾಗಲೇ ಮದರ್ಸ್ ಸ್ಕ್ವೇರ್ – ಪ್ಲಾಜಾ ಡಿ ಮೇಯೊ ಬಂತು. ಅರ್ಜೆಂಟೀನಾದಲ್ಲಿ ಮಿಲಿಟರಿ ಆಡಳಿತವಿದ್ದಾಗ ಆಳುವವರಿಂದ ಅಪಹರಿಸಲ್ಪಟ್ಟು ಹತ್ಯೆಯಾದ, 'ನಾಪತ್ತೆ'ಯಾದ ೩೦ ಸಾವಿರ ತರುಣ–ತರುಣಿಯರ ಅಮ್ಮಂದಿರು ಪ್ರತಿ ಗುರುವಾರ ಅಲ್ಲಿ ಸೇರಿ ತಮ್ಮ ಮಕ್ಕಳಿಗೇನಾಯಿತೆಂದು ಪ್ರಶ್ನಿಸಿದ ಜಾಗ ಅದು. ಇವತ್ತಿಗೂ ಆ ಸ್ಥಳ ವಿಶ್ವದ ಎಲ್ಲ ಕಡೆ ನಡೆಯುವ ಮಾನವ ಹಕ್ಕು ದಮನವನ್ನು ವಿರೋಧಿಸುವ ಪ್ರತಿಭಟನಾ ಸ್ಥಳವಾಗಿದೆ. ಅಲ್ಲಿಳಿದ ಕೂಡಲೇ ಚೆ ಇರುವ ಒಂದು ದೊಡ್ಡ ಪೋಸ್ಟರ್ ಕಾಣಿಸಿತು. ಅದು ಟುಪಾಕ್ ಅಮಾರು ಸಂಘಟನೆಯ ಬ್ಯಾನರ್. ಅವರಲ್ಲಿ ಪ್ರತಿಭಟನೆ ನಡೆಸುತ್ತಿದ್ದರು. ಅಲ್ಲೇ ಆಚೆ ಕ್ಯಾಮರಾಮನ್ ಜೊತೆ ಒಂದಷ್ಟು ಜನ ಮಾತಾಡುತ್ತಿದ್ದರು. ಕರಪತ್ರ, ಬ್ಯಾನರುಗಳಿದ್ದವು. ಪ್ರತಿಭಟನಾನಿರತರ ಮುಖ್ಯ ಬೇಡಿಕೆ ತಮ್ಮ ಸಂಘಟನೆಯ ಮಹಿಳೆ ಮಿಲಾಗ್ರೊ ಸಾಲಾ ಅವರನ್ನು ಬಿಡುಗಡೆ ಮಾಡಬೇಕೆನ್ನುವುದು.

ಯಾರು ಮಿಲಾಗ್ರೊ ಸಾಲಾ ?

ಆಕೆ ಅರ್ಜೆಂಟೀನಾದ ಫೂಲನ್ ದೇವಿ. ಟುಪಾಕ್ ಅಮಾರು ಸಂಘಟನೆಯ ಮುಂದಾಳು. ಟುಪಾಕ್ ಅಮಾರು ಎನ್ನುವವ ಬಂಡುಕೋರ ಇಂಕಾ ನಾಯಕ. ಅವನು, ಚೆ ಗೆವಾರ ಹಾಗೂ ಅರ್ಜೆಂಟೀನಾ ರಾಜಕಾರಣಿ ಇವಾ ಪೆರೋನ್ ಟುಪಾಕ್ ಅಮಾರು ನೇಬರ್‌ಹುಡ್ ಆರ್ಗನೈಸೇಶನ್‌ನ ಆದರ್ಶಗಳು !

ಈ ಆದಿವಾಸಿ ಮಹಿಳೆ ಜೊಜೊಯ್ ಕಾರ್ಮಿಕ ಸಂಘದ ಒಡನಾಡಿ. ೫೧ ವರ್ಷ ವಯಸ್ಸಿನ ಈ ನಾಯಕಿಯ ಸಂಘಟನೆ ಒಂದು ಸರ್ಕಾರೇತರ ಸಂಸ್ಥೆ. ಅದು ವಾರ್ಷಿಕ ೨೦೦ ಮಿಲಿಯನ್ ಪೆಸೊ (೫೦ ಮಿಲಿಯನ್ ಅಮೆರಿಕನ್ ಡಾಲರ್) ಬಜೆಟು ನಿರ್ವಹಿಸುತ್ತದೆ. ೪೦ ವಾಹನಗಳನ್ನು ಹೊಂದಿದ್ದು ಪ್ರತಿ ತಿಂಗಳು ೧.೬ ಮಿಲಿಯನ್ ಅಮೆರಿಕನ್ ಡಾಲರ್ ಹಣವನ್ನು ಸರ್ಕಾರದಿಂದ ಬಡವರ ವಸತಿ ಯೋಜನೆಗೆಂದು ಪಡೆಯುತ್ತದೆ. ಸಂಘಟನೆ ನಡೆಸುವ ಕಟ್ಟಡ ಸಾಮಗ್ರಿ, ಡೈ, ಉಪಕರಣಗಳ ತಯಾರಿಸುವ ಕಾರ್ಖಾನೆಯಿದ್ದು ಅದರಲ್ಲಿ ಐದು ಸಾವಿರ ಕಾರ್ಮಿಕರು ದುಡಿಯುತ್ತಾರೆ. ಸಂಘಟನೆಯ ಎರಡು ಶಾಲೆಗಳಿವೆ. ಎಂಆರ್‌ಐ ಸ್ಕ್ಯಾನರ್ ಮತ್ತಿತರ ಸೌಲಭ್ಯಗಳಿರುವ ಆಸ್ಪತ್ರೆಯನ್ನೂ ಅದು ನಡೆಸುತ್ತದೆ.

ಸಂಘಟನೆಯ ಜನಪ್ರಿಯತೆ ಸಹಿಸಲಾರದೆ ಮೂಲನಿವಾಸಿ ಸಮುದಾಯದ ತಮ್ಮ ನಾಯಕಿಯ ಮೇಲೆ ಭ್ರಷ್ಟಾಚಾರ ಆರೋಪ ಹೊರಿಸಿ ಬಂಧಿಸಿದ್ದಾರೆ ಎಂದು ಬಿಡುಗಡೆಗಾಗಿ ಒತ್ತಾಯಿಸುವವರು ಡ್ರಂ ಬಡಿದು ಕೂಗಿ ಹೇಳುತ್ತಿದ್ದರು.

ಪ್ರತಿಭಟನಾನಿರತರ ತಾರಕದ ಘೋಷಣೆಗಳಲ್ಲಿ, ಪ್ರತಿಭಟನೆಯ ತಾಣವೇ ಆಗಿಬಿಟ್ಟಿರುವ ಆ ಸರ್ಕಲ್‌ನಲ್ಲಿ ಚೆಯ ಚದುರಿದ ನೆರಳು ಕಾಣಿಸಿದಂತಾಯಿತು..

✶ ✶ ✶

ಅರ್ಜೆಂಟೀನಾದಲ್ಲಿ ಎಡಪಂಥೀಯ ಹಾಗೂ ಸಾಂಪ್ರದಾಯಿಕ ಶಕ್ತಿಗಳ ನಡುವೆ, ಟ್ರೇಡ್ ಯೂನಿಯನ್ ಹಾಗೂ ಎಡಪಂಥೀಯ ಗೆರಿಲ್ಲಾಗಳ ನಡುವೆ ಸಂಘರ್ಷದ ದೀರ್ಘ ಚರಿತ್ರೆಯೇ ಇದೆ. ಪೆರೋನ್ ಎಂಬ ಜನಪ್ರಿಯ ನಾಯಕನ ಆಳ್ವಿಕೆ, ಟ್ರೇಡ್ ಯೂನಿಯನ್–ಗೆರಿಲ್ಲಾ ಸಂಘಟನೆಗಳ ನಡುವಿನ ಕದನ, ಮಿಲಿಟರಿ ಆಡಳಿತ, ಪೆರೋನ್ ಹೆಂಡತಿಯ ಎಡಬಿಡಂಗಿ ಸಮಯಸಾಧಕ ರಾಜಕಾರಣ, ೧೯೭೩ರ ಆಂಟಿ ಕಮ್ಯುನಿಸ್ಟ್ ಅಲೈಯನ್ಸ್ – ಹೀಗೆ ಅಲ್ಲಿ ಎಡ–ಅತಿ ಎಡ–ಮಿಲಿಟರಿಗಳ ನಡುವಿನ ದೀರ್ಘ ಜಟಾಪಟಿ ನಡೆದಿದೆ. ಕೊನೆಗೆ ೨೦೧೫ರಲ್ಲಿ ಜನರು ಕ್ರಿಶ್ಚಿಯನ್ ಡೆಮಕ್ರ್ಯಾಟಿಕ್ ಪಕ್ಷದ ಮಾರಿಶಿಯೊ ಮಾಕ್ರಿ ಅವರನ್ನು ಅಧ್ಯಕ್ಷರಾಗಿ ಚುನಾಯಿಸಿದ್ದಾರೆ. ಇಲ್ಲಿ ಭರತನ ನೆಲ ಭಾರತದಲ್ಲಿ ಹಿಂದುತ್ವ ರಾಜಕಾರಣ ವಿಜೃಂಭಿಸುತ್ತಿರುವಂತೆ ಅಲ್ಲಿ ಚೆ ಗೆವಾರನ ದೇಶದಲ್ಲಿ ಕ್ರಿಶ್ಚಿಯನ್ ಡೆಮಕ್ರ್ಯಾಟಿಕ್ ಪಕ್ಷದ ಆಳ್ವಿಕೆ ಬಂದಿದೆ. ಕ್ಯಾಥೊಲಿಕ್ ಚರ್ಚಿನ ಪರಮೋಚ್ಚ ಧರ್ಮಗುರು ಪೋಪ್ ಫ್ರಾನ್ಸಿಸ್ ಬ್ಯೂನಸ್ ಐರಿಸ್‌ನವರೇ. ಒಂದು ಶತಮಾನ ಎಡಪಂಥೀಯ ಚಳುವಳಿ, ದಂಗೆ, ಯುದ್ಧ ನಡೆದ ದೇಶವಿಂದು ಬಲಪಂಥೀಯ ಆಳ್ವಿಕೆಗೊಳಪಟ್ಟಿದೆ. ೧೯೧೬ರ ನಂತರ ಆಯ್ಕೆಯಾದ ಮೊದಲ ಎಡ ಅಲ್ಲದ, ಪೆರೋನಿಸ್ಟ್ ಅಲ್ಲದ ಅಧ್ಯಕ್ಷರು ಇವರು.

ಅಂದಹಾಗೆ ನಮ್ಮ ಗೈಡ್ ಸೇರಿದಂತೆ ಭೇಟಿಯಾದ ಬಹುಪಾಲು ಸಾಮಾನ್ಯ ಜನರು ಇವತ್ತಿನ ಅಧ್ಯಕ್ಷರ ಪಕ್ಷದ ಬೆಂಬಲಿಗರೇ ಆಗಿದ್ದರು. ಅವರು ಬಂದಮೇಲೆ ನಿರುದ್ಯೋಗ ಪ್ರಮಾಣ ಇಳಿದಿದೆಯೆಂದೂ, 'ಅಭಿವೃದ್ಧಿ' ಆಗುತ್ತಿದೆಯೆಂದೂ, ಹೊಸ ಬೃಹತ್ ಉದ್ಯಮ–ಕಾರ್ಖಾನೆಗಳು ಶುರುವಾಗುತ್ತಿವೆಯೆಂದೂ ಹೇಳಿದರು.

ಭೂಗ್ರಹದ ಮೇಲ್ಮೈ ಲಕ್ಷಣವೇ ಹಾಗಿದೆ, ಋತುಗಳು ಬದಲಾಗುತ್ತಲೇ ಇರುತ್ತವೆ. ಆಯಾ ಋತುವಿಗೆ ತಕ್ಕ ಹಾಗೆ ಮನುಷ್ಯರೂ ಒಗ್ಗಿಕೊಳ್ಳತೊಡಗುತ್ತಾರೆ..

ಬ್ಯೂನಸ್ ಐರಿಸ್‌ನಲ್ಲೊಂದು ಆಧುನಿಕ ಇಂಜಿನಿಯರಿಂಗ್ ವಿಸ್ಮಯವಿದೆ. ಅದೊಂದು ವಿದ್ಯುತ್ ಉಪಕರಣ. ೨೦೦೨ರಲ್ಲಿ ನಿಲ್ಲಿಸಿದ ಲೋಹದ ಹೂವು. ಎಡ್ವರ್ಡೊ ಕೆಟಲಾನೊ ಎಂಬ ಅರ್ಜೆಂಟೀನಾದ ವಾಸ್ತುಶಿಲ್ಪಿ ವಿನ್ಯಾಸ ಮಾಡಿರುವ ಅಲ್ಯುಮಿನಿಯಂ ಮತ್ತು ಸ್ಟೇನ್‌ಲೆಸ್ ಸ್ಟೀಲ್‌ನಿಂದ ಮಾಡಲ್ಪಟ್ಟ ಆರು ದಳ ಇರುವ ೨೩ ಅಡಿ ಎತ್ತರದ ಹೂವು. ವಾರೆಯಾಗಿ ಕೂರಿಸಲಾಗಿದ್ದು ಆಗಸ ನೋಡುವಂತೆ ನಿಂತಿದೆ. ಬೆಳಿಗ್ಗೆ ಸರಿಯಾಗಿ ಎಂಟಕ್ಕೆ ಅರಳತೊಡಗುತ್ತದೆ. ಸೂರ್ಯ ಮುಳುಗುವ ಹೊತ್ತಿಗೆ ಮತ್ತೆ ಮುಚ್ಚಿಕೊಳ್ಳುತ್ತದೆ. ಬಲವಾದ ಗಾಳಿ ಬೀಸಿದರೂ ಮುದುಡುತ್ತದೆ. ರಾತ್ರಿ ಅದರ ಮಧ್ಯದಿಂದ ಕೆಂಪು ಪ್ರಭೆ ಹೊರಡುತ್ತದೆ. ರಾಷ್ಟ್ರೀಯ ದಿನಾಚರಣೆಗಳಾದ ಮೇ ೨೫, ಸೆಪ್ಟೆಂಬರ್ ೨೧, ಡಿಸೆಂಬರ್ ೨೪, ಡಿಸೆಂಬರ್ ೩೧ರ ರಾತ್ರಿ ಅದರ ದಳ ಮುಚ್ಚುವುದಿಲ್ಲ. ಅರ್ಜೆಂಟೀನಾದ ಲಾಕ್ ಹೀಡ್ ಮಾರ್ಟಿನ್ ಎಂಬ ವಿಮಾನ ತಯಾರಿಕಾ ಕಂಪನಿ ಅದನ್ನು ತಯಾರಿಸಿದ್ದು ೨೫ ವರ್ಷ ಗ್ಯಾರಂಟಿ ನೀಡಿದೆ.

ಇತ್ತೀಚಿನ ದಶಕಗಳಲ್ಲಿ ದಕ್ಷಿಣ ಅಮೆರಿಕಾದಲ್ಲಿ ತಲೆಯೆತ್ತುವ ಕಮ್ಯುನಿಸಂ ಮತ್ತು ಧಾರ್ಮಿಕ ಮೂಲಭೂತವಾದಿ ರಾಜಕಾರಣಗಳ ಜುಗಲಬಂದಿ ನೋಡಿದರೆ ಪ್ಯಾನ್ ಅಮೆರಿಕಾನಿಸಂ ಕಲ್ಪನೆ ಮತ್ತದನ್ನು ಹುಟ್ಟಿಸಿದ ಕಮ್ಯುನಿಸಂ ಸಿದ್ಧಾಂತವೂ ಸಹಾ ಈ ಲೋಹದ ಹೂವಿನ ಹಾಗೆಯೇ ಇರಬಹುದೆ ಎನಿಸುತ್ತದೆ.

ಅರಳುತ್ತದೆ, ಮುಚ್ಚುತ್ತದೆ. ಅರಳುತ್ತದೆ, ಮುಚ್ಚುತ್ತದೆ. ಆದರೆ ಮುಚ್ಚಿಕೊಂಡಿರುವಾಗಲೂ ಕೆಂಪು ಪ್ರಭೆಯಿಂದ ದೀಪ್ತವಾಗಿರುತ್ತದೆ.

**ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ
ಕವಲಕ್ಕಿ ಅಂಚೆ, ಹೊನ್ನಾವರ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

# ಚಿಕ್ಕಿಗಳು ಚಿತ್ತಾರ ಬಿಡಿಸ್ಯಾವ




ನಿಂಬಿಯಾ ಬನದಾಗ ರಂಭಿ ನಿಂತಕ್ಕಿ ಯಾರೆ
ಮುತ್ತು ಉದುರ್ಯಾವ ನೆಲಕೆಲ್ಲ ಎಲೆ ಗೆಳತಿ
ಹಾಡು ಹುಟ್ಟ್ಯಾವ ಮನದಾಗ

ಅತ್ತಿಯಾ ಮನಿಯಾಗ ತೊತ್ತಾಗಿ ದುಡಿಬ್ಯಾಡ
ಹೊತ್ತಾಗಿ ನೀಡಿದರ ಉಣಬ್ಯಾಡ ಎಲೆ ಗೆಳತಿ
ದಿಟ್ಟತನದಿಂದ ಬಾಳವ್ವ

ದೇವರ ಹೆಸರ್ಹೇಳಿ ಹರಕೆಯಾ ಕುರಿಮಾಡಿ
ಬೆತ್ತಲೆ ಮೆರವಣಿಗೆ ಮಾಡ್ಯಾರ ಎಲೆ ಗೆಳತಿ
ಕತ್ತಲ ಅಡವ್ಯಾಗ ನೂಕ್ಯಾರ

ಬಾಳಿಯಾ ಬನದಾಗ ಬಾಲಿ ನೀ ಹೊಂಟಾಗ
ಬಾ ಅಂತ ಹಿಡಿದು ಎಳದಾರ ಎಲೆ ಗೆಳತಿ
ಸರಪಳಿ ಕಟ್ಟಿ ಬಿಗಿದಾರ

ಕರಿಯ ಪಾಟಿಯ ಮ್ಯಾಲ ಬಿಳಿಯ ಅಕ್ಷರ ಬರೆದರ
ಬೆಳದಿಂಗಳು ಅಡಿರ್ಯಾದ ಆಗಸಕ ಎಲೆ ಗೆಳತಿ
ನಕ್ಕು ನಲಿದಾನ ಚಂದ್ರಾಮ



ಸರಪಳಿ ಹರಿದೊಗೆದು ವಿದ್ಯದ ಕೈ ಹಿಡಿದು
ದಿಟ್ಟತನದಿ ಬದುಕಿ ನಗಬೇಕ ಎಲೆ ಗೆಳತಿ
ಮುಡಿತುಂಬ ಮುತ್ತ ಮುಡಿಬೇಕು

ವಿದ್ಯೆಯೊಂದಿದ್ದರೆ ಆನೆ ಬಲವಿದ್ದಂತೆ
ಅಪ್ಪ ಗಂಡ ಮಗನ ಹಂಗಿಲ್ಲ ಎಲೆ ಗೆಳತಿ
ಸ್ವಾಭಿಮಾನದ ಬಾಳು ಬಾಳವ್ವ

ಮುಳ್ಳೆಲ್ಲ ಹೂವಾಗಿ ಹಾದ್ಯಾಗ ಹಾಸ್ಯಾವ
ಚಿಕ್ಕಿಗಳು ಚಿತ್ತಾರ ಬಿಡಿಸ್ಯಾವ ಎಲೆ ಗೆಳತಿ
ಹಸುರುಟ್ಟು ಮುಂದೆ ನಡೆಯವ್ವ

**ಡಾ|| ಕಾವ್ಯಶ್ರೀ ಜಿ.**
ನಂ. ೩೬೮೨/೫೭ ಎ, ೧ನೇ ಮುಖ್ಯರಸ್ತೆ, ೭ನೇ ಅಡ್ಡರಸ್ತೆ
ವಾಣಿ ವಿಲಾಸ ರೈಸ್ ಮಿಲ್ ಹಿಂಭಾಗ, ತರಳಬಾಳು
ಬಡಾವಣೆ, ದಾವಣಗೆರೆ – ೫೭೭ ೦೦೫

# ಆತ್ಮೀಯ ಕಾಮ್ರೇಡ್ ಕೆ. ಎಂ. ಶ್ರೀನಿವಾಸ್

ಬರುವ ಜುಲೈ ತಿಂಗಳಿಗೆ ಶ್ರೀನಿವಾಸ್ ಅವರಿಗೆ ೮೭ ವರ್ಷ ಪೂರೈಸುತ್ತದೆ. ಆದರೂ ಅವರ ಜೀವನೋತ್ಸಾಹ ಸ್ವಲ್ಪವೂ ಕುಂದಿಲ್ಲ. ಸಮಾಜದಲ್ಲಿ ಜರುಗುವ ಅನ್ಯಾಯಗಳ ಬಗ್ಗೆ ಆಕ್ರೋಶ ಕಡಿಮೆಯಾಗಿಲ್ಲ. ಅವರ ಗೌರವ ಗ್ರಂಥಕ್ಕೆ ಅವರು ಕೊಟ್ಟ ಸಂದರ್ಶನದಲ್ಲಿ ಅವರು ಹೇಳುವ ಮಾತುಗಳು ಇದಕ್ಕೆ ಸಾಕ್ಷಿಯಾಗಿವೆ : "ಪತ್ರಿಕೆಗಳನ್ನು ಓದುವಾಗ, ಟಿ. ವಿ. ಸುದ್ದಿಗಳನ್ನು ಕಂಡಾಗ ಈ ಭ್ರಷ್ಟರ ವಿರುದ್ಧ ಸಿಡಿದೆದ್ದು ಇವರನ್ನೆಲ್ಲಾ ತಲೆಯೊಡೆದು ಬರಬೇಕು ಅನ್ನಿಸುತ್ತೆ. ಆದರೆ ಶಕ್ತಿಯಿಲ್ಲ. ಏನ್ಮಾಡೋದು. ಸುಮ್ಮನಾಗುತ್ತೇನೆ." (ಅಭಿನಂದನಾ ಗ್ರಂಥ, ಪು. ೨೫) ಕಾಮ್ರೇಡ್ ಶ್ರೀನಿವಾಸ್ ಯುವಜನತೆಗೆ ಒಂದು ಆದರ್ಶದ, ಮಾದರಿಯ ವ್ಯಕ್ತಿ.

**ಹೆಚ್. ಎಸ್. ಈಶ್ವರ**

೧೯೫೪. ಆ ವರ್ಷ ನಾನು ಎಸ್.ಎಸ್.ಎಲ್.ಸಿ. ಪರೀಕ್ಷೆ ಪಾಸು ಮಾಡಿ ಮುಂದಿನ ಅಭ್ಯಾಸಕ್ಕೆ ಮೈಸೂರು ಹೋಗುವುದು ಎಂದು ತೀರ್ಮಾನವಾಗಿತ್ತು. ಆವರೆಗೆ ತೀರ್ಥಹಳ್ಳಿಯ ಗಡಿ ದಾಟಿರದ ನಾನು ಒಬ್ಬನೇ ಮೈಸೂರಿಗೆ ಪ್ರಯಾಣ ಮಾಡುವುದು ನನ್ನ ತಂದೆಯವರಿಗೆ ಆತಂಕದ ವಿಷಯವಾಗಿತ್ತು. ಆ ಕಾಲಕ್ಕೆ ನಮ್ಮ ಊರಿನಿಂದ ಮೈಸೂರಿನಲ್ಲಿ ಓದುವವರ ಸಂಖ್ಯೆ ಅಷ್ಟೇನೂ ಜಾಸ್ತಿ ಇರಲಿಲ್ಲ. ಕಾಳಮ್ಮನಗುಡಿ ಮುದ್ದೇಗೌಡರ ಮಗ ಶ್ರೀನಿವಾಸ್ ಮೈಸೂರಿನಲ್ಲಿ ಬಿ. ಎ. ಓದುತ್ತಿದ್ದಾರೆಂದು ತಿಳಿದ ನನ್ನ ತಂದೆ, ಅವರ ಜೊತೆಯಲ್ಲಿ ನನ್ನನ್ನು ಕಳಿಸಿಕೊಡುವ ನಿರ್ಧಾರ ಮಾಡಿದರು. ಹಾಗೆ ಕೆ. ಎಂ. ಶ್ರೀನಿವಾಸ್ ಜೊತೆ ನಾನು ಮೊದಲ ಬಾರಿಗೆ ನನ್ನ ಮೈಸೂರು ಪ್ರಯಾಣ ಮಾಡಿದೆ. ಅಂದಿನಿಂದ ಇಂದಿನವರೆಗೆ ಅಂದರೆ, ಸುಮಾರು ಅರವತ್ತಕ್ಕೂ ಹೆಚ್ಚಿನ ವರ್ಷಗಳ ಕಾಲ ಶ್ರೀನಿವಾಸ್ ನನಗೆ ಆತ್ಮೀಯರಾಗಿದ್ದಾರೆ, ವಿಶ್ವಾಸದಿಂದ ನೋಡಿಕೊಂಡಿದ್ದಾರೆ, ಮತ್ತು ನನ್ನ ಗೌರವಕ್ಕೆ ಭಾಜಕರಾಗಿದ್ದಾರೆ.

ಮೈಸೂರಿನ ಮಹಾರಾಜ ಕಾಲೇಜು ಹಾಸ್ಟೆಲಿನಲ್ಲಿ ಸುಮಾರು ಎರಡು ವರ್ಷಗಳ ಕಾಲ ನಾವಿಬ್ಬರೂ ಒಟ್ಟಾಗಿ ಕಳೆದೆವು. ನಾನು ಅಲ್ಲಿ ಹೋದಾಗ ನನ್ನ ಅಣ್ಣ ಹಾ. ಮಾ. ನಾಯಕರು ಅಲ್ಲಿಯೇ ಕನ್ನಡ ಆನರ್ಸ್ ಓದುತ್ತಿದ್ದರು. ನನ್ನ ಇನ್ನೊಬ್ಬ ಬಂಧು ಬಿ. ಎನ್. ಅಪ್ಪಣ್ಣ ಹೆಗಡೆಯವರು ಸಹ ಯಾವುದೋ ಪರೀಕ್ಷೆ ತೆಗೆದುಕೊಳ್ಳುವ ಸಲುವಾಗಿ ಅಲ್ಲಿಯೇ ಇದ್ದರು. ಅವರಿಬ್ಬರ ನಡುವೆ ಇಲ್ಲದ ಸಲುಗೆ ಶ್ರೀನಿವಾಸ್ ಜೊತೆ ಸಾಧ್ಯವಿದ್ದ ಕಾರಣ, ನನ್ನ ಹೆಚ್ಚಿನ ಸಮಯವನ್ನು ಅವರ ಜೊತೆ ಕಳೆಯುತ್ತಿದ್ದ ನೆನಪು. ಅವರು ಮಾರ್ಕೆಟ್ ಅಥವಾ ಪಾರ್ಕ್‌ಗೆ ಹೋಗುವಾಗ ನನ್ನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಅವರು ಸಾಕಷ್ಟು ವಿಚಾರಗಳನ್ನು ತಿಳಿದವರಾಗಿದ್ದರು. ಅವರ ಒಡನಾಟ ನನಗೆ ಖುಷಿ ಕೊಡುತ್ತಿತ್ತು. "ಶ್ರೀನಿವಾಸ್ ಜೊತೆ ಹೋದರೆ ಅವರು ನಿನ್ನನ್ನು ಕಮ್ಯುನಿಸ್ಟ್ ಮಾಡಿಬಿಡುತ್ತಾರೆ" ಎಂದು ಹಾಸ್ಟೆಲಿನ ಗೆಳೆಯರು ಗೇಲಿ ಮಾಡುತ್ತಿದ್ದರು. ಆ ಕುಚೋದ್ಯದ ಮಾತುಗಳಲ್ಲಿ ಸತ್ಯದ ತುಣುಕೊಂದು ಇದ್ದಿರಲೂ ಬಹುದು. ಮಾರ್ಕ್ಸ್ ಮತ್ತು ಕಮ್ಯುನಿಸಂ ಬಗೆಗೆ ನನ್ನಲ್ಲಿ ಸ್ವಲ್ಪಮಟ್ಟಿನ ಅರಿವು ಮೂಡಿಸಿದವರು ಶ್ರೀನಿವಾಸ್ ಎನ್ನುವುದು ನನ್ನ ಪ್ರಾಮಾಣಿಕ ನಂಬಿಕೆ. ಆ ನಂತರದಲ್ಲಿ ಮೈಸೂರಿನ ಪೀಪಲ್ಸ್

*(೪೨ನೇ ಪುಟಕ್ಕೆ )*

ಬುಕ್ ಹೌಸಿನ ಮಾಲೀಕರು ಸಣ್ಣಪುಟ್ಟ ಹೊತ್ತಿಗೆಗಳನ್ನು ಕೊಡುವ ಮೂಲಕ ಸ್ವಲ್ಪ ಹೆಚ್ಚಿನ ತಿಳುವಳಿಕೆಗೆ ಕಾರಣರಾದರು. ಶ್ರೀನಿವಾಸ್ ಮೈಸೂರು ಬಿಟ್ಟ ನಂತರದಲ್ಲಿ ನಮ್ಮಿಬ್ಬರ ಒಡನಾಟ ಅಪರೂಪವಾಯಿತಾದರೂ, ಅವರ ಬದುಕು ಮತ್ತು ಹೋರಾಟದ ಹಾದಿಗಳನ್ನು ನಾನು ಆಸಕ್ತಿಯಿಂದ ಅವಲೋಕಿಸಿಕೊಂಡು ಬಂದಿದ್ದೇನೆ. ಈಗ್ಗೆ ಕೆಲವು ವರ್ಷಗಳ ಹಿಂದೆ ಬೆಂಗಳೂರಿನ ಸಹ್ಯಾದ್ರಿ ಸಂಘದವರು ನಮ್ಮಿಬ್ಬರನ್ನೂ ಒಂದೇ ವೇದಿಕೆಯಲ್ಲಿ ಸನ್ಮಾನಿಸಿದರು. ಆ ಸಂದರ್ಭದಲ್ಲಿ ಹಾಜರಿದ್ದ ನನ್ನ ಸ್ನೇಹಿತರಿಗೆ 'ಶ್ರೀನಿವಾಸ್ ನನಗೆ ಗುರು ಸಮಾನರು' ಎಂದು ಹೇಳಿದ್ದನ್ನು ಕೇಳಿಸಿಕೊಂಡ ಅವರು, "ಅಂಥ ಮಾತುಗಳು ನನಗೆ ಇಷ್ಟವಾಗುವುದಿಲ್ಲ. ಅವೆಲ್ಲ ದಾಸ್ಯ ಮನೋಭಾವದ ಸಂಕೇತಗಳು" ಎಂದು ನನ್ನನ್ನು ಗದರಿಸಿದರು. ಇದು ಶ್ರೀನಿವಾಸ್ ನಂಬಿರುವ ಸಮಾನತೆ, ಆತ್ಮಾಭಿಮಾನ, ಪರಸ್ಪರ ಗೌರವ ಕೊಂಡುಕೊಡುವ ಉನ್ನತ ಮೌಲ್ಯಗಳ ಅಭಿವ್ಯಕ್ತಿಯ ಒಂದು ನಿದರ್ಶನ ಎಂದು ಇಲ್ಲಿ ಉಲ್ಲೇಖಿಸುತ್ತಿದ್ದೇನೆ.

ಶ್ರೀನಿವಾಸ್ ಹುಟ್ಟಿದ್ದು ೧೯೨೯ರ ಜುಲೈ ೨೭ರಂದು, ತೀರ್ಥಹಳ್ಳಿ ತಾಲ್ಲೂಕಿನ ಕಾಳಮ್ಮನಗುಡಿ ಎಂಬ ಹಳ್ಳಿಯಲ್ಲಿ. ಅವರದು ರೈತ ಕುಟುಂಬದ ಹಿನ್ನೆಲೆ. ಶ್ರೀನಿವಾಸ್ ಎಳೆಯ ಮಗುವಾಗಿರುವಾಗಲೇ ತಂದೆ ಮುದ್ದೇಗೌಡರು ತೀರಿಕೊಂಡರು. ನಂತರ ತಾಯಿ ರುಕ್ಮಿಣಿಯಮ್ಮನವರ ಪೋಷಣೆಯಲ್ಲಿ ಬೆಳೆದುಬಂದ ಶ್ರೀನಿವಾಸ್ ತಮ್ಮ ಪ್ರೌಢಶಾಲಾ ಶಿಕ್ಷಣವನ್ನು ತೀರ್ಥಹಳ್ಳಿಯಲ್ಲಿ, ಇಂಟರ್‌ಮೀಡಿಯಟ್ ಅಧ್ಯಯನವನ್ನು ಶಿವಮೊಗ್ಗದಲ್ಲಿ, ಪದವಿ ಶಿಕ್ಷಣವನ್ನು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಮತ್ತು ಕಾನೂನು ವ್ಯಾಸಂಗವನ್ನು ಬೆಂಗಳೂರಿನ ಸರ್ಕಾರಿ ಲಾ ಕಾಲೇಜಿನಲ್ಲಿ ಮುಗಿಸಿದರು. ಓದು ಮುಗಿದ ನಂತರ ಕೆಲವು ಕಾಲ ಶಿವಮೊಗ್ಗದಲ್ಲಿ ವಕೀಲಿ ವೃತ್ತಿ ಕೈಗೊಂಡ ಶ್ರೀನಿವಾಸ್, ಒಮ್ಮೆ ನ್ಯಾಯಾಧೀಶರೊಬ್ಬರ ನಿರ್ಧಾರವನ್ನು ಧಿಕ್ಕರಿಸಿ, ಕೇಸಿಗೆ ಸಂಬಂಧಪಟ್ಟ ಕಡತಗಳನ್ನು ಅವರ ಸಮ್ಮುಖಕ್ಕೆ ಎಸೆದು, ವಕೀಲಿ ವೃತ್ತಿಗೆ ವಿದಾಯ ಹೇಳಿ ತಮ್ಮ ಹಳ್ಳಿಯತ್ತ ಮುಖ ಮಾಡಿದರು. ಮುಂದಿನ ಸುಮಾರು ಐವತ್ತಕ್ಕೂ ಹೆಚ್ಚು ವರ್ಷಗಳ ಸುದೀರ್ಘ ಕಾಲ ತೀರ್ಥಹಳ್ಳಿ ತಾಲ್ಲೂಕನ್ನು ತಮ್ಮ ಕರ್ಮಭೂಮಿಯಾಗಿ ಮಾಡಿಕೊಂಡ ಅವರು ಹೋರಾಟ, ಚಳುವಳಿ, ಜನಸೇವೆಗಳಿಗೆ ಮೀಸಲಾಗಿಟ್ಟು, ಇದೀಗ ಶಿವಮೊಗ್ಗೆಯಲ್ಲಿ ವಿಶ್ರಾಂತ ಬದುಕನ್ನು ನಡೆಸುತ್ತಿದ್ದಾರೆ. ನಿಜವಾದ ಅರ್ಥದಲ್ಲಿ ಮೌಲ್ಯಾಧಾರಿತ ಬದುಕನ್ನು ಬಾಳುತ್ತಿರುವ ಶ್ರೀನಿವಾಸ್ ನಮ್ಮ ಯುವ ಪೀಳಿಗೆಗೆ ಒಂದು ಉತ್ತಮ ಮಾದರಿ; ಆ ಉದ್ದೇಶಕ್ಕಾಗಿ ಅವರನ್ನು ಪರಿಚಯಿಸುವುದು ಅನಿವಾರ್ಯ ಎನ್ನುವುದು ನನ್ನ ನಂಬಿಕೆ.

ಶ್ರೀನಿವಾಸ್ ಒಂದು ಅರ್ಥದಲ್ಲಿ ಹುಟ್ಟು ಹೋರಾಟಗಾರರು. ಅವರು ತಮ್ಮ ಬಾಲ್ಯದ ದಿನಗಳಲ್ಲಿಯೇ ಸ್ವಾತಂತ್ರ್ಯಚಳುವಳಿಯಲ್ಲಿ ಆಸಕ್ತಿಯ ತಳೆದಿದ್ದು, 'ಕ್ವಿಟ್ ಇಂಡಿಯ' ಚಳುವಳಿಯ ಸಮಯದಲ್ಲಿ ತಮ್ಮ ಶಾಲಾ ಸಹಪಾಟಿಗಳ ಜೊತೆಯಲ್ಲಿ




ಬಗನೆಮರ ಕಡಿಯುವುದು, ಖಾದಿ ಧರಿಸುವುದು ಮುಂತಾದ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದರು. ನಂತರ 'ಮೈಸೂರು ಚಲೋ' ಚಳುವಳಿಯಲ್ಲೂ ಭಾಗವಹಿಸಿದ್ದರು. ಅವರೇ ಹೇಳುವಂತೆ ಅವರದು "ಮೂಲತಃ ಕ್ರಾಂತಿ ಪ್ರಿಯ ಮನಸ್ಸು". ಸಮಾಜದ ಅಸಮಾನತೆಯ ಬಗ್ಗೆ ಅವರಿಗೆ ಯಾವತ್ತೂ ಅಸಮಾಧಾನವಿತ್ತು, ಬಡವರ ಸಂಕಷ್ಟಗಳಿಗೆ ಸದಾ ಅವರ ಮನಸ್ಸು ಮರುಗುತ್ತಿತ್ತು. ಈ ಮನೋಸ್ಥಿತಿಯ ಶ್ರೀನಿವಾಸ್ ಸಹಜವಾಗಿಯೇ ಮಾರ್ಕ್ಸ್‌ವಾದಕ್ಕೆ ಮನಸೋತರು. ಕಮ್ಯುನಿಸ್ಟ್ ಸಿದ್ಧಾಂತಗಳಿಗೆ ಒಲಿದರು. ಮುಂದೆ ಅವರು ಕಟ್ಟಾ ಕಮ್ಯೂನಿಸ್ಟರಾಗಿ ಬೆಳೆದರು; ಕಮ್ಯುನಿಸ್ಟ್ ಪಕ್ಷದ ನೇತಾರರಾಗಿ ಪಕ್ಷ ಬಲವರ್ಧನೆಗೆ ಶ್ರಮಿಸಿದರು. ತತ್ವ ಮತ್ತು ಪಕ್ಷಗಳಿಗೆ ಅವರ ಬದ್ಧತೆ ಎಷ್ಟರಮಟ್ಟಿನದು ಎನ್ನುವುದಕ್ಕೆ ಅವರ ಈ ಮಾತುಗಳೇ ಸಾಕ್ಷಿ: "ನಮಗೆ ನಾವೆಲ್ಲಿ ನಿಂತಿದೀವಿ ಅನ್ನೋದು ಮುಖ್ಯವಾಗಬೇಕು. ನಾನು ಇಷ್ಟೆಲ್ಲಾ ನಿಷ್ಠುರವಾಗಿ ಖಚಿತವಾಗಿ ಹೇಗೆ ಮಾತಾಡಬಲ್ಲೆ ಅಂತಂದ್ರೆ ನಾನು ಕಮ್ಯುನಿಸ್ಟ್ ಪಾರ್ಟಿಯಲ್ಲಿ ನಿಂತಿದೀನಿ ಅನ್ನೋದು. ...ನನ್ನ ಮಾತುಗಳನ್ನು ಆಲೋಚನೆಗಳನ್ನು ಕಮ್ಯುನಿಸ್ಟ್ ಪಾರ್ಟಿಯ ಆಚೆಯಿಟ್ಟು ನೋಡಲು ಸಾಧ್ಯವಿಲ್ಲ." (ಅಭಿನಂದನಾ ಗ್ರಂಥ, ಪು. ೨೭–೨೮)

ತೀರ್ಥಹಳ್ಳಿಯ ರಾಜಕೀಯ ಸಂದರ್ಭದಲ್ಲಿ ಸದಾ ಚಲಾವಣೆಯಲ್ಲಿರುವ ಎರಡು ಹೆಸರುಗಳು ಕಡಿದಾಳು ಮಂಜಪ್ಪ ಮತ್ತು ಶಾಂತವೇರಿ ಗೋಪಾಲ ಗೌಡ ಅವರದ್ದು. ವಾಸ್ತವದಲ್ಲಿ ಇನ್ನೂ ಹಲವರು ಆ ಕ್ಷೇತ್ರದ ಮುನ್ನಡೆಗಾಗಿ ದುಡಿದಿದ್ದಾರೆ, ಅಲ್ಲಿನ ಜನತೆಗೆ ಬಗೆಬಗೆಯ ಸೇವೆಗಳನ್ನು ಸಲ್ಲಿಸಿದ್ದಾರೆ. ಅಂಥವರಲ್ಲಿ ಕೆ. ಎಂ. ಶ್ರೀನಿವಾಸ್ ಪ್ರಮುಖರು. ಅವರ ಹೆಸರು ಪ್ರಸ್ತಾಪವಾಗದೆ ಹೋಗುವುದು ಚಾರಿತ್ರಿಕ ಅಪಚಾರ. ಶ್ರೀನಿವಾಸ್ ಸಾಮಾನ್ಯ ಜನರಿಗೆ ಸಮೀಪದಲ್ಲಿ ಬದುಕಿದವರು; ಅವರ ಸಮಸ್ಯೆಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸಿದವರು; ರೈತ ಮತ್ತು ಕಾರ್ಮಿಕ ವರ್ಗಗಳ ಹಕ್ಕುಗಳಿಗಾಗಿ ಹೋರಾಡಿದವರು; ಅನ್ಯಾಯಗಳ ವಿರುದ್ಧ ಸದಾ ಜಾಗರೂಕರಾಗಿದ್ದು, ಜನತೆಗೆ ನ್ಯಾಯ ಕೊಡಿಸುವಲ್ಲಿ ತೊಡಗಿಸಿಕೊಂಡವರು; ಸಮಾನತೆ ಮತ್ತು ಜಾತ್ಯತೀತತೆಯ ಪ್ರಬಲ ಪ್ರತಿಪಾದಕರು. ಅವರು ಇಷ್ಟಪಟ್ಟಿದ್ದರೆ ಐಷಾರಾಮಿ ಜೀವನ ನಡೆಸಬಹುದಾದ ಸಂಪತ್ತು ಅವರ ಪಾಲಿಗೆ ಇತ್ತು. ಆದರೆ ಅವರು ಆಯ್ದುಕೊಂಡದ್ದು ಹೋರಾಟದ ಬದುಕನ್ನು ಮತ್ತು ಆ ಬದುಕಿನ ಗುರಿ ಜನರ ಮತ್ತು ಸಮಾಜದ ಹಿತವನ್ನು ಕಾಯುವುದು.

ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ಕಮ್ಯುನಿಸ್ಟ್ ತತ್ವಗಳಿಂದ ಪ್ರಭಾವಿತರಾಗಿದ್ದ, ಶಿವಮೊಗ್ಗದಲ್ಲಿ ವಕೀಲರಾಗಿದ್ದ ಬಿ. ಎನ್. ಅಪ್ಪಣ್ಣ ಹೆಗಡೆ ಮತ್ತು ಕೆ. ಎಂ. ಶ್ರೀನಿವಾಸ್ ಅವರದ್ದು ಒಂದು ಅನ್ಯೋನ್ಯ ಜೋಡಿ. ಅವರಿಬ್ಬರೂ ಜೊತೆಯಾಗಿ ಕಮ್ಯುನಿಸ್ಟ್ ಪಕ್ಷದ ಸಂಘಟನೆಯನ್ನು ಗುರಿಯಾಗಿಟ್ಟುಕೊಂಡು ರೈತ ಮತ್ತು ಕಾರ್ಮಿಕ ಪರ ಹೋರಾಟಗಳನ್ನು ರೂಪಿಸಿ ಅವುಗಳನ್ನು ಯಶಸ್ವಿಯಾಗಿ ನೆರವೇರಿಸುವಲ್ಲಿ ಸಫಲರಾದರು. ಭೂ ಸುಧಾರಣಾ ಕಾನೂನು ಜಾರಿಗೊಳಿಸುವಲ್ಲಿ ರೈತರ ಪರ ನ್ಯಾಯ ಒದಗಿಸಿಕೊಡುವಲ್ಲಿ ಸಾಕಷ್ಟು ಶ್ರಮ ವಹಿಸಿದರು. ಗಿರಿಯಪ್ಪ ಗೌಡ ಎಂಬ ಗೇಣಿದಾರರ ಪ್ರಕರಣದಲ್ಲಿ ಅಪ್ಪಣ್ಣ ಹೆಗಡೆ ಮತ್ತು ಶ್ರೀನಿವಾಸ್ ತೋರಿದ ಅಪ್ರತಿಮ ರೈತಪರ ಕಾಳಜಿ ಮತ್ತು ಧೈರ್ಯವನ್ನು ಇಂದಿಗೂ ತೀರ್ಥಹಳ್ಳಿಯ ಜನ ನೆನೆಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಸಂಬಂಧಪಟ್ಟ ಭೂಮಾಲೀಕರನ್ನು ಹೊತ್ತು ತಂದು ತೀರ್ಥಹಳ್ಳಿಯ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿದ್ದು ಮತ್ತು ಭೂಮಾಲೀಕರ ಪರವಾಗಿದ್ದ ಪೊಲೀಸರನ್ನು ಧಿಕ್ಕರಿಸಿ ಅಲ್ಲಿಯ ಪೊಲೀಸ್ ಠಾಣೆಯ ಮೇಲೆ ಕಮ್ಯುನಿಸ್ಟ್ ಪಕ್ಷದ ಪತಾಕೆ ಹಾರಿಸಿದ್ದು ಈ ಇಬ್ಬರು ನಾಯಕರ ಬದ್ಧತೆ ಮತ್ತು ಕೆಚ್ಚಿಗೆ ಒಂದು ನಿದರ್ಶನ. ಶ್ರೀನಿವಾಸ್ ಒಂದು ಕಡೆ ಹೀಗೆ ಹೇಳಿಕೊಂಡಿದ್ದಾರೆ: "ನಮ್ಮ ಕಮ್ಯುನಿಸ್ಟ್ ಗುಂಪು ಎಂದ್ರೆ ಆಗ ಒಂದು ರೀತಿಯ ಎಚ್ಚರಿಕೆ ಇತ್ತು. ಅಂತಹದೊಂದು ವಾತಾವರಣ ನಿರ್ಮಾಣ ಮಾಡಿದ್ದೆವು." (ಅಭಿನಂದನಾ ಗ್ರಂಥ, ಪು. ೨೨).

೧೯೭೨ರ ವಿಧಾನಸಭೆಯ ಚುನಾವಣೆಯಲ್ಲಿ ಅಪ್ಪಣ್ಣ ಹೆಗಡೆಯವರ ಸೋಲು ಮತ್ತು ಕೆಲವು ವರ್ಷಗಳ ನಂತರದಲ್ಲಿ ಅವರ ಅಕಾಲಿಕ ಮರಣ ಈ ಜೋಡಿಯ ಹೋರಾಟಗಳಿಗೆ ಹಾಗೂ ಪಕ್ಷ ಸಂಘಟನೆಯ ಕಾರ್ಯಗಳ ಹಿನ್ನಡೆಗೆ ಕಾರಣವಾಯಿತು ಎನ್ನುವುದು ನಿಜ. ಹಾಗಾದರೂ ಶ್ರೀನಿವಾಸ್ ಅವರ ಮುಂದಾಳತ್ವದಲ್ಲಿ ಅವರು ಹಾಕಿಕೊಂಡ ಕಾರ್ಯಕ್ರಮಗಳು ಸಮರ್ಥವಾಗಿ ಮುಂದುವರಿದುಕೊಂಡು ಹೋದವು. ಬಹಳಷ್ಟು ಜನ ಗೇಣಿದಾರರಿಗೆ ಅವರ ಭೂಮಿಯನ್ನು ಉಳಿಸಿಕೊಡುವಲ್ಲಿ ಶ್ರೀನಿವಾಸ್ ಶ್ರಮಿಸಿದರು. ಪ್ರಮುಖವಾಗಿ ಶ್ರೀನಿವಾಸ್ ಅವರ ಹೆಸರು

# ಟಿ. ವಿ. ಲೋಕ

# ಜಾಹಿರಾತಿಗೆ ವೀಕ್ಷಣೆಯೇ ಆಧಾರ

**ಸಿ. ಆರ್. ಕೃಷ್ಣರಾವ್**

ಎಲ್ಲ ಭಾರತೀಯ ಭಾಷೆಗಳಲ್ಲೂ ಟೆಲಿವಿಷನ್ ಕಾರ್ಯಕ್ರಮಗಳು ಪ್ರಸಾರವಾಗುತ್ತವೆ. ಪ್ರತಿದಿನ ಇಪ್ಪತ್ತನಾಲ್ಕು ಗಂಟೆಗಳೂ ನಿರಂತರವಾಗಿ ಮನರಂಜನೆ ಒದಗಿಸುವ ಈ ಮಾಧ್ಯಮ ಅಪೂರ್ವವಾದದ್ದು. ಸರಕಾರಿ ಸ್ವಾಮ್ಯದಲ್ಲಿರುವ 'ದೂರದರ್ಶನ'ದಿಂದ ಪ್ರಾರಂಭವಾದ ಈ ಮಾಧ್ಯಮ ಇಂದು ಬೃಹದಾಕಾರವಾಗಿ ಬೆಳೆದಿದೆ. ಪ್ರತಿ ಭಾಷೆಯಲ್ಲೂ ಹತ್ತಾರು ಚಾನೆಲ್‌ಗಳಿವೆ. ಸುದ್ದಿ ವಾಹಿನಿಗಳು ಒಂದು ಬಗೆಯಾದರೆ ಇತರ ಕಾರ್ಯಕ್ರಮಗಳನ್ನು ಪ್ರಸಾರಮಾಡುವ ವಾಹಿನಿಗಳದ್ದು ಇನ್ನೊಂದು ಬಗೆ. ಸಿನಿಮಾಗಳನ್ನು ಪ್ರಸಾರ ಮಾಡುವ ಚಾನೆಲ್‌ಗಳ ಜೊತೆಗೆ ಸಿನಿಮಾ ಹಾಡುಗಳನ್ನೇ ಪ್ರಸಾರ ಮಾಡುವ ಚಾನೆಲ್‌ಗಳು, ವಿವಿಧ ಬಗೆಯ ಮನರಂಜನೆ ಒದಗಿಸುವ, ಧಾರಾವಾಹಿಗಳನ್ನು ಒಂದಾದ ಮೇಲೊಂದರಂತೆ ಪ್ರಸಾರ ಮಾಡುವ, ಚಾನೆಲ್‌ಗಳೇ ಅಲ್ಲದೆ ದೇವಾಲಯಗಳ ದರ್ಶನ, ಪ್ರವಾಸಿ ತಾಣಗಳ ಪರಿಚಯ, ಅಧ್ಯಾತ್ಮ, ಜ್ಯೋತಿಷ್ಯ , ಕ್ರೀಡೆ ಎಲ್ಲ ಪ್ರಸಾರವಾಗುತ್ತವೆ. ಪ್ರತಿಯೊಂದು ಚಾನೆಲ್ ಕೂಡ ತನ್ನ ವಿಶಿಷ್ಟ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದಕ್ಕೆ ಪ್ರತ್ಯೇಕ ವ್ಯವಸ್ಥೆಯನ್ನು ಹೊಂದಿರುತ್ತದೆ. ಖಾಸಗೀ ಚಾನೆಲ್‌ಗಳಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳಲ್ಲಿ ಬಹ್ವಂಶ ಸಿನಿಮಾ ಪ್ರಪಂಚದ ಮೇಲೆ ಆಧಾರಿತವಾಗಿರುತ್ತದೆ. ಎಲ್ಲವೂ ಭಾರತೀಯ ಸಂಸ್ಕೃತಿಯ ಪ್ರತೀಕ ಎಂದು ಚಾನೆಲ್‌ಗಳು ಭಾವಿಸಿರುತ್ತವೆ. ದೇಶಾದ್ಯಂತ ಪ್ರಸಾರವಾಗುವುದು ವೀಕ್ಷಕರನ್ನು ಹೊಂದಿರುವುದು ಹಿಂದಿ, ಇಂಗ್ಲಿಷ್ ಚಾನೆಲ್‌ಗಳು, ಅದರ ಜೊತೆಗೆ ಪ್ರಾದೇಶಿಕ ಭಾಷೆಗಳು ಆಯಾ ಪ್ರದೇಶಕ್ಕೆ ಸೀಮಿತ. ನಮ್ಮ ಈ ವಿಶ್ಲೇಷಣೆಗೆ ಕನ್ನಡ ಕಾರ್ಯಕ್ರಮಗಳನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ.

ಸರಕಾರಿ ಚಾನೆಲ್ ಆಗಿರುವ ದೂರದರ್ಶನ ವಾರ್ತಾ ಇಲಾಖೆಯ ವ್ಯಾಪ್ತಿಗೆ ಸೇರಿದ್ದು. ಪ್ರಸಾರ ಭಾರತಿ ಎಂಬ ಹೆಸರಿನ ಸಂಸ್ಥೆಯಡಿ ಬರುತ್ತವೆ ಈ ಚಾನೆಲ್‌ಗಳು. ಎಲ್ಲ ಭಾಷೆಗಳಲ್ಲಿಯೂ ಪ್ರಸಾರವಾಗುವುದರಿಂದ, ಕೇಬಲ್ ವ್ಯವಸ್ಥೆಯವರು ಕಡ್ಡಾಯವಾಗಿ ಪ್ರಚುರಪಡಿಸಬೇಕಾಗಿರುವುದರಿಂದ ಸಾಕಷ್ಟು ಜನ ವೀಕ್ಷಕರನ್ನು ತಲಪಬಲ್ಲದ್ದಾಗಿದೆ. ಜಾಹೀರಾತಿನ ಬೆಂಬಲದ ಮೇಲೆ ಅವಲಂಬಿತವಾಗಿಲ್ಲದಿರುವುದರಿಂದ ದೂರದರ್ಶನ ಸೆನ್ಸೇಷನಲಿಸಂನಿಂದ ಮುಕ್ತವಾಗಿದೆ. ಬಜೆಟ್‌ನಲ್ಲಿ ಹಣ ಒದಗಿಸಿದ್ದರೂ ಸ್ವಯಂಪೂರ್ಣತೆ ಹೊಂದಲು ಒತ್ತಡವಿದೆ. ಹಾಗಾಗಿ ಜಾಹೀರಾತು ಪಡೆಯಲು ಸಿನಿಮಾ ಸಂಬಂಧಿತ ಪ್ರಸಾರಗಳಿಗೆ ಅಧಿಕ ಪ್ರಾಶಸ್ತ್ಯವಿರುತ್ತದೆ. ಶಿಕ್ಷಣ, ಮಾಹಿತಿ, ಮನರಂಜನೆ ಗುರಿಯಾಗಿರುವುದರಿಂದ ದೂರದರ್ಶನ ಲಾಭ ಗಳಿಕೆಯ ಮೇಲೆ ದೃಷ್ಟಿ ಕೇಂದ್ರೀಕರಿಸುವಂತಿಲ್ಲ. ೧೯೮೧ರಲ್ಲಿ ದೆಹಲಿಯ ಕಾರ್ಯಕ್ರಮಗಳನ್ನು ಮರುಪ್ರಸಾರ ಮಾಡುವುದರೊಂದಿಗೆ ಪ್ರಾರಂಭವಾದ ದೂರದರ್ಶನ ಬೆಂಗಳೂರಿಗೆ ಮಾತ್ರ ಸೀಮಿತವಾಗಿತ್ತು. ೧೯೯೩ರಲ್ಲಿ ಬೆಂಗಳೂರು ದೂರದರ್ಶನ ಕನ್ನಡ ಕಾರ್ಯಕ್ರಮಗಳನ್ನು ಬಿತ್ತರಿಸತೊಡಗಿತು. ೨೦೦೦ದ ವರ್ಷದಿಂದ ೨೪ ಗಂಟೆಗಳ ಕನ್ನಡ ವಾಹಿನಿಯಾಗಿ 'ಚಂದನ' ಎಂದು ಮಾರ್ಪಾಟಾಯಿತು. ಸುಗಮ ಸಂಗೀತ, ಶಾಸ್ತ್ರೀಯ ಸಂಗೀತ, ನೃತ್ಯ ವೀಕ್ಷಣೆಗೆ ಇಂದು ಚಂದನ ವಾಹಿನಿಯನ್ನೇ ಅವಲಂಬಿಸಬೇಕಾಗಿದೆ. ಯಾವ ಖಾಸಗೀ ಚಾನೆಲ್‌ಗಳೂ ಈ ಬಗೆಯ ಕಾರ್ಯಕ್ರಮಗಳ ಗೋಜಿಗೆ ಹೋಗುವುದಿಲ್ಲ. ಹಲವು ಮೊದಲುಗಳಿಗೆ ಪ್ರೇರಕವಾದ ದೂರದರ್ಶನ ಧಾರಾವಾಹಿಗಳ ಸಂಸ್ಕೃತಿಯನ್ನು ರೂಢಿಗೆ ತಂದಿತು. ಈಗ ಖಾಸಗಿ ಚಾನೆಲ್‌ಗಳಲ್ಲಿ ಧಾರಾವಾಹಿಗಳದ್ದೇ ಮೇಲುಗೈ. ದೂರದರ್ಶನ ಪ್ರಸಾರ ಮಾಡಿದ ಜನನಿ, ಮನೆತನ, ಮಾಯಾಮೃಗ, ಸಾಧನೆ, ಭಾಗ್ಯಚಕ್ರ, ಅರ್ಧಸತ್ಯ ಮುಂತಾದ ಧಾರಾವಾಹಿಗಳು ಜನಮನದಲ್ಲಿ ಈಗಲೂ ಇದೆ. ಟಿ. ಎನ್. ಸೀತಾರಾಮ್, ಬಿ. ಸುರೇಶ, ನಾಗೇಂದ್ರ ಷಾ, ನಾಗಾಭರಣ, ಪಿ. ಶೇಷಾದ್ರಿ ಮುಂತಾದವರನ್ನು ಕಿರುತೆರೆಗೆ ಪರಿಚಯಿಸಿದ ಕೀರ್ತಿ ದೂರದರ್ಶನಕ್ಕೆ ಸಲ್ಲುತ್ತದೆ. ಸಾಕ್ಷ್ಯಚಿತ್ರಗಳನ್ನು, ಪ್ರಶಸ್ತಿ ವಿಜೇತ ಚಿತ್ರಗಳನ್ನು, ಶೈಕ್ಷಣಿಕ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದು ಚಂದನ ವಾಹಿನಿ ಕಾರ್ಯಕ್ರಮಗಳಲ್ಲಿ ಒಂದು. ಖಾಸಗಿ ಚಾನೆಲ್‌ಗಳಂತೆ ಮೂಢನಂಬಿಕೆ, ಜ್ಯೋತಿಷ್ಯ, ಸೆನ್ಸೇಷನಲಿಸಂಗೆ ನೇರವಾಗಿ ಮಾರುಹೋಗದೇ ಇದ್ದರೂ ಚಂದನ ವಾಹಿನಿ ಅಧ್ಯಾತ್ಮ ಪ್ರಸಾರಗಳಿಗೆ ಸಾಕಷ್ಟು ಒತ್ತು ಕೊಡುತ್ತದೆ. ದಿವ್ಯದರ್ಶನ, ವಚನಾಮೃತ ಮುಂತಾದವು ಅದಕ್ಕೆ ನಿದರ್ಶನ. ಪ್ರಾರಂಭದಲ್ಲಿ ಪ್ರಸಾರ ಮಾಡುತ್ತಿದ್ದ ಕಥಾಸಂಗಮ ಕಾರ್ಯಕ್ರಮ ಈಗ ಪ್ರಸಾರವಾಗುತ್ತಿಲ್ಲ. ಕನ್ನಡ ಸಾಹಿತ್ಯದ ಉತ್ತಮ ಕಥೆಗಳ ಚಿತ್ರೀಕರಣ ಮಾಡುತ್ತಿದ್ದುದು ಒಳ್ಳೆಯ ಕಾರ್ಯಕ್ರಮವಾಗಿತ್ತು. ಈಗ ಹಳೆಯವನ್ನೇ ಮರುಪ್ರಸಾರ ಮಾಡುತ್ತಿರುವುದು ಕಂಡುಬರುತ್ತಿದೆ.



ನಾಡಿನ ಸಾಂಸ್ಕೃತಿಕ, ಸಾಹಿತ್ಯಕ, ಶೈಕ್ಷಣಿಕ ಹಾಗೂ ಇತರ ಕ್ಷೇತ್ರಗಳಲ್ಲಿ ಮಹತ್ವಪೂರ್ಣ ಸಾಧನೆ ಮಾಡಿದವರನ್ನು ಪರಿಚಯಿಸುವ, ಮುಖಾಮುಖಿಯಾಗಿಸುವ 'ಬೆಳಗು' ಕಾರ್ಯಕ್ರಮ ಸ್ವಾಗತಾರ್ಹವಾದ್ದು. ಬೆಳಗಿನ ಹೊತ್ತು ಪ್ರಸಾರವಾಗುವ ಇದು ಅನೇಕ ಅಜ್ಞಾತ ಕಲಾವಿದರನ್ನು ಪರಿಚಯಿಸುತ್ತದೆ. ಹಾಗೆಯೇ ಪ್ರಾರಂಭದಿಂದಲೂ ಪ್ರಸಾರವಾಗುತ್ತಿರುವ, ರೈತರಿಗೆ ಉಪಯುಕ್ತವಾಗಿರುವ 'ಕೃಷಿದರ್ಶನ' ಕಾರ್ಯಕ್ರಮ ಮೆಚ್ಚುವಂಥದ್ದು. ದೂರದರ್ಶನದ ಜನಪ್ರಿಯ ಕಾರ್ಯಕ್ರಮಗಳು, ಸಾಕಷ್ಟು

ದಿನಗಳಿಂದ ಪ್ರಸಾರವಾಗುತ್ತಿರುವುವು. 'ಥಟ್ ಅಂಥ ಹೇಳಿ' ಎಂದು ನಾ. ಸೋಮೇಶ್ವರ ನಡೆಸುತ್ತಿರುವುದು, ವೈದ್ಯರೊಂದಿಗೆ ಫೋನಿನ್ ಕಾರ್ಯಕ್ರಮಗಳು, 'ಮಧುರ, ಮಧುರವೀ ಮಂಜುಳ ಗಾನ' ಎಂದು ರಾತ್ರೆ ಪ್ರಸಾರವಾಗುವ ಸಿನಿಮಾ ಹಾಡುಗಳು ಮುಂತಾದವು. ಒಟ್ಟಿನಲ್ಲಿ 'ದೂರದರ್ಶನ' ಖಾಸಗೀ ಚಾನೆಲ್‌ಗಳಿಗಿಂತ ಭಿನ್ನ. ಸರಕಾರಿ ಕ್ಷೇತ್ರದಲ್ಲಿರುವುದರಿಂದ ಅದು 'ಟಿಆರ್‌ಪಿ' ಮೇಲೆ ಅವಲಂಬಿತವಾಗಿಲ್ಲ. ಪೈಪೋಟಿಗೆ ಇಳಿಯ ಬೇಕಾಗಿಲ್ಲ. ಜಾಹೀರಾತುಗಳನ್ನು ನಿರ್ದಿಷ್ಟ ಅವಧಿಯ ಕಾರ್ಯಕ್ರಮಕ್ಕೆ ಇಂತಿಷ್ಟೇ ಇರಬೇಕೆಂಬ ನಿಯಮ ಇದೆ. ಅದನ್ನು ಮೀರುವಂತಿಲ್ಲ. ದೂರದರ್ಶನದ ಮೇಲ್ವಿಚಾರಣೆ ನೋಡಿಕೊಳ್ಳುವ ಪ್ರಸಾರ ಭಾರತಿ ಸ್ವಾಯತ್ತ ಸಂಸ್ಥೆ ಎಂದರೂ ಅದು ಇನ್ನೂ ಸರಕಾರದ ಸುಪರ್ದಿನಲ್ಲೇ ಇದೆ. ಹಾಗಾಗಿ ಅದು ಸರಕಾರಿ ಕಾರ್ಯಕ್ರಮಗಳನ್ನು ಕಡ್ಡಾಯವಾಗಿ ಪ್ರಸಾರ ಮಾಡುತ್ತದೆ. ಸರಕಾರದ ನೀತಿಗಳನ್ನೂ ಪ್ರತಿಪಾದಿಸುತ್ತದೆ.




ಖಾಸಗೀ ಚಾನೆಲ್‌ಗಳ ರೀತಿಯೇ ಬೇರೆ. ಅವು ಪೂರ್ಣವಾಗಿ ಜಾಹೀರಾತುಗಳಿಂದ ಬರುವ ಆದಾಯದ ಮೇಲೆ ಅವಲಂಬಿತ. ಹಾಗಾಗಿ ಹೆಚ್ಚು ಪ್ರೇಕ್ಷಕರನ್ನು ಸೆಳೆಯಲು ಬೇಕಾದಷ್ಟು ಸರ್ಕಸ್ ಮಾಡಬೇಕಾಗಿರುತ್ತದೆ. ಅವು ಸಂಪೂರ್ಣವಾಗಿ 'ಟಿಆರ್‌ಪಿ'ಯ ಆಧಾರದ ಮೇಲೆ ನಡೆಯುತ್ತವೆ. ಏನಿದು ಟಿಆರ್‌ಪಿ ? 'ಟಿಆರ್‌ಪಿ' ಟೆಲಿವಿಷನ್ ರೇಟಿಂಗ್ ಪಾಯಿಂಟ್ ಎಂಬುದರ ಹ್ರಸ್ವರೂಪ. ಇದು ಯಾವುದೇ ಒಂದು ನಿರ್ದಿಷ್ಟ ಕಾರ್ಯಕ್ರಮದ ಜನಪ್ರಿಯತೆಯನ್ನು ಅಳೆಯುವ ಮಾನದಂಡ. ವಿಶಿಷ್ಟವಾದ ಸಲಕರಣೆಯೊಂದನ್ನು ಒಂದು ಟಿವಿ ಸೆಟ್‌ಗೆ ಲಗತ್ತಿಸಿದರೆ ಅದು ದಿನದ ಅವಧಿಯಲ್ಲಿ ನೀವು ಯಾವ ಕಾರ್ಯಕ್ರಮ ವೀಕ್ಷಿಸಿದಿರಿ ಎನ್ನುವುದನ್ನು ದಾಖಲಿಸುತ್ತದೆ. ಇಂಥ ಉಪಕರಣವನ್ನು ಎಲ್ಲ ಟಿವಿ ಸೆಟ್‌ಗಳಿಗೂ ಅಳವಡಿಸುವುದು ಸಾಧ್ಯವಾಗದು. ಆದ್ದರಿಂದ ಪ್ರಾತಿನಿಧಿಕವಾಗಿ ನೂರು, ಇನ್ನೂರು, ಐನೂರು ಮನೆಗಳಿಗೆ ಅದನ್ನು ಅಳವಡಿಸುತ್ತಾರೆ. ಇದು ಒಂದು ಬಗೆಯ ಸ್ಯಾಂಪಲ್ ಸರ್ವೇ ಎನ್ನಬಹುದು. ಅದನ್ನು ಅಳವಡಿಸಿರುವ ಮನೆಯವರು ಯಾವ, ಯಾವ ಕಾರ್ಯಕ್ರಮಗಳನ್ನು ವೀಕ್ಷಿಸಿದರು ಎನ್ನುವ ಆಧಾರದ ಮೇಲೆ ಜನಪ್ರಿಯತೆಯನ್ನು ಅಳೆಯುತ್ತಾರೆ. ಇದರ ಆಧಾರದ ಮೇಲೆ ರಾಷ್ಟ್ರೀಯ, ಬಹುರಾಷ್ಟ್ರೀಯ ಕಂಪೆನಿಗಳು ಜಾಹೀರಾತು ನೀಡುತ್ತವೆ. ಕಾರ್ಯಕ್ರಮದ ಜನಪ್ರಿಯತೆಯ ಆಧಾರದ ಮೇಲೆ ಜಾಹೀರಾತಿನ ದರವೂ ನಿಷ್ಕರ್ಷೆ ಯಾಗುತ್ತದೆ. ಇದು ಖಂಡಿತವಾಗಿ ವೈಜ್ಞಾನಿಕವಾಗಿ ಸಮರ್ಥನೀಯವಲ್ಲದ ಒಂದು ವ್ಯವಸ್ಥೆ. ಹಾಗಾಗಿ ಟಿಆರ್‌ಪಿ ಗಳಿಸಲು ಖಾಸಗಿ ಚಾನೆಲ್‌ಗಳ ಮಧ್ಯೆ ಪೈಪೋಟಿ. ಕಾರ್ಯಕ್ರಮದ ಗುಣಮಟ್ಟ ಎಂಥದ್ದೇ ಆಗಿರಲಿ ಟಿಆರ್‌ಪಿ ಮುಖ್ಯವಾಗುತ್ತದೆ. ಮತ್ತೆ ಕಾರ್ಯಕ್ರಮಗಳ ನಡುವೆ ನೀಡುವ ಜಾಹೀರಾತುಗಳಿಗೆ ನಿರ್ಬಂಧವಿದ್ದರೂ ಅದನ್ನು ಪಾಲಿಸುವುದು ಕಡಿಮೆ. ವ್ಯಾಪಾರದ ದೃಷ್ಟಿಯಿಂದ ತಯಾರಾಗುವ ಕಾರ್ಯಕ್ರಮಗಳು ಎಂಥ ಗುಣಮಟ್ಟದ್ದು ಎಂಬುದನ್ನು ಊಹಿಸಿಕೊಳ್ಳಬಹುದು.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

---

*(೩೯ನೇ ಪುಟದಿಂದ )*

ಪ್ರಸ್ತಾಪವಾಗುವುದು ವರಾಹಿ ಹೋರಾಟದಲ್ಲಿ. ವರಾಹಿ ಅಣೆಕಟ್ಟು ನಿರ್ಮಾಣವಾದಾಗ ಅಲ್ಲಿನ ಸಂತ್ರಸ್ಥರಿಗೆ ಪರಿಹಾರ ಕೊಡಿಸಿಕೊಡಲು ಶ್ರೀನಿವಾಸ್ ಸುದೀರ್ಘ ಹೋರಾಟ ಮಾಡಿ, ಅವರಿಗೆ ಸೂಕ್ತ ಪರಿಹಾರ ದೊರಕಿಸಿಕೊಡುವಲ್ಲಿ ಸಫಲರಾದರು. ಆ ಭಾಗದ ಜನರ ಮನಸ್ಸಿನಲ್ಲಿ ಶ್ರೀನಿವಾಸ್ ಬಹಳ ಕಾಲ ಅಚ್ಚಳಿಯದೆ ಉಳಿಯುತ್ತಾರೆ.

ಶ್ರೀನಿವಾಸ್ ಒಬ್ಬ ಸಜ್ಜನರು. ಜಾತೀಯತೆ ಮತ್ತು ಭ್ರಷ್ಟಾಚಾರಗಳ ಬಗ್ಗೆ ಅವರಿಗಿದ್ದ ಜಿಗುಪ್ಸೆ, ಅವರ ಅತೀವವಾದ ಸಿಟ್ಟು, ಕೋಪಗಳನ್ನು ಅವರ ಪರಿಚಿತರೆಲ್ಲಾ ತಿಳಿದಿರುವ ಸಂಗತಿ. ಅವರ ಈ ಅಸಾಧಾರಣ ಸಿಟ್ಟು ಅವರ ಆತ್ಮಾಭಿಮಾನದ ಸಂಕೇತ; ಅನ್ಯಾಯಗಳನ್ನು ಸಹಿಸಲಾಗದ ಮನೋಸ್ಥಿತಿ. ಹಾಗಾದರೂ ಅವರಲ್ಲಿ ಪ್ರೀತಿ, ವಾತ್ಸಲ್ಯ, ಗೌರವಗಳಿಗೆ ಕೊರತೆಯಿಲ್ಲ. ತಮ್ಮ ಕಡುವೈರಿಗಳ ಸದ್ಗುಣಗಳನ್ನು ಮೆಚ್ಚಿಕೊಳ್ಳುವ ಉದಾರತೆ ಅವರಲ್ಲಿದೆ. ವರಾಹಿ ಸಂತ್ರಸ್ಥರಿಗೆ ಪರಿಹಾರ ಕೊಡುವ ವಿಚಾರದಲ್ಲಿ ಅಂದಿನ ಮುಖ್ಯಮಂತ್ರಿ ಗುಂಡೂರಾಯರ ನಿಲುವನ್ನು ಮೆಚ್ಚಿ ಶ್ರೀನಿವಾಸ್ ಹೀಗೆ ಹೇಳುತ್ತಾರೆ : "ನಿಜವಾಗಿಯೂ ಗುಂಡೂರಾವ್ ಈ ವಿಚಾರದಲ್ಲಿ ತುಂಬ ಮಾನವೀಯವಾಗಿ ನಡೆದುಕೊಂಡರು. ಇವತ್ತು ವರಾಹಿ ಹಿನ್ನೀರಿನ ಭಾಗದ ಜನ ಗುಂಡೂರಾವ್ ಕೊಡುಗೆಯನ್ನು ಮರೆಯಬಾರದು." (ಅಭಿನಂದನಾ ಗ್ರಂಥ, ಪು. ೨೨) ಇದು ಶ್ರೀನಿವಾಸರ ಕಲ್ಮಷರಹಿತ, ಧಾರಾಳ ಮನಸ್ಸಿಗೆ ಒಂದು ಉದಾಹರಣೆ.

ಶ್ರೀನಿವಾಸ್ ಅವರ ಮಗಳು ವೀಣಾ ಮತ್ತು ಅಳಿಯ ಮಂಜಪ್ಪನವರು ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಈಚೆಗೆ ಮಂಜಪ್ಪನವರು ಸಿಕ್ಕಿದಾಗ, "ಶ್ರೀನಿವಾಸ್ ಹೇಗಿದ್ದಾರೆ, ಏನು ಮಾಡುತ್ತಿದ್ದಾರೆ?" ಎಂದು ವಿಚಾರಿಸಿದೆ. "ಸದಾ ಓದಿನಲ್ಲಿ ಮಗ್ನರಾಗಿರುತ್ತಾರೆ" ಎಂದರು. ನಿಜ, ಶ್ರೀನಿವಾಸ್ ಮೊದಲಿಂದಲೂ ಪುಸ್ತಕ ಪ್ರೇಮಿ. ಅವರು ಕಾಲೇಜಿಗೆ ಬರುವ ಮೊದಲೇ ನೆಹರೂ ಅವರ 'ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ' ಓದಿ ಅದರಿಂದ ಪ್ರಭಾವಿತರಾಗಿದ್ದರು. ನಂತರದ ದಿನಗಳಲ್ಲಿ ಮಾರ್ಕ್ಸ್‌ವಾದಿ ಸಿದ್ಧಾಂತ ಮತ್ತು ಕಮ್ಯುನಿಸ್ಟ್ ಚಳುವಳಿಗಳ ಆಳವಾದ ಅಧ್ಯಯನ ಮಾಡಿದ್ದಾರೆ. ಆ ವಿಚಾರಗಳನ್ನು ಕುರಿತು ಅಧಿಕಾರಯುತವಾಗಿ ಮಾತನಾಡಬಲ್ಲ ಪಾಂಡಿತ್ಯ ಅವರಿಗಿದೆ. ಅವರ ಸಾಹಿತ್ಯದ ಓದು ಕೂಡ ವಿಸ್ತಾರವಾದದ್ದು. ಒಳ್ಳೆಯ ವಾಗ್ಮಿಯೂ ಹೌದು.

ಬರುವ ಜುಲೈ ತಿಂಗಳಿಗೆ ಶ್ರೀನಿವಾಸ್ ಅವರಿಗೆ ೮೭ ವರ್ಷ ಪೂರೈಸುತ್ತದೆ. ಆದರೂ ಅವರ ಜೀವನೋತ್ಸಾಹ ಸ್ವಲ್ಪವೂ ಕುಂದಿಲ್ಲ. ಸಮಾಜದಲ್ಲಿ ಜರುಗುವ ಅನ್ಯಾಯಗಳ ಬಗ್ಗೆ ಆಕ್ರೋಶ ಕಡಿಮೆಯಾಗಿಲ್ಲ. ಅವರ ಗೌರವ ಗ್ರಂಥಕ್ಕೆ ಅವರು ಕೊಟ್ಟ ಸಂದರ್ಶನದಲ್ಲಿ ಅವರು ಹೇಳುವ ಮಾತುಗಳು ಇದಕ್ಕೆ ಸಾಕ್ಷಿಯಾಗಿವೆ : "ಪತ್ರಿಕೆಗಳನ್ನು ಓದುವಾಗ, ಟಿ. ವಿ. ಸುದ್ದಿಗಳನ್ನು ಕಂಡಾಗ ಈ ಭ್ರಷ್ಟರ ವಿರುದ್ಧ ಸಿಡಿದೆದ್ದು ಇವರನ್ನೆಲ್ಲಾ ತಲೆಯೊಡೆದು ಬರಬೇಕು ಅನ್ನಿಸುತ್ತೆ. ಆದರೆ ಶಕ್ತಿಯಿಲ್ಲ. ಏನ್ಮಾಡೋದು. ಸುಮ್ಮನಾಗುತ್ತೇನೆ." (ಅಭಿನಂದನಾ ಗ್ರಂಥ, ಪು. ೨೫) ಕಾಮ್ರೇಡ್ ಶ್ರೀನಿವಾಸ್ ಯುವಜನತೆಗೆ ಒಂದು ಆದರ್ಶದ, ಮಾದರಿಯ ವ್ಯಕ್ತಿ.

– ಕಾಮ್ರೇಡ್ ಕೆ. ಎಂ. ಶ್ರೀನಿವಾಸ್ : ಅಭಿನಂದನಾ ಗ್ರಂಥ (ಸಂಪಾದಕರು : ಕೆ. ಆರ್. ದಯಾನಂದ ಮತ್ತು ಡಾ॥ ಬಿ. ಗಣಪತಿ ಉತ್ತುಂಗ). ಕೆ. ಎಂ. ಶ್ರೀನಿವಾಸ್ ಅಭಿನಂದನಾ ಸಮಿತಿ, ತೀರ್ಥಹಳ್ಳಿ – ೫೭೭ ೪೩೨, ಶಿವಮೊಗ್ಗ ಜಿಲ್ಲೆ.

**ಹೆಚ್. ಎಸ್. ಈಶ್ವರ**
ಹೆಚ್. ಐ. ಜಿ. ೧೧, ಕೆ. ಹೆಚ್. ಬಿ. ಕಾಲನಿ, ಮೊದಲ
ಹಂತ ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯

# ಸಂಘಪರಿವಾರದ “ರಾಷ್ಟ್ರೀಯತೆ”ಯ ಹಿಂದೆ ಮುಂದೆ

ಎಸ್. ಸುರೇಂದ್ರ

ಭಾರತದ ಬಲಪಂಥೀಯ ಕೋಮುವಾದಿ ಸಂಘಟನೆಗಳಿಗೆ ನಮ್ಮ ಇತಿಹಾಸದಲ್ಲಿ ಹೆಮ್ಮೆಪಡುಬಹುದಾದಂತಹ ಯಾವುದೇ ಹಿನ್ನೆಲೆಯೂ ಇಲ್ಲ, ಅಂತಹ ವ್ಯಕ್ತಿಗಳೂ ಇಲ್ಲ. ಅವರ ಪ್ರಕಾರ ರಾಷ್ಟ್ರೀಯತೆ ಎಂದರೆ, ಅದು ಅಲ್ಪಸಂಖ್ಯಾತ ವಿರೋಧಿ, ಕಮ್ಯುನಿಸ್ಟ್ ವಿರೋಧಿ ರಾಷ್ಟ್ರೀಯತಾ ಭಾವನೆ, ಅಷ್ಟೆ. ಆ ಕಾರಣಕ್ಕಾಗಿಯೇ ನಮ್ಮ ಆಧುನಿಕ ಇತಿಹಾಸದಲ್ಲಿ ಇಂತಹ ಸಂಘಟನೆಗಳು ರಾಷ್ಟ್ರವ್ಯಾಪಿಯಾದ, ಸಮಸ್ತ ಜನತೆಯನ್ನು ಒಳಗೊಂಡ, ಜನಪರ ಹೋರಾಟಗಳನ್ನು ಸಂಘಟಿಸಿದ ಯಾವುದೇ ಉದಾಹರಣೆಯೂ ಇಲ್ಲ. ಹೆಚ್ಚೆಂದರೆ ಅವರು ತಮ್ಮದೇ ಆದ ಅಸ್ಮಿತೆಯನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದ್ದು ಕುಖ್ಯಾತ, ಉಗ್ರವಾದಿ, ಭಯೋತ್ಪಾದಕ ಲಕ್ಷಣಗಳನ್ನು ಹೊಂದಿದ್ದ ತಥಾಕಥಿತ ಅಯೋಧ್ಯೆ ಚಳುವಳಿಯ ಮೂಲಕ (ಅದನ್ನೊಂದು ಚಳುವಳಿ ಎಂದು ಕರೆಯುವುದಾದರೆ !).




**ಕ**ಳೆದ ಮಾರ್ಚ್ ೨೨ರಂದು ನಮ್ಮ ಸಂವಿಧಾನದ ಶಿಲ್ಪಿ ಡಾ॥ ಅಂಬೇಡ್ಕರ್ ಅವರ ಸ್ಮರಣಾರ್ಥ ದೆಹಲಿಯ ವಿಜ್ಞಾನ ಭವನದಲ್ಲಿ ಜರುಗಿದ ಸಭೆಯೊಂದರಲ್ಲಿ ಪ್ರಧಾನಿ ಮೋದಿಯವರು ಮಾಡಿದ ಭಾಷಣದಲ್ಲಿ ಪ್ರಸ್ತಾಪಿಸಿದ ಎರಡು ಅಂಶಗಳು ಬಹಳ ಕುತೂಹಲಕರವಾಗಿವೆ. ಮೊದಲನೆಯದಾಗಿ, ಮೋದಿಯವರು ತಾನೊಬ್ಬ ಅಂಬೇಡ್ಕರ್ ಭಕ್ತ ಎಂದು ಘೋಷಿಸಿಕೊಂಡರು. ಎರಡನೆಯದಾಗಿ, ದಲಿತರು ಮತ್ತು ಬುಡಕಟ್ಟಿನ ಜನರಿಗಾಗಿ ಈಗಿರುವ ಮೀಸಲಾತಿ ನೀತಿಯನ್ನು ಸಡಿಲಗೊಳಿಸುವುದಿಲ್ಲ ಎಂದು ಒತ್ತಿ ಹೇಳಿದರು. ಮುಂದುವರಿದು, ಅಂಬೇಡ್ಕರ್ ಅವರು ಮತ್ತೊಮ್ಮೆ ಹುಟ್ಟಿಬಂದು ಮೀಸಲಾತಿ ಬೇಡ ಎಂದರೂ ತಾನು ಮೀಸಲಾತಿಯನ್ನು ರದ್ದುಗೊಳಿಸುವುದಿಲ್ಲ ಎಂದು ಘಂಟಾಘೋಷವಾಗಿ ಸಾರಿ ಹೇಳಿದರು. ಮೋದಿಯವರ ಪಕ್ಷಕ್ಕೆ ಈವರೆಗೆ ಇಲ್ಲದಿದ್ದ ಅಂಬೇಡ್ಕರ್ ಬಗೆಗಿನ ಅಭಿಮಾನ ಮತ್ತು ಹರಿಜನರು – ಬುಡಕಟ್ಟು ಜನರ ಮೀಸಲಾತಿ ಬಗೆಗಿನ ಕಾಳಜಿ ಈಗೇಕೆ ದಿಢೀರನೆ ಮುನ್ನೆಲೆಗೆ ಬರುತ್ತಿವೆ, ಅದರ ಹಿಂದಿರುವ ಉದ್ದೇಶವೇನು, ಎಂಬುದು ಎಲ್ಲರಿಗೂ ತಿಳಿದಿರುವ ವಿಷಯವೇ. ಆರೆಸ್ಸಸ್ ಸರಸಂಚಾಲಕ ಮೋಹನ್ ಭಾಗವತರ ಈ ಕುರಿತ ತದ್ವಿರುದ್ಧದ ಅಭಿಪ್ರಾಯ ಮೋದಿಯವರ ಅರಿವಿಗೆ ಬಂದಿದ್ದರೂ ಅವರು ತನ್ನ ಭಾಷಣದಲ್ಲಿ ಈ ಮಾತುಗಳನ್ನು ಹೇಳಿದಕ್ಕೆ ಕಾರಣವೇನು ಎಂಬುದು ಮತ್ತಷ್ಟು ಕುತೂಹಲಕಾರಿ ಅಂಶ ! ದಲಿತರು ಮತ್ತು ಬುಡಕಟ್ಟು ಜನರ ಸಂಖ್ಯೆ ಮತ್ತು ಅವರು ಚಲಾಯಿಸುವ ಮತಗಳು ದೇಶದ ಯಾವುದೇ ಚುನಾವಣೆಗಳಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತವೆ. ಹಾಗಾಗಿ ಮೋದಿಯವರ ಮನುವಾದಿ ಪಕ್ಷಕ್ಕೀಗ ಈ ಸಮುದಾಯಗಳ ಮತಗಳು ಬಹಳ “ಪವಿತ್ರ”ವೆನಿಸಿರುವುದು ಸಹಜವೆ.

೧೯೨೭ರಲ್ಲಿ ಜರುಗಿದ ಮಹಾಡ್ ಹೋರಾಟದ ಸಂದರ್ಭದಲ್ಲೇ ಹಿಂದುತ್ವದ ಬಗ್ಗೆ ಭ್ರಮನಿರಸನಗೊಂಡು ರೋಸಿಹೋಗಿದ್ದ ದಲಿತರು ತಮಗೆ ತಮ್ಮದೇ ಆದ ಅಸ್ಮಿತೆಯ ಅವಶ್ಯವಿದೆ ಎಂಬ ನಿಲುವು ತಳೆದು ಹಿಂದುತ್ವದ ವಿರುದ್ಧ, ಜಾತಿವ್ಯವಸ್ಥೆಯ ಕ್ರೌರ್ಯಗಳ ವಿರುದ್ಧ ಸಮರ ಸಾರಿದ್ದರು ಎಂಬ ಐತಿಹಾಸಿಕ ಅಂಶ ಮೋದಿಯವರಿಗೆ ತಿಳಿದಿಲ್ಲವೆಂದೇನಲ್ಲ. ಆದರೂ ಕಟ್ಟಾ ಹಿಂದುತ್ವವಾದಿ ಮೋದಿ ತಾನೊಬ್ಬ ಅಂಬೇಡ್ಕರ್ ಭಕ್ತನೆಂದು ಘೋಷಿಸಿಕೊಳ್ಳುವುದು ವಿಪರ್ಯಾಸವಲ್ಲದೆ ಮತ್ತೇನೂ ಅಲ್ಲ.

ಒಂದು ಕಾಲಕ್ಕೆ ಸಂಘಪರಿವಾರದವರು ನಮ್ಮ ತ್ರಿವರ್ಣ ಧ್ವಜವನ್ನು ರಾಷ್ಟ್ರಧ್ವಜವೆಂದು, ರವೀಂದ್ರನಾಥ ಟಾಗೂರರ ‘ಜನಗಣಮನ’ವನ್ನು ರಾಷ್ಟ್ರಗೀತೆಯೆಂದು ಮಾನ್ಯ ಮಾಡಲು ನಿರಾಕರಿಸಿದ ಜನ. ಸಂವಿಧಾನದ ರಚನೆಯ ಕ್ರಿಯೆಯಿಂದ ದೂರ ಉಳಿದಿದ್ದ ಈ ಜನ ಕನ್‌ಸ್ಟಿಟ್ಯುಯೆಂಟ್ ಅಸೆಂಬ್ಲಿಯಲ್ಲಿ ಯಾವತ್ತಿಗೂ ಪಾಲ್ಗೊಂಡಿರಲಿಲ್ಲ ಎಂಬುದನ್ನು ಮರೆಯುವ ಹಾಗಿಲ್ಲ. ಆದರೆ ಅವರ ಭಾವನೆಯನ್ನು ಪ್ರತಿನಿಧಿಸುತ್ತಿದ್ದ ಕೆ. ಎಂ. ಮುನ್ಶಿ ಮುಂತಾದವರಿದ್ದರು. ಅಂಬೇಡ್ಕರ್ ಅವರಿಗೆ ಮಾರ್ಕ್ಸ್‌ವಾದದ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ‘ಗಾಂಧಿವಾದ’ದ ಕುರಿತು ಚರ್ಚೆಯಾದಾಗಲೆಲ್ಲಾ ಅವರು ಪ್ರತಿಭಟಿಸುತ್ತಿದ್ದ ವಿಧಾನ ಮಾರ್ಕ್ಸ್‌ವಾದಿಯದೇ ಆಗಿತ್ತು. ‘ಭಾರತದ ಕಾರ್ಮಿಕ ಮತ್ತು ಯುದ್ಧ’ ಎಂಬ ಲೇಖನದಲ್ಲಿ ಅಂಬೇಡ್ಕರ್ ಎರಡನೇ ಜಾಗತಿಕ ಯುದ್ಧದ ಬಗ್ಗೆ ಪ್ರಸ್ತಾಪಿಸುತ್ತ, “ನಾಝಿವಾದದ ಹುಟ್ಟಡಗಿಸುವ ಸಲುವಾಗಿ ಕಾರ್ಮಿಕ ಸಮುದಾಯ ಸಜ್ಜಾಗಬೇಕಿದೆ. ಹಾಗಲ್ಲದೆ ನಾಝಿವಾದವೇನಾದರೂ ಗೆದ್ದದ್ದೇ ಆದರೆ, ನಾಝಿ ವ್ಯವಸ್ಥೆಯ ನಿರ್ಮಾಣದಲ್ಲಿ ಸ್ವಾತಂತ್ರ್ಯವೆಂಬುದು ಧೂಳೀಪಟವಾದೀತು. ಸಮಾನತೆ ಎಂಬುದು ನಾಮಾವಶೇಷವಾದೀತು. ಈ ಹೋರಾಟ ಯಶಸ್ವಿಯಾಗಬೇಕೆಂದಾದರೆ, ಅದು ಸ್ವಾತಂತ್ರ್ಯ ಮತ್ತು ನವ ಸಮಾಜದ ನಿರ್ಮಾಣವೆಂದು ಅರ್ಥ. ಆದ್ದರಿಂದ ಕಾರ್ಮಿಕ ಸಮುದಾಯಕ್ಕೆ ‘ನ್ಯೂ ಇಂಡಿಯಾ’ ಅತ್ಯಂತ ಮಹತ್ವವಾದುದು” ಎಂದು ಕರೆ ನೀಡುತ್ತಾರೆ. ಅಂಬೇಡ್ಕರ್ ಅವರ ಈ ಅಭಿಪ್ರಾಯದ ಬಗ್ಗೆ ಮೋದಿ ಪ್ರತಿನಿಧಿಸುವ ಭಾರತದ ನಾಝಿ ಪಡೆಗಳು, ಹಿಟ್ಲರನ ಕುಡಿಗಳು, ಏನು ಹೇಳುತ್ತಾರೆ ?

ತನ್ನನ್ನು ಒಬ್ಬ ಪೂಜನೀಯ ವ್ಯಕ್ತಿ ಎಂದು ಪರಿಗಣಿಸುವುದು ಅಂಬೇಡ್ಕರ್ ಅವರಿಗೆ ಖಡಾಖಂಡಿತವಾಗಿ ಇಷ್ಟವಿರಲಿಲ್ಲ. ೧೯೪೩ರ ಮಾರ್ಚ್ ತಿಂಗಳಲ್ಲಿ ನಡೆದ ಸಭೆಯೊಂದರಲ್ಲಿ ಇದೇ ಮಾತನ್ನು ಹೇಳುತ್ತ, “ಯಾರೂ ಯಾರನ್ನೂ ದೈವೀಕರಿಸುವುದು ಅಮಾನವೀಯ. ಆ ಮೂಲಕ ಹಾಗೆ ಮಾಡಲು ಹಪಹಪಿಸುವ ವ್ಯಕ್ತಿಗಳು ತಮಗರಿವಿಲ್ಲದೆಯೇ ಗುಲಾಮರಾಗಿಬಿಡುತ್ತಾರೆ”

ಎಂದು ಅಂದೇ ಎಚ್ಚರಿಸಿದ್ದರು. ಅಂಬೇಡ್ಕರ್ ಅವರ ಈ ಮಾತು ಮೋದಿಯವರಿಗೂ ಅನ್ವಯವಾಗುತ್ತದೆ. ಅಲ್ಲದೆ, ಮೋದಿಯವರ ಮಾತುಗಳು ಎಷ್ಟು ಪ್ರಾಮಾಣಿಕ, ಅವರು ಎಂದಾದರೂ ಪ್ರಾಮಾಣಿಕವಾಗಿ ಮಾತನಾಡಿದ್ದಾರೆಯೇ ಎಂಬ ಪ್ರಶ್ನೆಗಳು ನಮ್ಮ ಮುಂದೆ ಧುತ್ತೆಂದು ನಿಲ್ಲುತ್ತವೆ. ಮೋದಿಯವರನ್ನು ದೇವರೆಂದೋ, ದೇವಧೂತನೆಂದೋ ಪರಿಗಣಿಸುವ ವೆಂಕಯ್ಯ ನಾಯ್ಡು ಅವರಂತಹ ಭಕ್ತರ ದಂಡೇ ಇದೆ. ಮೋದಿಯವರಿಗೆ ಭಕ್ತರು ತಮ್ಮ ಸುತ್ತಲೂ ನೆರೆದಿರಬೇಕು, ಯಾವಾಗಲೂ. ಆದರೆ ಅಂಬೇಡ್ಕರ್ ಅವರು ಭಕ್ತರನ್ನು ಎಂದಿಗೂ ದೂರ, ಬಹು ದೂರ ಇಟ್ಟಿದ್ದರು. ಆದ್ದರಿಂದ, ಮೋದಿಯವರ ಆಶಯದಂತೆ ಒಂದೊಮ್ಮೆ ಅಂಬೇಡ್ಕರ್ "ಮರುಹುಟ್ಟಿ" ಬಂದರೂ ಮೋದಿಯವರನ್ನು ತಮ್ಮ ಭಕ್ತನಾಗಲು ಬಿಡುವುದಿಲ್ಲ ಎನ್ನಬಹುದಲ್ಲವೇ ?

ಇನ್ನು, ಭಗತ್ ಸಿಂಗ್‌ಅನ್ನು ಭಾರತೀಯ ಜನತಾ ಪಕ್ಷ ತನ್ನ ಪರಿಧಿಗೆ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಿರುವುದರ ಬಗ್ಗೆ ಒಂದೆರಡು ಮಾತು.



'ರಾಷ್ಟ್ರ ಪ್ರಶಸ್ತಿ' ಬರಬೇಕು ಭಟ್ರೇ.. ನೀವು ಅಂತಾದ್ದೊಂದು ತಿಥಿಯನ್ನ ನನಗೆ ಮಾಡಿ ಕೊಡಬಲ್ಲಿರ..?

ಹಿಂದೂ ಮಹಾಸಭಾ ಮತ್ತು ಜನಸಂಘದ ದಿನಗಳಿಂದಲೂ ಈ ಹಿಂದುತ್ವವಾದಿಗಳು ಎಂದಾದರೂ ಕ್ರಾಂತಿಕಾರಿ ಭಗತ್ ಸಿಂಗ್ ಬಗ್ಗೆ ಪ್ರಸ್ತಾಪಿಸಿದ ಉದಾಹರಣೆ ಇದೆಯೇ ? ಹೆಸರು ಹೇಳಿರಬಹುದು, ಆದರೆ ಅವನ ಆಶಯಗಳನ್ನು ಒಪ್ಪಿ ಪ್ರತಿನಿಧಿಸಿದ್ದುದುಂಟೆ ?

೧೯೨೬ರಲ್ಲಿ ಭಾರತ್ ನೌಜವಾನ್ ಸಭಾದ ಉದಯವಾದ ನಂತರ ಹಿಂದೂಸ್ತಾನ್ ಸಮಾಜವಾದಿ ಗಣವಾದಿ ಸಂಘಟನೆಯನ್ನು ಅಸ್ತಿತ್ವಕ್ಕೆ ತಂದ ರೂವಾರಿ ಭಗತ್ ಸಿಂಗ್. ತಾನೇ ಹೇಳಿಕೊಂಡಂತೆ ಭಗತ್ ಸಿಂಗ್ ನಾಸ್ತಿಕನಾಗಿದ್ದ. ಮಾರ್ಕ್ಸ್‌ವಾದಿ ಸಿದ್ಧಾಂತದ ಅನುಸಾರ ಮತ್ತು ಸತತ ಹೋರಾಟಗಳ ಮೂಲಕ ಬ್ರಿಟಿಷರನ್ನು ಹೊಡೆದೋಡಿಸಿ, ಕ್ರಾಂತಿಕಾರಿ ಚಳುವಳಿಗಳನ್ನು ಸಂಘಟಿಸಿ ಭಾರತದಲ್ಲಿ ಸಮಾಜವಾದಿ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆ ಭಗತ್ ಸಿಂಗ್‌ಗೆ ಇತ್ತು. ಕಾರ್ಮಿಕ ಮತ್ತು ರೈತ ಸಂಘಟನೆಗಳನ್ನು ಆರಂಭಿಸುವುದು, ವಿವಿಧ ಕಾರ್ಖಾನೆಗಳಲ್ಲಿ, ರೈಲ್ವೆ ವಿಭಾಗಗಳು ಹಾಗೂ ಕಲ್ಲಿದ್ದಲು ಗಣಿಗಳಲ್ಲಿ ದುಡಿಯುತ್ತಿರುವವರನ್ನು ಸಂಘಟಿಸಲು ಸಂಘಟನೆಯ ಪರವಾಗಿ ಸೂಕ್ತ ವ್ಯಕ್ತಿಗಳನ್ನು ತೊಡಗಿಸುವುದು; ಅವರ ಮನಸ್ಸುಗಳಲ್ಲಿ ಅಚ್ಚಳಿಯದಂತೆ ಒತ್ತಿ ಹೇಳಬೇಕಾದದ್ದು ಅವರು ಕ್ರಾಂತಿಗಾಗಿ ಅಲ್ಲ, ಬದಲು ಕ್ರಾಂತಿಯು ಅವರಿಗಾಗಿ ಎಂಬ ಅಂಶಗಳನ್ನು ಸದಸ್ಯರಿಗೆ ಮನದಟ್ಟು ಮಾಡುವುದು ಆತನ ಮುಖ್ಯ ಗುರಿಯಾಗಿತ್ತು.

ಭಗತ್ ಸಿಂಗ್‌ನ ಮಾತುಗಳಲ್ಲೇ ಹೇಳುವುದಾದರೆ :

"ಈ ನಾಗರಿಕತೆಯ ಭವ್ಯ ಕಟ್ಟಡವನ್ನು ಸಕಾಲದಲ್ಲಿ ಉಳಿಸದಿದ್ದರೆ ಅದು ಕುಸಿದು ಭಗ್ನವಾಗುವುದು ಖಂಡಿತ. ಆದ್ದರಿಂದ ಆಮೂಲಾಗ್ರವಾದ ಬದಲಾವಣೆ ಅತ್ಯವಶ್ಯಕ. ಅದನ್ನು ತಿಳಿದವರ ಕರ್ತವ್ಯ ಸಮಾಜವನ್ನು ಸಮಾಜವಾದಿ ಆಧಾರದ ಮೇಲೆ ಪುನರ್ರಚಿಸುವುದಾಗಿದೆ. ಇದನ್ನು ಮಾಡದ ಹೊರತು, ಅರ್ಥಾತ್ ಮಾನವನನ್ನು ಮಾನವ ಹಾಗೂ ಒಂದು ರಾಷ್ಟ್ರವನ್ನು ಇನ್ನೊಂದು ರಾಷ್ಟ್ರವು ಶೋಷಿಸುವುದನ್ನು ಅಂತ್ಯಗೊಳಿಸದ ಹೊರತು, ಮಾನವ ಜನಾಂಗವನ್ನು ಇಂದು ಬಾಧಿಸುತ್ತಿರುವ ಪಡಿಪಾಟು ಮತ್ತು ಕಗ್ಗೊಲೆಗಳನ್ನು ತಡೆಯಲಾಗುವುದಿಲ್ಲ. ಇಂದಿನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಯುದ್ಧವನ್ನು ನಿರ್ನಾಮಗೊಳಿಸುವ ಹಾಗೂ ಶಾಂತಿಯ ನವೋದಯವನ್ನು ಸೃಷ್ಟಿಸುವ ಎಲ್ಲ ಮಾತುಗಳೂ ಅನಾಚ್ಛಾದಿತ ಕಪಟತನದ ಮಾತುಗಳೇ ಆಗಿರುತ್ತವೆ."

"ಕ್ರಾಂತಿ ಎಂದರೆ ನಮ್ಮ ಕಲ್ಪನೆಯಲ್ಲಿ ಅಂತಿಮವಾಗಿ ಇಂತಹ ಆಘಾತಗಳಿಗೆ ತುತ್ತಾಗದಂತಹ ಸಮಾಜ ವ್ಯವಸ್ಥೆಯೊಂದರ ನಿರ್ಮಾಣ. ಅಲ್ಲಿ ದುಡಿಮೆಗಾರನ ಸಾರ್ವಭೌಮತ್ವವನ್ನು ಎಲ್ಲರೂ ಮಾನ್ಯ ಮಾಡುತ್ತಾರೆ. ಬಂಡವಾಳಶಾಹಿ ಪದ್ಧತಿ ಮತ್ತು ಸಾಮ್ರಾಜ್ಯಶಾಹಿ ಯುದ್ಧಗಳ ಪಿಡುಗಿನಿಂದ ಮಾನವ ಜನಾಂಗಕ್ಕೆ ಮುಕ್ತಿ ದೊರಕಬೇಕು; ಅದು ಜಾಗತಿಕ ಒಕ್ಕೂಟದ ಕೊಡುಗೆಯಾಗಿರುತ್ತದೆ."

ಈ ಮಾತುಗಳ ಹಿನ್ನೆಲೆಯಲ್ಲಿ ನಮಗೆ ಸ್ಪಷ್ಟವಾಗಿ ತಿಳಿದುಬರುವ ಸಂಗತಿಯೆಂದರೆ, ಭಗತ್ ಸಿಂಗ್ ಕಟ್ಟಾ ನಾಸ್ತಿಕನಾಗಿದ್ದ. ಮಾರ್ಕ್ಸ್‌ವಾದಿಯಾಗಿದ್ದ. ಸಮಾಜವಾದಿ ಕ್ರಾಂತಿಗಾಗಿ ಹಂಬಲಿಸುತ್ತ ಬ್ರಿಟಿಷರ ವಿರುದ್ಧ ಹೋರಾಡಲು ಹಾತೊರೆಯುತ್ತಿದ್ದ ಅಪರೂಪದ ಹುತಾತ್ಮ ಭಗತ್ ಸಿಂಗ್. ಇಂತಹ ನಾಸ್ತಿಕನ, ಮಾರ್ಕ್ಸ್‌ವಾದಿ ಕ್ರಾಂತಿಕಾರಿಯ ಭಾವಚಿತ್ರವು ಜಡ್ಡುಮನಸ್ಸಿನ ಹಿಂದುತ್ವವಾದಿಗಳ ಬ್ಯಾನರ್‌ಗಳಲ್ಲಿ ಕಂಡುಬರುವುದು ಒಂದು ದುರಂತವೇ ಸರಿ. ಇಂತಹ ದುಷ್ಕೃತ್ಯದ ಹಿಂದೆ ಎಂತಹ ಕುತಂತ್ರವಿದೆ, ಮೋಸಗಾರಿಕೆ ಇದೆ ಎಂಬುದು ಯಾರಿಗಾದರೂ ಅರ್ಥವಾಗುವ ವಿಷಯವೇ. ಅಷ್ಟೇ ಅಲ್ಲ, ಬ್ರಿಟಿಷರಲ್ಲಿ ಕ್ಷಮೆ ಯಾಚಿಸಿದ ಸಾವರ್ಕರರನ್ನು ತಮ್ಮ ಆರಾಧ್ಯ ದೇವತೆಯನ್ನಾಗಿಸಿಕೊಂಡಿರುವ ಭಾರತೀಯ ಜನತಾ ಪಕ್ಷದವರು ಹರ್ಯಾಣಾದಲ್ಲಿ ಭಗತ್ ಸಿಂಗ್‌ನ ಹೆಸರಿನಲ್ಲಿದ್ದ ವಿಮಾನ ನಿಲ್ದಾಣಕ್ಕೆ ಪುನರ್‌ನಾಮಕರಣ ಮಾಡಿದ್ದಾರೆ ! ಆ ವಿಮಾನ ನಿಲ್ದಾಣ ಈಗ ಆರೆಸ್ಸಸ್‌ಗೆ ಸಂಬಂಧಪಟ್ಟ ವ್ಯಕ್ತಿಯೊಬ್ಬನ ಹೆಸರಿನಲ್ಲಿ "ರಾರಾಜಿಸುತ್ತಿದೆ." ಇದು ಭಗತ್ ಸಿಂಗ್‌ಅನ್ನು ತಮ್ಮವನನ್ನಾಗಿಸಿಕೊಳ್ಳುವ ಪರಿಯೇ ?! ಅವನೊಬ್ಬ ಕ್ರಾಂತಿಕಾರಿ, ಮಾರ್ಕ್ಸ್‌ವಾದದಲ್ಲಿ ನಂಬಿಕೆ ಇಟ್ಟಿದ್ದವ ಎಂಬುದನ್ನೆಲ್ಲ ಪಕ್ಕಕ್ಕಿಟ್ಟು ಅವನ ಹೆಸರನ್ನಾಗಲಿ, ಭಾವಚಿತ್ರವನ್ನಾಗಲಿ ಬಳಸಿಕೊಳ್ಳಲು ಸಂಘಪರಿವಾರಗಳಿಗೆ ಯಾವ ನೈತಿಕ ಹಕ್ಕಿದೆ ?

ಇನ್ನು, ಈ ಜನ ತಮ್ಮ ಸಿದ್ಧಾಂತಕ್ಕೆ ತದ್ವಿರುದ್ಧವಾದ ನಿಲುವು ಹೊಂದಿದ್ದ ಸ್ವಾಮಿ ವಿವೇಕಾನಂದರನ್ನೂ ಬಿಟ್ಟಿಲ್ಲ.

"ಪೌರೋಹಿತ್ಯಶಾಹಿ ತನ್ನ ಸ್ವಭಾವದಲ್ಲಿಯೇ ಕ್ರೂರ ಮತ್ತು ಹೃದಯಹೀನ. ಆದ್ದರಿಂದ ಎಲ್ಲಿ ಪೌರೋಹಿತ್ಯಶಾಹಿ ತಲೆ ಎತ್ತುವುದೋ ಅಲ್ಲಿ ಧರ್ಮದ ಅಧಃಪತನವಾಗುತ್ತದೆ. ವಿಶೇಷ ಸೌಲಭ್ಯಗಳ ಭಾವನೆಯನ್ನು ತ್ಯಜಿಸಿದರೆ ಮಾತ್ರ ಧರ್ಮ ಬರುತ್ತದೆ ಎಂದು ವೇದಾಂತ ಸಾರುತ್ತದೆ. ಆ ಭಾವನೆ ಉಂಟಾಗುವ ಮುನ್ನ ಧರ್ಮ ಬರುವುದೇ ಇಲ್ಲ."

– ಸ್ವಾಮಿ ವಿವೇಕಾನಂದ

"ನವಭಾರತ ನೇಗಿಲು ಹಿಡಿದ ರೈತರ ಗುಡಿಸಿಲಿನಿಂದ ಮೂಡಿಬರಲಿ. ದಿನಸಿ ಮಾರುವ ಕಿರಾಣಿ ಅಂಗಡಿಗಳಿಂದ, ಕಮ್ಮಾರನ ಕುಲುಮೆಗಳಿಂದ ನವಭಾರತ ಮೇಲೆದ್ದು ಬರಲಿ. ಕಾರ್ಖಾನೆಗಳಿಂದ ಮಾರಾಟದ ಮಳಿಗೆಗಳಿಂದ ಮಾರುಕಟ್ಟೆಗೆ ಆಕೆ ಮೈದೋರಲಿ."

– ಸ್ವಾಮಿ ವಿವೇಕಾನಂದ

ರಾಷ್ಟ್ರಪ್ರೇಮದ ಹೆಸರಿನಲ್ಲಿ, ಹಿಂದುತ್ವದ ಪುನರುತ್ಥಾನದ ನೆವದಲ್ಲಿ, ಕೋಮುವೈಷಮ್ಯದ ಕಿಚ್ಚನ್ನು ಹಚ್ಚಿ, ದ್ವೇಷ, ಮತ್ಸರ, ಕ್ರೌರ್ಯದ ತ್ರಿಶೂಲ ಶಕ್ತಿಯಿಂದ ದೇಶವನ್ನು ಉದ್ಧಾರ ಮಾಡುತ್ತೇವೆಂದು ಹೊರಟಿರುವ ಹಿಂದೂ ಕೋಮುವಾದಿಗಳು ವಿವೇಕಾನಂದರ ಈ ಮಾತುಗಳನ್ನು ಗಮನಿಸುವುದು ಸೂಕ್ತ. ವಿವೇಕಾನಂದರೂ ಈಗ ಸಂಘಪರಿವಾರದ ಸರಕಾಗಿ ಬಳಕೆ ಯಾಗುತ್ತಿರುವುದು ಭಾರತೀಯರ ದೌರ್ಭಾಗ್ಯವೆಂದೇ ಹೇಳಬೇಕು.

ಹೀಗೆ ಬಾಬಾ ಸಾಹೇಬ್ ಅಂಬೇಡ್ಕರ್, ಭಗತ್ ಸಿಂಗ್, ವಿವೇಕಾನಂದ ಮುಂತಾದವರ ಹೆಸರುಗಳು

## ಅಭಿನಂದನೆ...

ಸಿದ್ಧವನಹಳ್ಳಿ ಕೃಷ್ಣಶರ್ಮ ಸ್ಮಾರಕ ಸಂಸ್ಥೆಯ ವತಿಯಿಂದ ೨೦೧೪-೧೫ನೇ ಸಾಲಿನ 'ಸಿದ್ಧವನಹಳ್ಳಿ ಕೃಷ್ಣಶರ್ಮ ಸಾಹಿತ್ಯ ಪ್ರಶಸ್ತಿ'ಯನ್ನು ನವಕರ್ನಾಟಕ ಪ್ರಕಾಶನದ 'ಸಾವೇ ಬರುವುದಿದ್ದರೆ ನಾಳೆ ಬಾ !' ಕೃತಿಗಾಗಿ ಲೇಖಕಿ ನೇಮಿಚಂದ್ರ ಅವರಿಗೆ ನೀಡಲಾಗಿದೆ. ಲೇಖಕಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಸಂಘಪರಿವಾರದವರ ಕೋಮು ರಾಜಕಾರಣದಲ್ಲಿ ಬಳಕೆಯಾಗುತ್ತಿರುವುದರ ಮರ್ಮವೇನು ?

ಸ್ವಾತಂತ್ರ್ಯ ಹೋರಾಟದಲ್ಲಿ ಯಾವತ್ತಿಗೂ ಪಾಲ್ಗೊಳ್ಳದ, ಸಂವಿಧಾನ ರಚನೆಯ ಸಂದರ್ಭದಲ್ಲಿ ಅಮಾಯಕರಾಗಿ ಹಿಂದುತ್ವದ ಭಜನೆ ಮಾಡುತ್ತ ಕೋಮುಗಲಭೆಗಳನ್ನು ಹುಟ್ಟುಹಾಕುವುದರಲ್ಲೇ ನಿರತರಾಗಿದ್ದ ಸಂಘಪರಿವಾರದ ರಾಜಕೀಯ ಅಂಗಪಕ್ಷವಾದ ಬಿ.ಜೆ.ಪಿ. ಈಗ ಭಾರತದ ಆಧುನಿಕ ಇತಿಹಾಸದಲ್ಲಿ ತನ್ನದೇ ಆದ ಸ್ಥಾನವೊಂದನ್ನು ಹೇಗಾದರೂ ಮಾಡಿ ನಿರ್ಮಿಸಿಕೊಳ್ಳಲು ಹಾತೊರೆಯುತ್ತಿದೆ. ಆಳುವ ಪಕ್ಷವಾದ್ದರಿಂದ ಅದರ ತುರ್ತು ಅಗತ್ಯವೂ ಈಗೀಗ ಕಂಡುಬರುತ್ತಿದೆ. ಆ ಕಾರಣಕ್ಕಾಗಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದ್ದ ಕೆಲವು ಪ್ರಮುಖ ವ್ಯಕ್ತಿಗಳ ಹೆಸರುಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವ ಹುನ್ನಾರಕ್ಕೆ ಕೈ ಹಾಕಿದೆ. ಆರೆಸ್ಸೆಸ್ಸಾಗಲಿ, ಹಿಂದು ಮಹಾಸಭಾ ಆಗಲಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳಲಿಲ್ಲ, ಬದಲು ಬ್ರಿಟಿಷರ ಏಜೆಂಟರಂತೆ ವರ್ತಿಸಿದವು ಎಂಬುದು ಐತಿಹಾಸಿಕ ಸತ್ಯ. ಇದಕ್ಕೊಂದು ಸಣ್ಣ ಉದಾಹರಣೆಯೆಂದರೆ, ಅಂದಿನ ದಿನಗಳಲ್ಲಿ ಯಾವುದೇ ಸಣ್ಣಪುಟ್ಟ ಸಂಘಟನೆಗಳು ಮೈದಾನಗಳಲ್ಲಿ ಡ್ರಿಲ್ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಕೊಂಡದ್ದನ್ನು ಕಂಡರೆ ಅವರ ಮೇಲೆ ಕೂಡಲೇ ಬ್ರಿಟಿಷ್ ಸರ್ಕಾರ ಕ್ರಮ ಜರುಗಿಸುತ್ತಿತ್ತು. ಆದರೆ ಆರೆಸ್ಸೆಸ್ ಶಾಖೆಗಳ ವಿರುದ್ಧ ಯಾವ ಕ್ರಮವನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಈ ಸಣ್ಣ ಉದಾಹರಣೆ ಸಾಕಲ್ಲವೇ ಬ್ರಿಟಿಷರು ಆರೆಸ್ಸೆಸ್ ಬಗ್ಗೆ ತೋರಿಸುತ್ತಿದ್ದ "ಮಮತೆ"ಗೆ ! ಆ "ಮಮತೆ"ಯ ಹಿಂದಿದ್ದ ಕಾರಣಗಳಿಗೆ ? !

ಒಟ್ಟಾರೆಯಾಗಿ, ಭಾರತೀಯ ಜನತಾ ಪಕ್ಷಕ್ಕೀಗ ತನ್ನದೇ ಆದ ಹೊಸ, ಆಧುನಿಕ ಇಮೇಜ್ ಬೇಕಿದೆ. ಈ ಹಿನ್ನೆಲೆಯಲ್ಲಿ ತನ್ನ ಸಿದ್ಧಾಂತಕ್ಕೆ ಯಾವುದೇ ಸಂಬಂಧವಿಲ್ಲದವರನ್ನೂ, ತನ್ನ ಸಿದ್ಧಾಂತಕ್ಕೆ ವಿರೋಧವಾಗಿದ್ದವರನ್ನೂ ತನ್ನ ತೆಕ್ಕೆಗೆ ತೆಗೆದುಕೊಳ್ಳುವಂತಹ ಕೀಳುಮಟ್ಟಕ್ಕಿಳಿಯುತ್ತಿರುವುದು ನಾಚಿಕೆಗೇಡಿನ ಸಂಗತಿ. ಸ್ವಾತಂತ್ರ್ಯ ಹೋರಾಟಕ್ಕೂ ಭಾರತೀಯ ಜನತಾ ಪಕ್ಷಕ್ಕೂ ನಿಕಟ ಸಂಬಂಧವಿದೆ ಎಂಬ ಭ್ರಮೆಯನ್ನು ಜನಸಾಮಾನ್ಯರಲ್ಲಿ ಸೃಷ್ಟಿಸುವ ಮಟ್ಟಕ್ಕೆ ಅವರ ಪ್ರಚಾರ ಸಾಂಗೋಪಾಂಗವಾಗಿ ಎಲ್ಲೆಡೆ ನಡೆಯುತ್ತಿದೆ. ಎಂದೇ ಇದ್ದಕ್ಕಿದ್ದಂತೆ ಇದೀಗ ರಾಷ್ಟ್ರೀಯತೆ, ದೇಶಪ್ರೇಮ, ದೇಶದ್ರೋಹ ಎಂಬ ಪದಪ್ರಯೋಗಗಳು ಹೊಸ ಅರ್ಥ ಪಡೆಯುತ್ತಿವೆ. ಬಿಜೆಪಿ ನಾಯಕರು, ಅವರ ಸಾಮೂಹಿಕ ಸಂಘಟನೆಗಳ ನಾಯಕರು ರಾಷ್ಟ್ರೀಯತೆ, ದೇಶಪ್ರೇಮ, ದೇಶದ್ರೋಹ ಮುಂತಾದ ಪದಗಳನ್ನು ಜಪಿಸುತ್ತಲೇ ಜನರನ್ನು ತಪ್ಪುದಾರಿಗೆ ಎಳೆಯುತ್ತಿದ್ದಾರೆ. ಕೇಂದ್ರದಲ್ಲಿ ೨೦೧೪ರಲ್ಲಿ ಅಧಿಕಾರಕ್ಕೆ ಬಂದ ಬಿಜೆಪಿ ನೇತೃತ್ವದ ಎನ್‌ಡಿಎ ತಾನು ನೀಡಿದ ಯಾವುದೇ ಚುನಾವಣಾ ಆಶ್ವಾಸನೆಗಳನ್ನು ಈಡೇರಿಸಲು ಸಾಧ್ಯವಾಗುತ್ತಿಲ್ಲ. ಒಂದಾದ ಮೇಲೆ ಒಂದರಂತೆ ಅದರ ವೈಫಲ್ಯಗಳು ಹೆಚ್ಚುತ್ತಿರುವುದು ಒಂದು ಕಡೆಯಾದರೆ, ಇನ್ನೊಂದು ಕಡೆ ನಿರುದ್ಯೋಗ, ಬೆಲೆ ಏರಿಕೆ, ಆರ್ಥಿಕ ಹಿನ್ನಡೆ ಮುಂತಾದ ಸಮಸ್ಯೆಗಳು ಜನಸಾಮಾನ್ಯರ ಬದುಕನ್ನು ಹಾಳುಗೆಡವಿವೆ. ಈ ಎಲ್ಲ ವೈಫಲ್ಯಗಳನ್ನು ಮರೆಮಾಚಲು ಸಂಘಪರಿವಾರದವರು 'ರಾಷ್ಟ್ರೀಯತೆ' ಎಂಬ ತಮ್ಮದೇ ಆದ ವಿಚಿತ್ರ ಕಲ್ಪನೆಯನ್ನು ಮುನ್ನೆಲೆಗೆ ತರಲೆತ್ನಿಸುತ್ತಿದ್ದಾರೆ ಎಂದರೆ ತಪ್ಪಾಗಲಾರದು. ನಿಜಾರ್ಥದಲ್ಲಿ ಅವರ ರಾಷ್ಟ್ರೀಯತೆಯ ಕಲ್ಪನೆಯು ಹಿಂದೂ ರಾಷ್ಟ್ರೀಯತಾ ರಾಜಕಾರಣವಲ್ಲದೆ ಬೇರೇನೂ ಅಲ್ಲ ಎಂಬುದನ್ನು ಜನತೆ ಮನಗಾಣಬೇಕಿದೆ.

ಭಾರತದ ಬಲಪಂಥೀಯ ಕೋಮುವಾದಿ ಸಂಘಟನೆಗಳಿಗೆ ನಮ್ಮ ಇತಿಹಾಸದಲ್ಲಿ ಹೆಮ್ಮೆಪಡಬಹುದಾದಂತಹ ಯಾವುದೇ ಹಿನ್ನೆಲೆಯೂ ಇಲ್ಲ, ಅಂತಹ ವ್ಯಕ್ತಿಗಳೂ ಇಲ್ಲ. ಅವರ ಪ್ರಕಾರ ರಾಷ್ಟ್ರೀಯತೆ ಎಂದರೆ, ಅದು ಅಲ್ಪಸಂಖ್ಯಾತ ವಿರೋಧಿ, ಕಮ್ಯುನಿಸ್ಟ್ ವಿರೋಧಿ ರಾಷ್ಟ್ರೀಯತಾ ಭಾವನೆ, ಅಷ್ಟೆ. ಆ ಕಾರಣಕ್ಕಾಗಿಯೇ ನಮ್ಮ ಆಧುನಿಕ ಇತಿಹಾಸದಲ್ಲಿ ಇಂತಹ ಸಂಘಟನೆಗಳು ರಾಷ್ಟ್ರವ್ಯಾಪಿಯಾದ, ಸಮಸ್ತ ಜನತೆಯನ್ನು ಒಳಗೊಂಡ ಜನಪರ ಹೋರಾಟಗಳನ್ನು ಸಂಘಟಿಸಿದ ಯಾವುದೇ ಉದಾಹರಣೆಯೂ ಇಲ್ಲ. ಹೆಚ್ಚೆಂದರೆ ಅವರು ತಮ್ಮದೇ ಆದ ಅಸ್ಮಿತೆಯನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದ್ದು ಕುಖ್ಯಾತ, ಉಗ್ರವಾದಿ, ಭಯೋತ್ಪಾದಕ ಲಕ್ಷಣಗಳನ್ನು ಹೊಂದಿದ್ದ ತಥಾಕಥಿತ ಅಯೋಧ್ಯೆ ಚಳುವಳಿಯಲ್ಲಿ (ಅದನ್ನೊಂದು ಚಳುವಳಿ ಎಂದು ಕರೆಯುವುದಾದರೆ !).

ಸ್ವಾತಂತ್ರ್ಯ ಹೋರಾಟದ ಮುಂಚೂಣಿಯಲ್ಲಿದ್ದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಅಂದಿನ ದಿನಗಳಲ್ಲಿ ಒಂದು ವಿಶಾಲ ತಳಹದಿಯ ರಾಷ್ಟ್ರವ್ಯಾಪಿ ಚಳುವಳಿಯಾಗಿತ್ತು ಮತ್ತು ಅದರಲ್ಲಿ ಮೂಲ ಕಾಂಗ್ರೆಸ್ಸಿನವರು, ಕಮ್ಯುನಿಸ್ಟರು, ಸಮಾಜವಾದಿಗಳು ರಾಜಕೀಯ ಮತ್ತು ಆರ್ಥಿಕ ವಿಚಾರಗಳ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳಿದ್ದವರು ಭಾಗವಹಿಸಿದ್ದರು. ಸಾವಿರಾರು ಜನರು ಅಸುನೀಗಿದ, ತ್ಯಾಗ ಬಲಿದಾನಗಳನ್ನು ಮಾಡಿದ ಆ ಮಹಾನ್ ಹೋರಾಟದಲ್ಲಿ ತಾವು ಎಲ್ಲಿದ್ದೆವು ಎಂಬ ಪ್ರಶ್ನೆಗೆ ಸಂಘಪರಿವಾರದವರೇ ಉತ್ತರಿಸಬೇಕು ಎಂದೇ ಈಗೀಗ ಈ ಜನ ಅಂಬೇಡ್ಕರ್ ಅವರನ್ನೋ, ಭಗತ್ ಸಿಂಗ್‌ರನ್ನೋ, ವಿವೇಕಾನಂದರನ್ನೋ, ದತ್ತು ತೆಗೆದುಕೊಂಡು ತಮ್ಮ ಮುಖಕ್ಕೆ ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಳ್ಳುವ ಹುನ್ನಾರದಲ್ಲಿ ತೊಡಗಿದ್ದಾರೆ. ಅವರಿಗೆ ಮೊದಲಿನಿಂದಲೂ ರಾಷ್ಟ್ರವ್ಯಾಪಿಯಾದ ಜನಪರ ಹೋರಾಟಗಳಲ್ಲಿ ನಂಬಿಕೆಯಿಲ್ಲ. ಬದಲು ಅವರಿಗೆ ನಂಬಿಕೆ ಇರುವುದು ತಾವೇ ಗುರುತಿಸಿ, ತಮಗೆ ಮುಖ್ಯರೆನಿಸಿದ ವ್ಯಕ್ತಿಗಳಲ್ಲಿ. ಅಂತಹವರನ್ನು ದೈವತ್ವಕ್ಕೇರಿಸಿಬಿಡುತ್ತಾರೆ, ಸೂಪರ್‌ಮ್ಯಾನ್‌ಗಳನ್ನಾಗಿ ಮಾಡಿಬಿಡುತ್ತಾರೆ. ಇದು ಫ್ಯಾಸಿಸಂನ ನಿಜವಾದ ಮುಖ. ಅವರ ನೀತಿ, ಸಿದ್ಧಾಂತಗಳು ಜನ್ಮ ತಳೆಯುವುದು ಇಂತಹ ಧೋರಣೆಗಳಿಂದಲೇ.

ವಿವಿಧ ಮತಧರ್ಮಗಳು, ವಿವಿಧ ಸಂಸ್ಕೃತಿಗಳು, ನೂರಾರು ಭಾಷೆಗಳು, ಹಲವಾರು ಚಿಂತನೆಗಳ ಬೀಡಾಗಿರುವ ಈ ಭಾರತದ ನೆಲದಲ್ಲಿ ಈ ಬಲಪಂಥೀಯ ಹಿಂದೂ ರಾಷ್ಟ್ರೀಯತಾವಾದಿಗಳು ತಮ್ಮ ಹುನ್ನಾರಗಳಲ್ಲಿ ಯಶಸ್ವಿಯಾಗಲು ಸಾಧ್ಯವಿದೆಯೇ ? ಹಾಗೊಮ್ಮೆ ಅಂತಹ ಸಾಧ್ಯತೆಗಳಿದ್ದದ್ದೇ ಆದರೆ ಅವುಗಳನ್ನು ಕೂಡಲೇ ಹಿಮ್ಮೆಟ್ಟಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಬೇಕು.

ಕಾರಣವಿಷ್ಟೆ. ಈ ಸಂಘಿಗಳು ಕೃತಿಗಳನ್ನು ರಚಿಸುವುದಿಲ್ಲ. ಆದರೆ ಅವುಗಳನ್ನು ಮುಟ್ಟುಗೋಲು ಹಾಕುವುದರಲ್ಲಿ ಅಥವಾ ಸುಡುವುದರಲ್ಲಿ ನಿಸ್ಸೀಮರು. ಯೋಜನಾ ಆಯೋಗ, ಭಾರತೀಯ ಇತಿಹಾಸ ಸಂಶೋಧನೆ ಸಂಸ್ಥೆ, ಜೆ.ಎನ್.ಯು.ನಂತಹ ವಿದ್ಯಾಸಂಸ್ಥೆಗಳು, ಪುಣೆ ಫಿಲ್ಮ್ ಮತ್ತು ಟೆಲಿವಿಷನ್ ಇನ್‌ಸ್ಟಿಟ್ಯೂಟ್‌ಗಳಂತಹ ಸಂಸ್ಥೆಗಳನ್ನು ನಿರರ್ಥಕಗೊಳಿಸುವುದರಲ್ಲಿ ಅವರಿಗೆ ಸರಿಸಮಾನರು ಯಾರೂ ಇಲ್ಲ. ಯಾವುದೇ ಜನಪರ ಸಂಸ್ಥೆಗಳನ್ನು ಸ್ಥಾಪಿಸುವ ದೂರದೃಷ್ಟಿ ಅವರಿಗಿಲ್ಲ. ಅವರು ಪ್ರತಿಪಾದಿಸುವ ರಾಷ್ಟ್ರೀಯತೆಯ ಕಲ್ಪನೆ ಮೂಡಿಬರುವುದು ಇವೆಲ್ಲದರ ಹಿನ್ನೆಲೆಯಲ್ಲಿ.

**ಎಸ್. ಸುರೇಂದ್ರ**
ನಂ. ೨೪, ೧೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲನಿ
ಜಯನಗರ ಪೂರ್ವ, ಬೆಂಗಳೂರು – ೫೬೦ ೦೧೧

## ಅಭಿನಂದನೆಗಳು

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಶಸ್ತಿ ಸಮಿತಿಯವರು ಕೊಡಮಾಡುವ 2016ರ 'ಮಾಸ್ತಿ ಪ್ರಶಸ್ತಿ'ಗೆ ಡಾ॥ ಎಚ್. ಎಸ್. ರಾಘವೇಂದ್ರರಾವ್, ಪ್ರೊ॥ ಟಿ. ಪಿ. ಅಶೋಕ, ಶ್ರೀಮತಿ ರೇಖಾ ಕಾಖಂಡಕಿ ಹಾಗೂ ಶ್ರೀಮತಿ ನೇಮಿಚಂದ್ರ ಆಯ್ಕೆಯಾಗಿದ್ದಾರೆ. ಎಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಹಾರ್ದಿಕ ಅಭಿನಂದನೆಗಳು.

## ಬೆಂಗಳೂರ ಕನ್ನಡ

ಬೆಂಗಳೂರಿನಲ್ಲಿ
ಮಾತನಾಡಿದೆ
ಶುದ್ಧ ಕನ್ನಡದ ಪದವಿಕ್ಕಿ
ಬೆಂಗಳೂರಿನ
ಜನ ಆದರು ಕಕ್ಕಾಬಿಕ್ಕಿ...!

**ಗೀತಾಶಾಸ್ತ್ರಿ**
ಬೆಂಗಳೂರು – ೨೮

# ಭಾರತ–ಅಮೆರಿಕ ಅಲಿಪ್ತತೆಯಿಂದ ಅಪ್ಪುಗೆಗೆ

**ಎ**ರಡು ವರ್ಷಗಳಲ್ಲಿ ನಾಲ್ಕು ಸಲ ಅಮೆರಿಕಾಗೆ ಭೇಟಿ ನೀಡಿರುವ ಪ್ರಧಾನಿ ನರೇಂದ್ರ ಮೋದಿ ಅಮೆರಿಕದೊಂದಿಗಿನ ಸಂಬಂಧಗಳನ್ನು ಹೊಸ ಮಜಲಿಗೆ ಕೊಂಡೊಯ್ದಿದ್ದಾರೆ ಎನ್ನುವುದು ನಿರ್ವಿವಾದದ ಸಂಗತಿ. ದ್ವಿಪಕ್ಷೀಯ ವಹಿವಾಟು ಈಗ ಸ್ಟ್ರಟೀಜಿಕ್ ಪಾರ್ಟ್ನರ್‌ಷಿಪ್‌ವರೆಗೆ ವಿಸ್ತರಿಸಿದೆ. ಅಂದರೆ ವ್ಯೂಹಾತ್ಮಕ ಅಥವಾ ಯುದ್ಧಕ್ಕೆ ಸಹಾಯಕವಾಗುವ ಸಹಯೋಗದವರೆಗೆ ವ್ಯಾಪಿಸಿದೆ. ಇದು ಅನಿರೀಕ್ಷಿತವೇನಲ್ಲ, ಕಳೆದ ಕೆಲ ವರ್ಷಗಳಿಂದ ಆಗಿರುವ ಬೆಳವಣಿಗೆ ಇನ್ನು ಮುಂದೆ ಅಮೆರಿಕ ಭಾರತಕ್ಕೆ ಅಗತ್ಯವಾದ ಶಸ್ತ್ರಾಸ್ತ್ರಗಳನ್ನು ದೊಡ್ಡ ಪ್ರಮಾಣದಲ್ಲಿ ಒದಗಿಸಲಿದೆ, ತಂತ್ರಜ್ಞಾನವನ್ನೂ ನೀಡಲಿದೆ. ಹಲವು ವರ್ಷಗಳಿಂದ ರಷ್ಯ ನಮ್ಮ ರಕ್ಷಣಾ ವ್ಯವಸ್ಥೆಗೆ ಆಯುಧ ಸಾಮಗ್ರಿಗಳನ್ನು ಸರಬರಾಜು ಮಾಡುತ್ತಿತ್ತು, ಈಗ ಅಮೆರಿಕ ಆ ಸ್ಥಾನವನ್ನು ಪಡೆದುಕೊಂಡಿದೆ. ಸೋಜಿಗದ ಸಂಗತಿ ಎಂದರೆ ಒಂದು ಕಾಲದಲ್ಲಿ ಅಲಿಪ್ತನೀತಿಯನ್ನು ಅನುಸರಿಸುತ್ತಿದ್ದು, ಅಂತರರಾಷ್ಟ್ರೀಯ ವಿದ್ಯಮಾನಗಳಿಗೆ ಸಂಬಂಧಿಸಿದಂತೆ ಸ್ವತಂತ್ರವಾದ ನಿಲುವನ್ನು ತಳೆಯುತ್ತಿದ್ದ ಭಾರತ ಇಂದು ಅಮೆರಿಕದ ಮರ್ಜಿಗೆ ಅನುಸಾರವಾಗಿ ನಡೆದುಕೊಳ್ಳುತ್ತಿರುವುದು ನಿಜಕ್ಕೂ ಸೋಜಿಗದ ಸಂಗತಿ. ಈ ಬೆಳವಣಿಗೆಗೆ ಭವಿಷ್ಯದಲ್ಲಿ ನಮ್ಮನ್ನು ಎಲ್ಲಿಗೆ ಕೊಂಡೊಯ್ಯುತ್ತದೆ ಎನ್ನುವುದೇ ಪ್ರಮುಖವಾದ ಪ್ರಶ್ನೆ.

ಅಮೆರಿಕದ ಕಾಂಗ್ರೆಸ್ ಸದಸ್ಯರನ್ನು ಉದ್ದೇಶಿಸಿ ಮಾತನಾಡಿದ ಮೋದಿ ಭಾರತ–ಅಮೆರಿಕ ಸಂಬಂಧವನ್ನು 'ಕಳಚಿಕೊಳ್ಳಲಾಗುವ ಸಹಯೋಗ' ಎಂದು ಬಣ್ಣಿಸಿದ್ದಾರೆ. ರಕ್ಷಣಾ ಸಾಮಗ್ರಿಗಳ ಸರಬರಾಜಿನ ಮಟ್ಟಿಗೆ ಭಾರತವನ್ನು 'ನ್ಯಾಟೋ' ರಾಷ್ಟ್ರಗಳು ಹಾಗೂ ಜಪಾನಿನ ಮಟ್ಟದಲ್ಲಿ ಪರಿಗಣಿಸಲಾಗುವುದು ಎಂಬುದಾಗಿ ಅಮೆರಿಕದ ಕಾಂಗ್ರೆಸ್ ಈ ತೀರ್ಮಾನವನ್ನು ಅನುಮೋದಿಸಲಿದೆ. ಭೇಟಿಯ ನಂತರ ನೀಡಲಾದ ಜಂಟಿ ಹೇಳಿಕೆಯಲ್ಲಿ ಅಮೆರಿಕ ಭಾರತದ 'ಪ್ರಮುಖ ರಕ್ಷಣಾ ಸಹಭಾಗಿ' ಎಂದು ಬಣ್ಣಿಸಲಾಗಿದೆ. ಇದರ ಗೂಢಾರ್ಥ ಏನೆಂಬುದನ್ನು ಪರಿಶೀಲಿಸಬೇಕಾಗಿದೆ. ಮೋದಿಯವರ ಈ ಸಲದ ಅಮೆರಿಕದ ಭೇಟಿಯ ಕಾಲದಲ್ಲಿ ಹಲವು ಒಪ್ಪಂದಗಳಿಗೆ ಸಹಿ ಹಾಕಲಾಗಿದೆ. ಅವುಗಳ ಪೈಕಿ ನ್ಯೂಕ್ಲಿಯರ್ ಸಹಕಾರ ಕುರಿತ ಪ್ರಸ್ತಾಪ ಕೂಡ ಒಂದು. ಆದರೆ ಈ ವಿಚಾರದಲ್ಲಿ ವಿವಾದಾತ್ಮಕವಾದ, ಮುಖ್ಯವಾಗಿ ನ್ಯೂಕ್ಲಿಯರ್ ಸ್ಥಾವರದಲ್ಲಿ ಅಪಘಾತ ಸಂಭವಿಸಿದಾಗ ಅದಕ್ಕೆ ಯಾರು ಹೊಣೆ ಎನ್ನುವ ವಿಚಾರ ನಿಗೂಢ. ದಕ್ಷಿಣ ಚೀಣಾ ಸಮುದ್ರದ ಪ್ರದೇಶದಲ್ಲಿ ಜಂಟಿ ಕವಾಯಿತಿನ ಪ್ರಸ್ತಾಪ ನೇರವಾಗಿ ಇಲ್ಲದಿದ್ದರೂ ಏಷಿಯ ಪೆಸಿಫಿಕ್ ಮತ್ತು ಹಿಂದೂ ಮಹಾಸಾಗರ ಪ್ರದೇಶದಲ್ಲಿ ಜಂಟಿ ಸಮರಾಭ್ಯಾಸಗಳಿಗೆ ಒತ್ತು ನೀಡಲಾಗಿದೆ. ಇದು ಚೀಣಾಗೆ ಇರಿಸುಮುರುಸಾದೀತು, ಭಾರತ–ಚೀಣಾ ಸಂಬಂಧಗಳ ಮೇಲೆ ಪರಿಣಾಮ ಬೀರಿತು.

ಪರಮಾಣು ಪೂರೈಕೆದಾರ ದೇಶಗಳ ಗುಂಪು (ಎನ್.ಎಸ್.ಜಿ.) ಮತ್ತು ಕ್ಷಿಪಣಿ ತಂತ್ರಜ್ಞಾನ ನಿಯಂತ್ರಣ ಗುಂಪು (ಎಂ.ಟಿ.ಸಿ.ಆರ್.) ಇವೆರಡರ ಸದಸ್ಯತ್ವ ಪಡೆದುಕೊಳ್ಳಲು ಭಾರತ ಹಾತೊರೆಯುತ್ತಿದೆ. ಅಮೆರಿಕ ಇದಕ್ಕೆ ಪೂರ್ಣ ಬೆಂಬಲ ನೀಡಿದೆ ಎನ್ನುವುದು ನಿಜ. ಆದರೆ ಇದು ಒಂದು ವ್ಯರ್ಥ ಪ್ರಯತ್ನವಾದೀತು, ಭದ್ರತಾ ಮಂಡಳಿಯ ಸದಸ್ಯತ್ವದಂತೆ. ಕಳೆದ ಮೂವತ್ತು ವರ್ಷಗಳಿಂದ ಭಾರತ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಖಾಯಂ ಸದಸ್ಯತ್ವ ಪಡೆದುಕೊಳ್ಳಲು




ಹರಸಾಹಸ ಪಡುತ್ತಿದೆಯಾದರೂ ಇದುವರೆಗೆ ಫಲಿಸಿಲ್ಲ. ಭಾರತ ಇದುವರೆಗೆ ಅಣ್ವಸ್ತ್ರ ಪ್ರಸರಣ ನಿರೋಧ ಒಪ್ಪಂದ (ಎನ್‌ಪಿಟಿ) ಹಾಗೂ ಎಲ್ಲ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗ ನಿಷೇಧ ಒಪ್ಪಂದ (ಸಿಟಿಬಿಟಿ)ಗಳಿಗೆ ಸಹಿ ಹಾಕಿಲ್ಲ. ಎನ್‌ಎಸ್‌ಜಿಯ ಎಲ್ಲ ಸದಸ್ಯ ರಾಷ್ಟ್ರಗಳೂ ಈ ಒಪ್ಪಂದಗಳಿಗೆ ಬದ್ಧರಾಗಿರುವುದು ಅಗತ್ಯ. ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ನಿಷೇಧ ಹಾಗೂ ನಾಶಗೊಳಿಸುವ ನಿಲುವಿಗೆ ಬದ್ಧವಾಗಿರುವ ಭಾರತ ಈ ಎರಡು ಒಪ್ಪಂದಗಳಿಗೂ ಸಹಿ ಹಾಕಲು ನಿರಾಕರಿಸಿದೆ ತಾತ್ವಿಕವಾಗಿ. ಅಲ್ಲದೆ ಚೀಣಾ ಭಾರತದ ಸದಸ್ಯತ್ವಕ್ಕೆ ಅಡ್ಡಗಾಲು ಹಾಕಿದೆ. ಎನ್‌ಎಸ್‌ಜಿ ಸದಸ್ಯತ್ವ ಭಾರತ ಪಡೆಯಲು ಎಲ್ಲ ಸದಸ್ಯ ರಾಷ್ಟ್ರಗಳ ಸಮ್ಮತಿ ಅಗತ್ಯ. ಸ್ವಿಟ್ಜರ್‌ಲೆಂಡ್, ಮೆಕ್ಸಿಕೋಗಳಿಗೆ ಭೇಟಿ ನೀಡಿದ ಪ್ರಧಾನಿ ಅವುಗಳ ಬೆಂಬಲ ಪಡೆದಿದ್ದಾರೆ. ಏನಿದ್ದರೂ ಸದ್ಯದ ಪರಿಸ್ಥಿತಿಯಲ್ಲಿ ಚೀಣಾದ ಸಮ್ಮತಿ ಸುಲಭವೇನಲ್ಲ. ಅಮೆರಿಕ–ಭಾರತ ಬಾಂಧವ್ಯದ ಬೆಸುಗೆ ಚೀಣಾದ ವಿರುದ್ಧವಾಗಿದೆ ಎಂಬ ಸಂದೇಹವೂ ಬಲವಾಗಿದೆ.

ಭಯೋತ್ಪಾದನೆ ವಿರುದ್ಧದ ಹೋರಾಟದಲ್ಲಿ ಅಮೆರಿಕ ಕೈಜೋಡಿಸಿದೆ. ನೇರವಾಗಿ ಪಾಕಿಸ್ತಾನವನ್ನು ಹೆಸರಿಸದಿದ್ದರೂ ಅಮೆರಿಕದ ಕಾಂಗ್ರೆಸ್ಸನ್ನು ಉದ್ದೇಶಿಸಿ ಮಾತನಾಡುವಾಗ ಪರೋಕ್ಷವಾಗಿ ಮೋದಿ ಪ್ರಸ್ತಾಪ ಮಾಡಿದ್ದಾರೆ. ಅಮೆರಿಕದೊಂದಿಗೆ ನೂತನ ಸಹಯೋಗದ ದೆಸೆಯಿಂದ ಪಾಕಿಸ್ತಾನವನ್ನು ಪ್ರತ್ಯೇಕಿಸುವ ಗುರಿ ತಲುಪುವುದು ಕಷ್ಟ. ಏಕೆಂದರೆ ಕಳೆದ ಆರು ದಶಕಗಳಿಂದ ಪಾಕಿಸ್ತಾನ ಅಮೆರಿಕದ ನೆಚ್ಚಿನ ಮಿತ್ರರಾಷ್ಟ್ರಗಳಲ್ಲಿ ಒಂದು ಈ ಉಪಖಂಡದಲ್ಲಿ. ಎರಡೂ ದೇಶಗಳ ಮಧ್ಯೆ, ಎಂದರೆ ಅಮೆರಿಕ–ಪಾಕಿಸ್ತಾನಗಳ ಮಧ್ಯೆ ಏನೇ ವಿರಸವಿದ್ದರೂ ಅದು ತಾತ್ಕಾಲಿಕ. ಅಮೆರಿಕ ಯಾವತ್ತೂ ಪಾಕಿಸ್ತಾನಕ್ಕೆ ರಕ್ಷಣಾ ಸಾಮಗ್ರಿಗಳನ್ನು ಒದಗಿಸುತ್ತ ಬಂದಿದೆ. ಈಚೆಗೆ ಅಮೆರಿಕದ ಕಾಂಗ್ರೆಸ್ ಸದನ ಪಾಕಿಸ್ತಾನಕ್ಕೆ ಎಫ್ ೬೬ ವಿಮಾನಗಳ ನೀಡಿಕೆಗೆ ಅಡ್ಡಿಪಡಿಸಿದ್ದರೂ ಅದು ಖಾಯಂ ನಿಷೇಧವೇನಲ್ಲ. ಈ ವರ್ಷ ಅಮೆರಿಕದ ಅಧ್ಯಕ್ಷ ಒಬಾಮಾರ ಅವಧಿ ಮುಗಿಯಲಿದೆ. ಮುಂದಿನ ಅಧ್ಯಕ್ಷರು ಅದೇ ಧೋರಣೆ ಅನುಸರಿಸಿಯಾರೆಂಬ ಖಾತ್ರಿ ಏನಿಲ್ಲ. ಹಾಗಾಗಿ, ಏನೋ ಸಾಧಿಸಿರುವ ಭಾವನೆ ಸರಿಯಲ್ಲ. ಭಾರತದ ಮಾರುಕಟ್ಟೆ ಅಮೆರಿಕಕ್ಕೆ ಅಗತ್ಯ. ಈಗಾಗಲೇ ಭಾರತ ಅದಕ್ಕೆ ಮುಕ್ತವಾದ ಅವಕಾಶ ಕಲ್ಪಿಸಿದೆ. ಸಾಕಷ್ಟು ಬಂಡವಾಳವೂ ಹರಿದಿದೆ. ಸಂಬಂಧಗಳು ಅಷ್ಟಕ್ಕೇ ಸೀಮಿತವಾಗಿದ್ದರೆ ಲೇಸಾಗುತ್ತಿತ್ತು.

ನಾಗರಿಕ ನ್ಯೂಕ್ಲಿಯರ್ ಸಹಕಾರ ಒಪ್ಪಂದಕ್ಕೆ ಭಾರತ–ಅಮೆರಿಕ ಸಹಿ ಹಾಕಿ ಒಂದು ದಶಕವೇ ಕಳೆದಿದೆ. ಇದು ದೇಶದಲ್ಲಿ ಸಾಕಷ್ಟು ವಿವಾದಗಳನ್ನೂ ಸೃಷ್ಟಿಸಿತ್ತು ಎನ್ನುವುದನ್ನು ಮರೆಯದಿರೋಣ. ಅಮೆರಿಕದ ವೆಸ್ಟಿಂಗೋ ಹೌಸ್ ಸಂಸ್ಥೆ ಭಾರತದಲ್ಲಿ ಆರು ನ್ಯೂಕ್ಲಿಯರ್ ರಿಯಾಕ್ಟರುಗಳನ್ನು ಸ್ಥಾಪಿಸಲು ನಿಗದಿಯಾಗಿದೆ. ಮೊದಲು ಅವು ಗುಜರಾತ್‌ನಲ್ಲಿ ನಿರ್ಮಾಣವಾಗುವುದೆಂದು ನಿರ್ಧಾರವಾಗಿತ್ತು. ಈಗ ಅದು ಬದಲಾಗಿ ಆಂಧ್ರಪ್ರದೇಶದಲ್ಲಿ ಸ್ಥಾಪನೆಯಾಗುವುದೆಂದು ಹೇಳಲಾಗಿದೆ. ಮುಂದಿನ ವರ್ಷ ಜೂನ್ ತಿಂಗಳಲ್ಲಿ ಈ ಯೋಜನೆಗೆ ಹಣಕಾಸು ವ್ಯವಸ್ಥೆಯ ಕುರಿತು ಒಪ್ಪಂದವಾಗಲಿದೆ ಅಮೆರಿಕದ ಎಕ್ಸಿಮ್ ಬ್ಯಾಂಕ್‌ನೊಂದಿಗೆ. ಹಾಗೆಯೇ ಆಂಧ್ರಪ್ರದೇಶದಲ್ಲಿ ಎಲ್ಲೆಲ್ಲಿ ಈ ರಿಯಾಕ್ಟರುಗಳು ಸ್ಥಾಪನೆಯಾಗಲಿವೆ ಎಂಬುದರ ವಿವರವೂ ಇಲ್ಲ. ಇನ್ನೂ ಸಮಗ್ರವಾದ ವಿವರಗಳ ಒಪ್ಪಂದ ಆಗುವವರೆಗೆ ನಿರ್ಮಾಣ ಕಾರ್ಯ ಆರಂಭವಾಗುವುದಿಲ್ಲ. ಭಾರತಕ್ಕೆ ಒದಗಿಸಲಿರುವ ರಿಯಾಕ್ಟರುಗಳೂ ಹಳೆಯ ತಂತ್ರಜ್ಞಾನದ್ದಾಗಿವೆ ಎಂಬ ದೂರೂ ಇದೆ, ಅಲ್ಲದೆ ಅವು ದುಬಾರಿಯದೂ ಆಗಿರುತ್ತವೆ. ಒಟ್ಟಿನಲ್ಲಿ ಭಾರತ–ಅಮೆರಿಕ ಬಾಂಧವ್ಯದಲ್ಲಿ ಹೊಸ ಯುಗಕ್ಕೆ ನಾಂದಿ ಹಾಕಿದ್ದಾರೆ. ಇದರ ಸಾಧಕ–ಬಾಧಕಗಳನ್ನು ನಿರೀಕ್ಷಿಸಬೇಕಾಗಿದೆ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಬುದ್ಧ ಕೂತು ತಪಸ್ಸು ಮಾಡಿದ್ದು, ಅರಿವು ಪಡೆದದ್ದು ಮರದ ಕೆಳಗೇನೇ! ಋಷಿಮುನಿಗಳು ತಪಗೈದು, ಸಾಧನೆ ಮಾಡಲು ಮೊರೆಹೋಗ್ತಾ ಇದ್ದದ್ದೂ ಈ ಮರಗಳಿಗೇನೇ. ಶಾಂತವಾದ ವಾತಾವರಣ, ಪಶುಪಕ್ಷಿಗಳಿಗೆ ಆಸರೆ, ಆಹಾರ, ಮನುಷ್ಯನಿಗೆ ನೆಮ್ಮದಿ ಒದಗಿಸೋದು ಮರಗಳೇ. ನಮ್ಮ ಧರ್ಮಗಳಲ್ಲಿ ಕೂಡ ಮರಗಳಿಗೆ ಪವಿತ್ರವಾದ ಸ್ಥಾನ ಕೊಡಲಾಗಿದೆ. ಮನುಷ್ಯರಾದ ನಾವೆಲ್ಲ ಹಬ್ಬಹುಣ್ಣಿಮೆಗಳಲ್ಲಿ ಮರಗಿಡಗಳನ್ನು ಭಕ್ತಿಯಿಂದ ಪೂಜಿಸ್ತೀವಿ. ಅದಕ್ಕೇ, ಮರಗಳನ್ನು ಕಡಿಯದೇ ಇರೋಣ. ಮರವೆಂದರೆ ಬರಿಯ ಮರವಲ್ಲ. ಅದು ಬದುಕಿನ ಜೀವಾಳ. ಉಸಿರಿನ ಮೂಲ.

# ವೆಂಕಟಪ್ಪನ ಮರ

ಸರಸ್ವತಿ ಶ್ರೀನಿವಾಸರಾಜು

ವೆಂಕಟಪ್ಪನನ್ನು ಜನರು ಮೊದಲು ವೆಂಕ ಎಂದು ಕರೆದು, ನಂತರ ವೆಂಕಟಪ್ಪ ಎಂದು ಬದಲು ಮಾಡಿ ನಂತರ ವೆಂಕಟಪ್ಪನವರು ಆಗಿ ಈಗ ಮತ್ತೆ ವೆಂಕನಾಗಿದ್ದಾನೆ. ಇದಕ್ಕೆಲ್ಲಾ ಮುಖ್ಯ ಕಾರಣ ಅವನ ಏಳಿಗೆಯ ಮಟ್ಟ ಅನ್ನಿಸುತ್ತದೆ. ಇದಕ್ಕೆಲ್ಲಾ ಜನರೇ ಕಾರಣ.

ವೆಂಕಟಪ್ಪನ ಆಸ್ತಿ ಅಂದರೆ ಅವನು ಬೆಳೆಸಿದ ಅತ್ತಿ ಹಣ್ಣಿನ ಮರ. ಅವನ ಜೀವನ ಸಂಗಾತಿಯೆಂದರೆ ಒಂದು ಕಂದು ನಾಯಿ. ಅದು ಯಾವಾಗಲೂ ಅವನ ಪಕ್ಕದಲ್ಲಿಯೇ ಮಲಗಿರುತ್ತದೆ. ಆದರೆ ಅದು ಮೂತ್ರ ವಿಸರ್ಜನೆ ಮಾಡಲು ಕಾಲು ಎತ್ತಿದರೆ ಸಾಕು, ಅದಕ್ಕೆ ಏಟು ತಪ್ಪಿದ್ದಲ್ಲ! ಕುಯ್ಯೋ ಅನ್ನುವ ಅದರ ಕೂಗಿಗೆ ಜನರು ಮನೆಯಿಂದ ಹೊರಗೆ ಬಂದು ನೋಡುವಂತೆ ಅದು ಕಿರುಚುತ್ತಿತ್ತು. ಆಗೆಲ್ಲಾ ಅಕ್ಕಪಕ್ಕದವರು ವೆಂಕನನ್ನು ಬೈದದ್ದೂ ಉಂಟು. ಆದರೆ ಅವನು ಅವರ ಮಾತಿಗೆ ತಲೆ ಕೆರೆದುಕೊಳ್ಳುತ್ತಾ ನಿಂತುಕೊಳ್ಳುತ್ತಿದ್ದ.

ಆ ಹತ್ತಿ ಹಣ್ಣಿನ ಮರ ಅಂದರೆ ಅವನಿಗೆ ಪ್ರಾಣ. ಅದರ ಸುತ್ತ ಬೇಲಿ ಹಾಕಿ ದಿನವೂ ನೀರು ಹಾಕುತ್ತಿದ್ದ. ಅದರ ಸೊಪ್ಪನ್ನು ಕುರಿ-ಮೇಕೆಗಳಿಗೆ ತಿನ್ನಲು ಕುಯ್ದುಕೊಂಡು ಹೋಗಲೂ ಬಿಡುತ್ತಿರಲಿಲ್ಲ. ಒಟ್ಟಿನಲ್ಲಿ ಆ ಜಾಗ ಬಿಟ್ಟು ಕದಲುತ್ತಲೇ ಇರಲಿಲ್ಲ. ಅವರಿವರು ಕೊಟ್ಟ ಊಟ, ತಿಂಡಿ ಮತ್ತು ನಿದ್ದೆಯೂ ಅಲ್ಲೇ. ಅವನ ನಾಯಿಯಂತೂ ಅಲ್ಲಿ ಯಾವತ್ತೂ ಹೊಲಸು ಮಾಡಿದ್ದಿಲ್ಲ. ಅಷ್ಟೊಂದು ಶಿಸ್ತಿನಿಂದ ಅದನ್ನು ಬೆಳೆಸಿದ್ದ ವೆಂಕ. ಬೆಳಗಿನ ಹೊತ್ತು ತನ್ನ ಸುತ್ತಲಿನ ಮನೆಗಳ ಮುಂದೆ ನೀರು, ರಂಗೋಲಿ ಹಾಕಿಕೊಟ್ಟು ಅವರನ್ನೆಲ್ಲಾ ಮೆಚ್ಚಿಸುತ್ತಿದ್ದ. ಆ ಬೀದಿಯ ಜನರು ದಿನನಿತ್ಯದ ಮತ್ತು ಹಬ್ಬದ ಊಟವನ್ನೂ ಕೊಡುತ್ತಿದ್ದರು.

ನಮ್ಮ ರಸ್ತೆಗಳು ಆಗಾಗ್ಗೆ ದುರಸ್ತಿಯಾಗುತ್ತಲೇ ಇರುವುದು ಎಲ್ಲರಿಗೂ ತಿಳಿದ ವಿಷಯವೇ. ವೆಂಕಟ ಅಂತ ಕಡೆಗಳಲ್ಲೇ ಕಾವಲು ಇರುತ್ತಿದ್ದ. ರಸ್ತೆ ಮಾಡುವಾಗ ಮರದ ಬೇರುಗಳು ಸಡಿಲವಾಗಿ ಅವಕ್ಕೆ ಎಲ್ಲಿ ತೊಂದರೆಯಾಗುವುದೋ ಎಂದು ಭಾವಿಸಿ ರಸ್ತೆ ರಿಪೇರಿ ಮಾಡುವವರ ಸ್ನೇಹ ಬೆಳೆಸಿಕೊಂಡು ಅಲ್ಲಿಯೇ ಕಾವಲಿದ್ದುಬಿಡುತ್ತಿದ್ದ. ಅವರ ಕಾಫಿ ತಿಂಡಿಗೂ ಒಮ್ಮೊಮ್ಮೆ ದುಡ್ಡು ಕೊಟ್ಟುಬಿಡುತ್ತಿದ್ದ. ಅವನಿಗೆ ಅದರಿಂದ ಎಂಥದ್ದೋ ಸಮಾಧಾನ.

ವೆಂಕನ ಮರ ಬೆಳೆದು ಹೆಮ್ಮರವೇ ಆಯಿತು. ಹಣ್ಣು ಬಿಡಲು ಆರಂಭವಾಯಿತು. ಆ ಹಣ್ಣುಗಳನ್ನು ಹಕ್ಕಿಗಳು ತಿಂದು ಅಕ್ಕ ಪಕ್ಕದ ಮನೆಯವರ ಹತ್ತಿರ ಗಲೀಜು ಮಾಡುತ್ತಿದ್ದವು. ಮನೆಗಳಿಗೆ ಸುಣ್ಣ ಬಣ್ಣ ಮಾಡಿದ್ದ ಜನರು ವೆಂಕನನ್ನು ಬಾಯಿಗೆ ಬಂದ ಹಾಗೆ ಬೈಯ್ದು, ಮರ ಕಡಿಯುವಂತೆ ಆಜ್ಞೆ ಹೊರಡಿಸಿದರು. ಇದನ್ನು ಕೇಳಿದ ವೆಂಕನಿಗೆ ಎದೆ ಧಸಕ್ಕೆಂದಿತು. ಈ ಬಡಪಾಯಿಯ ಮಾತು ಕೇಳುವವರು ಯಾರು? ಹಾಗೆಂದು ಅಳುತ್ತ ಕೂರದೆ ದೂರು ನೀಡಲು ಅರಣ್ಯ ಇಲಾಖೆಗೂ ಹೋದ. ಅವರು ಅವನನ್ನು ಬೈದು ಅಟ್ಟಿಬಿಟ್ಟರು.

ವೆಂಕ ತಾನೆ ಏನು ಮಾಡಲು ಸಾಧ್ಯವಿತ್ತು? ಅವನ ಸಹಚಾರಿ ನಾಯಿಗೆ ಎರಡು ಏಟು ಬಿಗಿದ. ಅದು ಕುಯ್ಯೋ ಎಂದು ಕೂಗಿಕೊಂಡು ಬೀದಿಯ ಜನರನ್ನು ಎಬ್ಬಿಸಿಬಿಟ್ಟಿತು. ಈ ಆಳುಮಗನನ್ನು ನಾವು ಹತ್ತಿರ ಸೇರಿಸಿದ್ದು ತಪ್ಪಾಯಿತು ಎಂದು ಜನ ಬೈದುಕೊಂಡರು.

ವೆಂಕ ತಾನು ನೆಟ್ಟ ಮರದ ಮೇಲೆ ಕೈಯಾಡಿಸಿ ಅಳುತ್ತಿದ್ದುದನ್ನು ನೋಡಿದ ಕಮಲಮ್ಮ, "ಯಾಕೋ ವೆಂಕಟ ಅಳುತ್ತಿದ್ದೀಯಾ?" ಎಂದು ಕೇಳಿದ್ದೇ ತಡ ಇನ್ನಷ್ಟು ಜೋರಾಗಿ ಅಳಲು ಪ್ರಾರಂಭಿಸಿದ. ಕಮಲಮ್ಮ ಆ ಬೀದಿಯ ಒಳ್ಳೆಯ ಹೆಂಗಸು. ಅಳಬೇಡವೆಂದು ಅವನನ್ನು ಸಮಾಧಾನಪಡಿಸಿದರು. ಆಕೆಗೆ ಅವನ ಅಳು ಅರ್ಥವಾಗಿತ್ತು. ಮೊನ್ನೆ ತಾನೆ ಮರ ಕಡಿಯುವ ಮಾತು ಬಂದುಹೋದದ್ದು ಗೊತ್ತಾಯಿತು. "ಅಲ್ಲೋ ವೆಂಕಾ, ಆ ಮರದ ಮೇಲೆ ನಿನಗೇಕೆ ಅಷ್ಟು ಆಸೆ? ಆ ಮರದ ಕೆಳಗೇನಾದರು ಹಣ ಹೂತಿಟ್ಟಿರುವೆಯಾ?" ಎಂದು ಕೇಳಿದರು. ಯಾವುದೋ ವಿಷಯವನ್ನು ಮುಚ್ಚಿಡುವಂತೆ ಕಂಡ ವೆಂಕ.




"ನಿನ್ನ ಮನಸ್ಸಲ್ಲಿ ಏನಿದೆ ಹೇಳು ವೆಂಕ" ಕಮಲಮ್ಮ ಪುಸಲಾಯಿಸಿದರು.

"ನನ್ನ ಮಗನ ದುಡ್ಡಿನಿಂದ ಈ ಮರ, ಈ ನಾಯಿ ಕೊಂಡು ತಂದಿದ್ದೇನೆ ಅಮ್ಮ" ಅಂದ.

"ಏನೂ, ನಿನಗೆ ಮದುವೆಯಾಗಿತ್ತಾ?" ಕಮಲಮ್ಮ ಅಚ್ಚರಿಯಿಂದ ಕೇಳಿದರು.

"ಹೌದು. ಮದುವೆಯಾಗಿದ್ದು ಸತ್ಯ. ಆಕೆ ನನ್ನ ಬಿಟ್ಟು ಯಾರದೋ ಜೊತೆ ಓಡಿಹೋದಳು. ಐದು ವರ್ಷದ ಮಗನನ್ನು ಸಾಕಿ ದೊಡ್ಡವನನ್ನಾಗಿ ಮಾಡಿದೆ. ನನಗಾದಷ್ಟು ಮಟ್ಟಿಗೆ ಓದಿಸಿದೆ. ಯಾವ ಕೆಲಸವೂ ಸಿಗದ ಕಾರಣ ಮಿಲಿಟರಿ ಸೇರಿದ. ನಂತರ ನನ್ನ ಖರ್ಚಿಗೂ ಹಣ ಕಳುಹಿಸುತ್ತಿದ್ದ. ನಂತರದ ದಿನಗಳಲ್ಲಿ ದುಡ್ಡು ಬರುವುದೂ ನಿಂತುಹೋಯಿತು. ಅವರಿವರನ್ನು ವಿಚಾರಿಸಿದಾಗ ಗೊತ್ತಾಯಿತು. ಅವನು ಬದುಕಿಲ್ಲ ಎಂಬುದು. ಬರಬೇಕಾದ ಪಿಂಚಣಿ ಹಣಕ್ಕೂ ಓಡಾಡಿಸಿದರು. ಸರಕಾರದಿಂದ ದುಡ್ಡು ಬರುವುದು ಅಷ್ಟು ಸುಲಭವಲ್ಲ ನೋಡಿ. ಅವನು ಕಳುಹಿಸಿದ ದುಡ್ಡಿನಿಂದ ಒಂದು ಜೊತೆ ಚಪ್ಪಲಿ ತೆಗೆದುಕೊಂಡು ಊರು ಬಿಟ್ಟು ಬರುವಾಗ ಈ ನಾಯಿ, ಈ ಸಸಿಯನ್ನು ತಂದು ಬೆಳೆಸಿದೆ. ಆಗ ನಿಮ್ಮ ಯಾರ ಮನೆಗಳೂ ಇಲ್ಲಿರಲಿಲ್ಲ. ಮಗನ ದುಡ್ಡಿನಿಂದ ಬೆಳೆಸಿದ ಈ ಸಸಿ ನನ್ನ ಮಗನ ಹಾಗೆ. ಅದಕ್ಕೆ ನನಗೆ ಅದರ ಮೇಲೆ ಅಷ್ಟು ಪ್ರೀತಿ" ಎಂದ.

"...ಅಂದರೆ ಪಿಂಚಣಿ ದುಡ್ಡು ಬರಲಿಲ್ಲವ? ನಮ್ಮ ಮನೆಯವರಿಗೆ ಹೇಳುತ್ತೇನೆ. ಅವರು ನಿನಗೆ ಸಹಾಯ ಮಾಡುತ್ತಾರೆ. ನಿನ್ನ ಮರಕ್ಕೆ ಏನಾದರು ಮಾಡುವಾ. ಈಗ ನಿದ್ದೆ ಮಾಡು" ಎಂದು ಸಮಾಧಾನಿಸಿದರು ಕಮಲಮ್ಮ.

ಕಮಲಮ್ಮ ಎಲ್ಲರ ಕಷ್ಟ-ಸುಖಕ್ಕೆ ಆಗುವ ಹೆಂಗಸು. ಮಾರನೇ ದಿನವೇ ಆ ರಸ್ತೆಯ ಜನರನ್ನು ಸೇರಿಸಿ ಸಮಸ್ಯೆ ತಿಳಿಸಿ ಬಹಳ ವರ್ಷಗಳಿಂದ ವೆಂಕ ಇದೇ ರಸ್ತೆಯಲ್ಲಿ ಇರುವುದರಿಂದ ಮರ ಕಡಿಯುವ ಯೋಚನೆ ಬಿಟ್ಟುಬಿಡುವಂತೆ ಎಲ್ಲರಲ್ಲೂ ವಿನಂತಿಸಿಕೊಂಡರು. ಆಕೆಯ ಮಾತಿಗೆ ಎಲ್ಲರೂ ಒಪ್ಪಬೇಕಾಯಿತು.

ಅದೇ ಮರ ಇದೀಗ ನೋಡುವವರ ಕಣ್ಣು ಕುಕ್ಕುವ ರೀತಿ ಬೆಳೆದು ನಿಂತಿದೆ. ಇದೆಲ್ಲಾ ಆದ ನಂತರ ವಿದ್ಯುತ್ ಇಲಾಖೆಯವರು ಆ ಮರ ಕರೆಂಟಿನ ತಂತಿಗೆ ತಗುಲಿ ಶಾಕ್ ಹೊಡೆಯುತ್ತದೆ ಎಂದು ಬೈದು, ಅದರ ತುದಿಯನ್ನು ಮಾತ್ರ ಕತ್ತರಿಸಿದರು. ವೆಂಕ ಹಾಗೆ ಮಾಡಿದ್ದನ್ನು ಒಪ್ಪಲೇಬೇಕಾಯಿತು. ಆ ದಿನದಿಂದ ವೆಂಕ ಇಡೀ ರಸ್ತೆಗೆ ಗೆಳೆಯನಾದ, ನಂತರ ವೆಂಕಣ್ಣನಾದ.

ಒಮ್ಮೆ ಕಮಲಮ್ಮನ ತಮ್ಮ ಇಂಗ್ಲೆಂಡಿನಿಂದ ಬಂದರು. ವೆಂಕಣ್ಣನ ಹಾಗೂ ಅವನ ಮರದ ಕತೆಯನ್ನು ಅಕ್ಕನ ಬಾಯಲ್ಲಿ ಕೇಳಿ, "ನಮ್ಮಲ್ಲಿ ಮರ, ಗಿಡ ಪ್ರಾಣಿ, ಪಕ್ಷಿಗಳಿಗೆ ಯಾರೂ ತೊಂದರೆ ಕೊಡುವುದಿಲ್ಲ. ಒಂದು ಸಲ ನಮ್ಮ ಮನೆಯಲ್ಲಿ ಟಿವಿ ಬರುತ್ತಿರಲಿಲ್ಲ ಅಂತ ದೂರು ಕೊಟ್ಟಿದಕ್ಕೆ ವಿಚಾರಿಸಲು ಬಂದವರು ಮರದಲ್ಲಿ ಹಕ್ಕಿಗಳು ಗೂಡು ಕಟ್ಟಿರುವ ಕಾರಣ, ಪ್ರಸಾರದಲ್ಲಿ ತಡೆಯಾಗಿದೆ. ಆದರೆ ಅದಕ್ಕೋಸ್ಕರ ಮರದ ಟೊಂಗೆಯನ್ನು ಕಡಿಯುವುದಿಲ್ಲ ಎಂದು ಹೇಳಿ ಹಾಗೇ ತಿರುಗಿ ಹೋದರು ಎಂದು ನೆನಪಿಸಿಕೊಂಡರು. ಅದನ್ನು ಕೇಳಿದ ಕಮಲಮ್ಮನಿಗೂ ವೆಂಕಣ್ಣನಿಗೂ ಆಶ್ಚರ್ಯವಾಯಿತು. "ನಮ್ಮ ದೇಶ ಆ ರೀತಿ ಯಾವಾಗ ಆಗ್ತೈತೆ ಅಮ್ಮಾವ್ರೇ?" ಎಂದು ಕಮಲಮ್ಮನಿಗೆ ಪ್ರಶ್ನೆ ಹಾಕಿದ ವೆಂಕಣ್ಣ.

ಅಷ್ಟೇ ಅಲ್ಲ, ವೆಂಕಟಪ್ಪನ ಮರದ ಕತೆಯ ಬಗ್ಗೆ ಹೇಳುವುದು ಬೇಕಾದಷ್ಟಿದೆ. ಸಹಸ್ರಾರು ವರ್ಷಗಳ ಹಿಂದೆ ಭೂಮಿಯ ಮೇಲೆ ಜನ್ಮ ತಾಳಿದ ಪ್ರಾಚೀನರು ಮೈಮುಚ್ಚಿಕೊಳ್ಳುವುದಕ್ಕೆ ಮರದ ಎಲೆ, ತೊಗಟೆಗಳನ್ನು ಬಳಸುತ್ತಿದ್ದರು. ಹಣ್ಣು ಹಂಪಲುಗಳನ್ನು ತಿಂದು ಬದುಕಿದ್ದರು. ಅರಣ್ಯ ಸಂಪತ್ತು ಹೆಚ್ಚಿದಷ್ಟೂ, ಅದು ಪ್ರಾಣಿಪಕ್ಷಿಗಳಿಗೆ ಆಸರೆಯಾಗುತ್ತದೆ, ಅವು ತಮ್ಮ ನಿತ್ಯದ ಆಹಾರಕ್ಕಾಗಿ ಮರಗಳನ್ನೇ ಆಶ್ರಯಿಸುತ್ತವೆ. ಮರಗಿಡಗಳನ್ನು ಕಡಿದರೆ ಮಳೆ ಕಡಿಮೆಯಾಗುತ್ತದೆ, ನಮಗೆ ಸಿಗುವ ಜೀವಾನಿಲ ಆಮ್ಲಜನಕ ಸಿಗುವುದು ಕೂಡ ಮರಗಳಿಂದಲೇ ಅಲ್ಲವೇ? ಒಳ್ಳೆಯ ಗಾಳಿ ಮಾತ್ರವಲ್ಲ, ಅನೇಕ ಗಿಡಮರಗಳು ಔಷಧೀಯ ಸಸ್ಯಗಳಾಗಿಯೂ ನಮ್ಮ ಆರೋಗ್ಯವನ್ನು ಕಾಪಾಡುವಲ್ಲಿ ಮಹತ್ತರ ಪಾತ್ರವಹಿಸುತ್ತವೆ. ಅಪರೂಪದ ಗಿಡಮೂಲಿಕೆಗಳ ಆಗರವೆಂದರೂ ಸರಿಯೇ. ಮಾತ್ರವಲ್ಲ ಮನೆ ಕಟ್ಟುವಾಗ, ಬಟ್ಟೆ ತಯಾರಿಸಲು, ಪೀಠೋಪಕರಣಗಳನ್ನು ಮಾಡಲು, ಇನ್ನೂ ಅನೇಕ ಕೆಲಸಗಳಿಗೆ ಮನುಷ್ಯ ಮರಗಳನ್ನು ಆಶ್ರಯಿಸಿದ್ದಾನೆ.

"ವೆಂಕಟಪ್ಪನೊಬ್ಬನೇ ಅಲ್ಲ, ಒಂದು ಸಣ್ಣ ಸೀಸದ ಕಡ್ಡಿಯೋ, ಅಳಿಸುವ ರಬ್ಬರೋ, ಅಮ್ಮನ ಅಡುಗೆ ಮನೆಯ ಮಸಾಲೆ ಪದಾರ್ಥವೋ, ಎಲ್ಲದಕ್ಕೂ ಮರಗಳು ಮೂಲಧಾತುವಾಗಿ ನಿಂತಿವೆ" ಎಂದು ಇಂಗ್ಲೆಂಡಿನಿಂದ ಬಂದವರು ಹೇಳಿದರು.

"ವೆಂಕಟಪ್ಪ ಅದಕ್ಕೆ, "ಅದೆಲ್ಲ ಸರಿ ಸೋಮಿ, ಅದೇನೋ ಅಂದ್ರಲ್ಲ, ಗಾಳಿ ಅದೂ ಇದೂ ಅಂತ. ಅದು ಹೆಂಗೆ" ಅಂತ ಕುತೂಹಲ ತೋರಿದ.

"ಹೌದು ವೆಂಕಟಪ್ಪಾ, ನಾವು ಬಿಡುವ ಕೆಟ್ಟ ಗಾಳಿ ಅಂದರೆ ಕಾರ್ಬನ್ ಡೈಆಕ್ಸೈಡ್‌ನ ತೊಗೊಂಡು, ಒಳ್ಳೆಯ ಗಾಳಿ ಅಂದರೆ ಆಮ್ಲಜನಕವನ್ನ ನಮಗೆ ಕೊಡೋದೇ ಮರಗಳು. ಅದಕ್ಕೇನೇ ಮನೆಗಳ ಹತ್ರ ಮರಗಿಡಗಳನ್ನ ಬೆಳೆಸಿದ್ರೆ ನಮಗೂ ಒಳ್ಳೇದು, ಕಣ್ಣಿಗೂ ತಂಪು. ಹಿಂದೆ ಅಶೋಕ ಚಕ್ರವರ್ತಿಯ ಕಾಲದಲ್ಲಿ ಸಾಲಾಗಿ ಮರಗಿಡಗಳನ್ನ ಬೆಳೆಸ್ತಾ ಇರಲಿಲ್ಲವೇ?" ಎಂದು ವಿವರಿಸಿದರು.

ಅದಕ್ಕೆ ವೆಂಕಟಪ್ಪನಿಗೆ ಆದ ಆನಂದ ಅಷ್ಟಿಷ್ಟಲ್ಲ. "ಅಪ್ಪಾವ್ರೇ, ಇಷ್ಟೆಲ್ಲಾ, ಹೇಳಿ ಈ ಮರಗೋಳ ಮೇಲೆ ನನ್ ಪಿರೂತಿ ವಸಿ ಹೆಚ್ಚೇ ಆಗಂಗೆ ಮಾಡಿದೀರಾ. ನಮ್ಮ ಎಷ್ಟೆಲ್ಲಾ ರೋಗಗಳಿಗೆ ಮರ ಮದ್ದಾಗಿ ಉಪಯೋಗಕ್ಕೆ ಬತ್ತೈತೆ" ಅನ್ನುತ್ತ ಕಣ್ಣೀರು ತುಂಬಿಕೊಂಡ.

"ನಾನು ಹೇಳೋದೇನು ಮಹಾ ವೆಂಕ್ಟಪ್ಪಾ, ಇಲ್ಲೇ ನಮ್ಮ ನಾಡಿನ, ಇಲ್ಲೇ ಇರೋ ಸಾಲುಮರದ ತಿಮ್ಮಕ್ಕ ನಮಗೆಲ್ಲಾ ಆದರ್ಶಪ್ರಾಯಳಲ್ಲವಾ? ಆಕೆ ಒಬ್ಬಳೇ ಸಾಕು ನಮ್ಗೆಲ್ಲಾ ಮಾದರಿ ಆಗಿ ಇರೋಕೆ" ಎಂದು ಅವನ ಹಿಗ್ಗನ್ನು ಹೆಚ್ಚಿಸಿದರು.

ಬುದ್ಧ ಕೂತು ತಪಸ್ಸು ಮಾಡಿದ್ದು, ಅರಿವು ಪಡೆದದ್ದು ಮರದ ಕೆಳಗೇನೇ !

ಋಷಿಮುನಿಗಳು ತಪಗೈದು, ಸಾಧನೆ ಮಾಡಲು ಮೊರೆಹೋಗ್ತಾ ಇದ್ದದ್ದೂ ಈ ಮರಗಳಿಗೇನೇ. ಶಾಂತವಾದ ವಾತಾವರಣ, ಪಶುಪಕ್ಷಿಗಳಿಗೆ ಆಸರೆ, ಆಹಾರ, ಮನುಷ್ಯನಿಗೆ ನೆಮ್ಮದಿ ಒದಗಿಸೋದು ಮರಗಳೇ. ನಮ್ಮ ಧರ್ಮಗಳಲ್ಲಿ ಕೂಡ ಮರಗಳಿಗೆ ಪವಿತ್ರವಾದ ಸ್ಥಾನ ಕೊಡಲಾಗಿದೆ. ಮನುಷ್ಯರಾದ ನಾವೆಲ್ಲ ಹಬ್ಬಹುಣ್ಣಿಮೆಗಳಲ್ಲಿ ಮರಗಿಡಗಳನ್ನು ಭಕ್ತಿಯಿಂದ ಪೂಜಿಸ್ತೀವಿ.

ಅದಕ್ಕೇ, ಮರಗಳನ್ನು ಕಡಿಯದೇ ಇರೋಣ. ಮರವೆಂದರೆ ಬರಿಯ ಮರವಲ್ಲ. ಅದು ಬದುಕಿನ ಜೀವಾಳ. ಉಸಿರಿನ ಮೂಲ.

**ಸರಸ್ವತಿ ಶ್ರೀನಿವಾಸರಾಜು**
'ಚಿರಂಜೀವಿ', ಮನೆ ಸಂಖ್ಯೆ : ೨೧/೮
ಹಳೆ ಈಜುಕೊಳದ ರಸ್ತೆ, ಕೋದಂಡರಾಮಪುರ
ಬೆಂಗಳೂರು – ೫೬೦ ೦೦೩




ನಾನು ಓದಿದ ಪುಸ್ತಕ

ಡಾ॥ ರಂಗಾರೆಡ್ಡಿ ಕೋಡಿರಾಂಪುರ

# ವಚನ ವೈಭವ

ಲೇಖಕರು
**ಶಂಕರ ಮ. ಪಾಟೀಲ**
ಪುಟಗಳು : xvi+೨೫೨=೨೬೮ ಬೆಲೆ : ರೂ. ೧೫೦/–
ಪ್ರಕಾಶಕರು
**ಸಂಗಮ ಪ್ರಕಾಶನ**
ನಂ. ೩೩, ಜಿ.೨, ಪ್ರಿಯದರ್ಶಿನಿ ಸೊಸೈಟಿ, ರಂಕಾಳಾ ಪಾರ್ಕ್
ಅಂಬಾಯಿ ಟ್ಯಾಂಕ್, ಕೊಲ್ಹಾಪುರ – ೪೧೬ ೦೧೦, ಮಹಾರಾಷ್ಟ್ರ

'ವಚನ ವೈಭವ' ಎಂಬ ಭಿನ್ನ ಧಾಟಿಯ ಕೃತಿಯನ್ನು ಕನ್ನಡ ಸಂಸ್ಕೃತಿಗೆ ನೀಡಿದವರು ಶಂಕರ ಮ. ಪಾಟೀಲ ಎಂಬ ಹೊರನಾಡ ಕನ್ನಡಿಗರು. ಒಳನಾಡಿನ ಕನ್ನಡಿಗರಿಗಿಂತ ತುಸು ಹೆಚ್ಚಾಗಿಯೇ ನಾಡು–ನುಡಿ–ಸಂಸ್ಕೃತಿ–ಜನಜೀವನದ ಬಗ್ಗೆ ಯೋಚಿಸುವ ಚಿಂತನಶೀಲ ವ್ಯಕ್ತಿಗಳಲ್ಲಿ ಇವರು ಪ್ರಮುಖರಾಗಿದ್ದಾರೆ. ಕರ್ನಾಟಕದ ವಿಜಾಪುರದಲ್ಲಿ ೧೯೨೪ರ ಜನವರಿ ೨೬ರಂದು ಜನಿಸಿದ ಶಂಕರ ಪಾಟೀಲರು ತಮ್ಮ ಪದವಿ ವಿದ್ಯಾಭ್ಯಾಸದ ನಂತರ ಉದ್ಯೋಗದ ಸಲುವಾಗಿ ನೆಲೆ ನಿಂತದ್ದು ಮುಂಬಯಿಯಲ್ಲಿ. ಮಹಾರಾಷ್ಟ್ರ ಸರಕಾರ ಹಾಗೂ ಕರ್ನಾಟಕ ಸರಕಾರಗಳೆರಡರಲ್ಲೂ ಸೇವೆ ಸಲ್ಲಿಸಿದ ಪಾಟೀಲರಿಗೆ ಕನ್ನಡ ಹಾಗೂ ಮರಾಠಿ ಸಂಸ್ಕೃತಿಗಳೆರಡೂ ಕರತಲಾಮಲಕ. ಹೀಗಾಗಿ ಭಾಷೆ, ಸಂಸ್ಕೃತಿ, ಸಾಹಿತ್ಯ ಹಾಗೂ ತತ್ವಶಾಸ್ತ್ರಗಳಲ್ಲಿ ತೌಲನಿಕ ಅಧ್ಯಯನ ಮಾಡಲು ಪಾಟೀಲರಿಗೆ ಅವಕಾಶಗಳು ತಾನೇ ತಾನಾಗಿ ಒದಗಿಬಂದವು. ಜೊತೆಗೆ, ೨೦೦೧ರಿಂದ ೨೦೧೧ರವರೆಗೆ 'ಸಂಗಮ' ಎಂಬ ತ್ರೈಭಾಷಿಕ ತ್ರೈಮಾಸಿಕದ ಸಂಪಾದಕರಾಗಿ ಮತ್ತು 'ಬಸವಪಥ' ಎಂಬ ಮರಾಠಿ ಪ್ರಪ್ರಥಮ ಸಂಚಿಕೆಯ ಸಂಪಾದಕರಾಗಿ ಕೆಲಸ ಮಾಡಿದ್ದೂ ಕೂಡ ಇವರಿಗೆ ತೌಲನಿಕ ಅಧ್ಯಯನಕ್ಕೆ ಸಹಾಯ ಮಾಡಿತು. ಇಂಥ ಬಹುಭಾಷಾ ವ್ಯಕ್ತಿ, ಅಧ್ಯಯನಶೀಲ ಹಾಗೂ ಬಸವತತ್ವದ ರೂವಾರಿ ಪಾಟೀಲರು ತಾವು ಪತ್ರಿಕಾ ಸಂಪಾದಕರಾಗಿ ಬರೆದ ಮತ್ತು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಒಟ್ಟು ೪೫ ಲೇಖನಗಳನ್ನು ತಾವೇ ಪ್ರಕಟಿಸಿದ್ದಾರೆ.

ಇಲ್ಲಿನ ಬಹುಪಾಲು ಲೇಖನಗಳಲ್ಲಿ ಬಸವಣ್ಣನವರ ತತ್ವಗಳನ್ನು, ಆದರ್ಶಗಳನ್ನು, ಸಾಮಾಜಿಕ ಸೇವಾಕಾರ್ಯಗಳನ್ನು ಎತ್ತಿಹಿಡಿಯದ ಬಸವ ಅನುಯಾಯಿಗಳನ್ನೆ ವಿಮರ್ಶೆಗೆ ಒಡ್ಡುತ್ತಾರೆ; ಒಮ್ಮೊಮ್ಮೆ ಅವರ ಬಗ್ಗೆ ವ್ಯಂಗ್ಯವಾಗಿ, ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತಾರೆ. ಯಾವ ಉದ್ದೇಶಕ್ಕೆ ಬಸವತತ್ವ ಇಲ್ಲಿ ಉದಿಸಿಬಂತೋ ಅದನ್ನು ಮರೆತು ವಿರುದ್ಧ ದಿಕ್ಕಿನಲ್ಲಿ ಆ ತತ್ವ ಚಲಿಸುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸುತ್ತಾರೆ. ಬಹುತೇಕ ಮಠಮಾನ್ಯಗಳು ರಾಜಕೀಯ ಅಧಿಕಾರದ ಬೆನ್ನುಬಿದ್ದಿರುವುದನ್ನು ಕಂಡು ವ್ಯಗ್ರರಾಗಿ 'ಜಗದ್ಗುರುಗಳು ಇನ್ನೂ ಬೇಕೆ ?' ಎಂದು ಖಾರವಾಗಿ ಬರೆಯುತ್ತಾರೆ.

"ವೈಚಾರಿಕ ಆತ್ಮನಿಷ್ಠೆ ಬಸವಣ್ಣನಿಗೆ ಇಷ್ಟ ; ಉಳಿದುದೆಲ್ಲ ಬಸವದ್ರೋಹ" (ಪುಟ ೧೬೦) ಎಂಬ ತಾತ್ವಿಕತೆಯ ಹಿನ್ನೆಲೆಯಲ್ಲಿ ಇಲ್ಲಿನ ಬಹುಪಾಲು ಲೇಖನಗಳಿವೆ. ಮೂರು ಭಾಗದಲ್ಲಿ ಹರಡಿಕೊಂಡಿರುವ ಈ ಲೇಖನಗಳ ಭಾಗ – ೧ರಲ್ಲಿ ವಚನಕಾರರು, ವಚನಗಳು, ವಿವೇಚನೆ; ಭಾಗ – ೨ರಲ್ಲಿ ವಚನ ವೈಚಾರಿಕತೆಯ ಹಿನ್ನೆಲೆಯಲ್ಲಿ ಸಮಕಾಲೀನ ಚಿಂತನೆಗಳು; ಭಾಗ –೩ರಲ್ಲಿ ಸಂಕೀರ್ಣ ಎಂಬ ಒಳವಿಭಾಗ ಮಾಡಿಕೊಳ್ಳಲಾಗಿದೆ. ಭಾಗ ೧ರ ವಚನಕಾರರು, ವಚನಗಳು : ವಿವೇಚನೆ ಎಂಬ ಒಳವಿಭಾಗದಲ್ಲಿ ವಚನಕಾರ ಅಲ್ಲಮನ ಬಗ್ಗೆ, ಸಿದ್ಧರಾಮನ ಬಗ್ಗೆ, ಕಾಯಕವೀರರಾದ ಎರಡು ಜೋಡಿ ಮಾರಯ್ಯ ದಂಪತಿಗಳ ಬಗ್ಗೆ, ದಲಿತ ವಚನಕಾರರ ಬಗ್ಗೆ ಗಂಭೀರವಾದ ಅಧ್ಯಯನಗಳಿವೆ. ಈ ಭಾಗದಲ್ಲಿ ಬರುವ 'ಬಸವ ಕೊಟ್ಟ ದಿಟ್ಟ ದನಿ' ಚಿಕ್ಕದಾದರೂ ಸಾಂಸ್ಕೃತಿಕವಾಗಿ, ವೈಚಾರಿಕವಾಗಿ ತುಂಬ ಮಹತ್ವವಿರುವ ಲೇಖನ. ಇಂದಿನ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ

"ದೇಹವನ್ನೇ ದೇಗುಲವನ್ನಾಗಿಸುವುದರ ಮೂಲಕ ಮಂದಿರ ಸಂಸ್ಕೃತಿಯನ್ನೇ ತಳ್ಳಿಹಾಕಿ; ಕಾಯಕವನ್ನೇ ಕೈಲಾಸವೆಂದು ಪರಿಗಣಿಸುವ ಶ್ರಮಜೀವಿಗಳಿಗೆ ಹಿರಿಮೆಯನ್ನು ಸಲ್ಲಿಸುವುದರ ಮೂಲಕ ಆರ್ಥಿಕ ಶೋಷಣೆಯನ್ನು ತೊಲಗಿಸಿ; ದಾಸೋಹವೆಂಬ ಉನ್ನತ ಆಚರಣೆಯ ಮೂಲಕ ಉತ್ಪಾದನೆಯ ಯೋಗ್ಯ ಹಾಗೂ ನ್ಯಾಯಯುತ ಹಂಚುವಿಕೆಯನ್ನು ಅಣಿಗೊಳಿಸಿ; ಜನಹಿತವಾದಿ, ಮಾನವತಾವಾದಿ, ನೈತಿಕವಾದಿ ಸಂಸ್ಕೃತಿಯ ಸಮಾಜವನ್ನು ನಿರ್ಮಿಸುವ ಮಹತ್ಕಾರ್ಯವನ್ನು ಬಸವಣ್ಣ ಕೈಕೊಂಡಿರುವುದನ್ನು" ಮುಕ್ತಮನಸ್ಸಿನಿಂದ ಒಪ್ಪಿಕೊಂಡು ಬಸವ ಧರ್ಮ ವೀರಶೈವವಾಗಿ ಜಡವಾಗಿರುವುದರ ಬಗ್ಗೆ ತೀವ್ರತರವಾದ ನೋವನ್ನು ವ್ಯಕ್ತಪಡಿಸುತ್ತಾರೆ.

ಕೌಟುಂಬಿಕ ಸಂಬಂಧಗಳಲ್ಲಿ ಭಿನ್ನ ದನಿಯನ್ನು ಸಹಿಸದೆ ಹತ್ತಿಕ್ಕುವಂಥ ಸಂದರ್ಭಗಳ ಹಿನ್ನೆಲೆಯಲ್ಲಿ ಬಸವಣ್ಣನವರ ಒಂದು ವಚನಕ್ಕೆ ಭಿನ್ನವಾಗಿ ಮತ್ತು ತೀವ್ರವಾಗಿ ವಿರೋಧ ವ್ಯಕ್ತಪಡಿಸುವಂಥ ಸತ್ಯಕ್ಕನ ವಚನವನ್ನು ಶಂಕರ ಪಾಟೀಲರು ಮುಖಾಮುಖಿಯಾಗಿಸಿ ಪ್ರಶ್ನೆ ಮಾಡುವುದನ್ನು ಕಲಿಸಿದ ಬಸವಣ್ಣನಿಗೇ ಪ್ರಶ್ನೆ ಮಾಡಿಸುತ್ತಾರೆ. 'ಭಕ್ತಿ ಎಂತಹುದಯ್ಯಾ' ಎಂಬ ವಚನದಲ್ಲಿ ಬಸವಣ್ಣ 'ದಾಸಯ್ಯ ಮಾಡಿದಂತಹದು, ಸಿರಿಯಾಳ ಮಾಡಿದಂತಹದು, ಬಲ್ಲಾಳ ಮಾಡಿ ದಂತಹದು, ಬಾಣನ ಬಾಗಿಲ ಕಾದಂತಹದು' ಎಂದು ಭಕ್ತಿಯ ಪರಾಕಾಷ್ಠೆಯನ್ನು ಎತ್ತಿಹಿಡಿದು ಹೇಳುತ್ತಾರೆ. ಆದರೆ ಸತ್ಯಕ್ಕನಿಗೆ ಈ ವಚನದಲ್ಲಿ ಬರುವ ಬಾಣ, ಸಿರಿಯಾಳ, ನಂಬಿ, ಬಲ್ಲಾಳ ಈ ಭಕ್ತರ ಕತೆಗಳಲ್ಲಿರುವ ಅಮಾನವೀಯ ಅಂಶಗಳು ಹಾಗೂ ನೈತಿಕ ಪ್ರಜ್ಞೆಯ ಹ್ರಾಸ ಮನಸ್ಸನ್ನು ಕದಡಿವೆ, ವೈಚಾರಿಕ ಕ್ಷೋಭೆಯನ್ನು ಉಂಟುಮಾಡಿವೆ. ಈ ಕತೆಗಳಲ್ಲಿ ಬರುವ ಪರಮಾತ್ಮನ ಗುಣವಿಶೇಷಗಳು ಹಾಗೂ ಅವನ ಕೃತ್ಯಗಳಲ್ಲಿರುವ ವೈಪರೀತ್ಯವನ್ನು ದೇವರಾಟ ಎಂದು ಸ್ವೀಕರಿಸುವ ಮನೋವೃತ್ತಿ, ಭಕ್ತಿಯ ಪರಾಕಾಷ್ಠೆಯ ದೌರ್ಬಲ್ಯ ಸತ್ಯಕ್ಕನಲ್ಲಿರಲಿಲ್ಲ. ನಂಬಿಯ ಸ್ತ್ರೀ ಲಂಪಟತೆಗೆ, ಕುಂಟಣಿಯಾಗಿ ನೆರವು ನೀಡುವುದು, ಬಲ್ಲಾಳನ ಹೆಂಡತಿಯನ್ನೇ ಭೋಗಾಪೇಕ್ಷೆಗಾಗಿ ಕೇಳುವುದು, ಸಿರಿಯಾಳನ ಮಗನನ್ನೇ ತಿನ್ನಬಯಸುವ ನರಭಕ್ಷಕನಾಗುವುದು ಇವೆಲ್ಲ ಪರಮಾತ್ಮನಿಗೆ ಯೋಗ್ಯವಾದ ನಡವಳಿಕೆಯೇ ಅಲ್ಲ ಎಂಬುದು ಸತ್ಯಕ್ಕನ ಚಿಂತನೆ. ಇಂತಹ ಭಕ್ತಿಯನ್ನು ವೈಭವೀಕರಿಸುವುದು 'ಭಕ್ತಿಯ ಅತಿರೇಕ' ಎಂಬುದು ಅವಳ ಖಚಿತ ಅಭಿಪ್ರಾಯ. ಮುಂದುವರಿದು, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ವ್ಯಥೆಯನ್ನೇ ಮೂರ್ತೀಕರಿಸಿದ ಇನ್ನೊಂದು ಪ್ರಶ್ನೆಯನ್ನು ಬಸವಣ್ಣನಿಗೇ ಕೇಳುತ್ತಾಳೆ : "ನಿಮ್ಮ ಗುರುತನಕ್ಕಿದು ಪಥವೆ /ನಾರಿಯರಿಬ್ಬರೊಡನೆ ಇಪ್ಪುದು ?" ಎಂಥ ವೈಚಾರಿಕ ಜಾಗೃತಿ ! ಬಸವಣ್ಣನಿಂದ ಪಡೆದ ದನಿಯನ್ನು ಅವನ ಮೇಲೆಯೇ ಪ್ರಯೋಗಿಸುವ ದಿಟ್ಟತನ ಇಲ್ಲಿದೆ. ಬೇರಾವ ಸಾಂಸ್ಕೃತಿಕ ಚರಿತ್ರೆಯಲ್ಲಿ ದೊರಕದೇ ಇರುವಂಥ ವೈಚಾರಿಕ ಜಾಗೃತಿ ಇದು ಎಂದು ಶಂಕರಪಾಟೀಲರು ನಾಟಕೀಯವಾಗಿ ಇಲ್ಲಿ ಈ ಮುಖಾಮುಖಿ ಮಾಡಿಸಿದ್ದಾರೆ.



ಅಲ್ಲಮನ ಬಗ್ಗೆ ಎರಡು ಲೇಖನಗಳಿವೆ. 'ಎಲ್ಲ ಮೀರಿದ ಅಲ್ಲಮ' ಎಂಬುದು ಅಲ್ಲಮನ ಅಸಾಧಾರಣ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುತ್ತದೆ. ಹರಿಹರ ಮತ್ತು ಶಿವಗಣ ಪ್ರಸಾದಿ ಮಹಾದೇವಯ್ಯನವರು ಅಲ್ಲಮನನ್ನು ವಾಸ್ತವಿಕ ದೃಷ್ಟಿಕೋನದಿಂದ ಚಿತ್ರಿಸುತ್ತಲೇ ಅವನನ್ನು ಮಹಾಮಾನವನನ್ನಾಗಿ ಕಂಡರಿಸಿದರು. ಆದರೆ ಚಾಮರಸ ಮತ್ತು ಮುಂದೆ ಬಂದಂತಹ ಶೂನ್ಯ ಸಂಪಾದನೆಕಾರರು ಅಲ್ಲಮನನ್ನು ಅವತಾರಿ ಪುರುಷನನ್ನಾಗಿ ಮೆರೆಯಿಸಿದರು. ಈಗ ಆಧುನಿಕ ಕಾಲಘಟ್ಟದಲ್ಲಿ ಅಲ್ಲಮನ ಬಗ್ಗೆ ವಿಶೇಷ ಅಧ್ಯಯನಗಳಾಗುತ್ತಿವೆ. ಈ ಹಿನ್ನೆಲೆಯಲ್ಲಿಯೇ ಶಂಕರಪಾಟೀಲರು ಅಲ್ಲಮನಲ್ಲಿ ಅಡಗಿರುವ ಒಂದು ವ್ಯಕ್ತಿತ್ವ ವಿಶೇಷವನ್ನು ಎತ್ತಿ ತೋರಿಸುತ್ತಾರೆ. "ಅಲ್ಲಮ ಒಬ್ಬ ನಿಸ್ಸೀಮ ಮಹಾಪುರುಷ. ಅವನಲ್ಲಿ ಸುಳಿಯುತ್ತಿದ್ದುದು ಆಕಾಶವನಡರುವ ಚೇತನ, ಯಾವ ಕಟ್ಟುಪಾಡಿಗೂ ಪಕ್ಕಾಗದಂಥ, ಯಾವ ಎಲ್ಲೆಗೂ ಸಿಲುಕದಂಥ, ಎಲ್ಲವನ್ನೂ ಮೀರಿ ನಿಲ್ಲುವ ವ್ಯಕ್ತಿತ್ವ . ಆದಾಗ್ಯೂ ಅವನು ಬಸವಾದಿ ಶರಣರ ಸಾಮಾಜಿಕ ಆಂದೋಲನೆಗೆ ಬೆಂಗಾವಲಾಗಿ ನಿಂತು, ಬಸವಣ್ಣ ಎದುರಿಸಿದ ಸಂಘಟನಾತ್ಮಕ ಸಮಸ್ಯೆ ಸವಾಲುಗಳ ಪರಿಹಾರದಲ್ಲಿ ಅವನಿಗೆ ಮಾರ್ಗದರ್ಶನ ನೀಡುತ್ತ ಆಂದೋಲನೆ ವ್ಯವಸ್ಥಿತವಾಗಿ ಮುನ್ನಡೆಯುವಂತೆ ನೋಡಿಕೊಂಡನು. ಸಮಾನತಾ ಸಮಾಜ ಸಂಸ್ಕೃತಿಗೆ ಒಂದು ಒಳಕಸುವನ್ನು ಅಲ್ಲಮ ಕೊಟ್ಟುದುದು ಸೂಕ್ಷ್ಮವಾಗಿ ಇಂದಿಗೂ ಸಮಾಜವನ್ನು ಒಡೆಯದಂತೆ ಕಟ್ಟಿ ನಿಲ್ಲಿಸಿದೆ" (ಪುಟ ೧೭). ಬಸವಣ್ಣನವರ ವಿಚಾರಗಳು ಸಾಂಸ್ಥಿಕ ಧರ್ಮದ ಚೌಕಟ್ಟಿನಲ್ಲಿ ಹೂತುಹೋಗದೆ ಚಲನಶೀಲ ಸಮಾಜ ಮತ್ತು ಸಂಸ್ಕೃತಿಯ ಜೊತೆ ಬೆರೆಯುವಂತಾಗಲು ಅಲ್ಲಮನ ಕೊಡುಗೆ ಅಪಾರ ಎಂಬುದನ್ನು ಈ ಎರಡು ಲೇಖನಗಳಲ್ಲೂ ಚರ್ಚಿಸುತ್ತಾರೆ. ಆದರೆ ಇನ್ನಷ್ಟು ಉದಾಹರಣೆಗಳು ಮತ್ತು ಘಟನೆಗಳು ಈ ವಿಷಯಕ್ಕೆ ಪೂರಕವಾಗಿ ಬೇಕಾಗಿದ್ದವು ಎಂಬ ಕೊರತೆಯನ್ನು ಶಂಕರ ಪಾಟೀಲರು ನೀಗಿಸಿಲ್ಲ.

ಇನ್ನು ಸಿದ್ಧರಾಮನ ಬಗೆಗಿನ ಮೂರು ಲೇಖನಗಳು, ದಲಿತ ಶರಣ ವಚನಕಾರರ ಬಗೆಗಿನ ಲೇಖನ ಹಾಗೂ ಮಾರಯ್ಯ ದಂಪತಿಗಳ ಬಗೆಗಿನ ಲೇಖನಗಳಲ್ಲಿ ಆಯಾ ವಚನಕಾರರ ವ್ಯಕ್ತಿ ವಿಶಿಷ್ಟತೆಗಳನ್ನು ಗುರುತಿಸುತ್ತಾರೆ. ಸಿದ್ಧರಾಮನ ಕಾಯಕದ ಬಗೆಗಿನ ಆಲೋಚನೆಗಳು ಆಯ್ದಕ್ಕಿ ಮಾರಯ್ಯನವರ "ಕಾಯಕವೆ ಕೈಲಾಸ" ಎಂಬ ತತ್ವ ದಲಿತ ವಚನಕಾರರ ಬಗೆಗಿನ ಲೇಖನದಲ್ಲಿ ಶೂದ್ರರಾರು, ದಲಿತರಾರು ಎಂಬುದನ್ನು ವಿಂಗಡಿಸಿರುವ ರೀತಿ ಶಂಕರಪಾಟೀಲರ ವೈಜ್ಞಾನಿಕ ದೃಷ್ಟಿಕೋನವನ್ನು ಪರಿಚಯಿಸಿಕೊಡುತ್ತದೆ. "...ಈ ಶೂದ್ರರೆಲ್ಲರೂ ಒಂದೇ ಸ್ತರದಲ್ಲಿ ಇರುವಂಥವರಲ್ಲ. ಸಾಮಾಜಿಕ ಆರ್ಥಿಕ ದೃಷ್ಟಿಯಿಂದ ಅವರಲ್ಲಿ ಮೇಲು, ಕೀಳು ಸ್ತರಗಳಿವೆ. ಈ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ನಿರೀಕ್ಷಿಸಿದಾಗ ಮೂರು ವರ್ಗಗಳು ನಿಚ್ಚಳವಾಗಿ ಗೋಚರಿಸುತ್ತವೆ. ಒಂದು, ಪಂಚಮರು. ಅವರು ಮೂಲತಃ ಅಸ್ಪೃಶ್ಯರು. ಎರಡು, ಕೆಳವರ್ಗದ ಶೂದ್ರರು, ಅಸ್ಪೃಶ್ಯರಂತೆಯೇ ನಡೆಯಿಸಿಕೊಳ್ಳಲ್ಪಟ್ಟವರು; ಮೂರು, ಮೇಲ್ವರ್ಗದ ಶೂದ್ರರು. ಮೊದಲ ಎರಡು ವರ್ಗಗಳನ್ನು 'ದಲಿತ' ಎಂದು ಕರೆಯುವುದು ಯಥೋಚಿತವಾದುದು. ಇಂದಿನ ಲಿಂಗಾಯತ ಸಮಾಜದಲ್ಲಿ ಬಣಜಿಗನೂ ಶೂದ್ರನೆ, ಆದರೆ ಅವನು ಕೆಳವರ್ಗದವನಲ್ಲ; ಹಡಪದನೂ ಶೂದ್ರನೆ, ಆದರೆ ಅವನು ದಲಿತ !! ಈ ಸಾಮಾಜಿಕ ವಿಭಜನೆಯಲ್ಲಿ ಅವಮಾನಿತ ಜಾತಿಗಳ ಜನರೆಲ್ಲ ಶೂದ್ರರಾದರೂ ದಲಿತ ಸಂವೇದನೆಗಳ ಹಿನ್ನೆಲೆಯಲ್ಲಿ ನೋಡಬೇಕಾಗಿದೆ ಎಂಬುದನ್ನು ಈ ಲೇಖನದಲ್ಲಿ ಮನಗಾಣಿಸುತ್ತಾರೆ. ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಸಂಬೊಳಿನಾಗಿದೇವ, ಅನಾಮಿಕ ನಾಚಯ್ಯ, ಮಾದಾರ ಧೂಳಯ್ಯ, ಉರಿಲಿಂಗಪೆದ್ದಿ, ಹೆಂಡದಮಾರಯ್ಯ, ಢಕ್ಕೆಯ ಮಾರಯ್ಯ, ಕಾಳವ್ವೆ – ಈ ಒಂಬತ್ತು ಜನ ವಚನಕಾರ ಶರಣರನ್ನು ದಲಿತರೆಂದು ಕರೆಯದೆ ಬಸವಣ್ಣ ಹಿರಿಯ ಕುಲದವರೆಂದು ಕರೆಯುತ್ತಾನೆ ಎಂಬುದರ ಕಡೆಗೂ ನಮ್ಮ ಗಮನ ಸೆಳೆದಿದ್ದಾರೆ.

ಇನ್ನುಳಿದ ಲೇಖನಗಳಲ್ಲಿ ಶಂಕರ ಪಾಟೀಲರು ಲಿಂಗಾಯತ ಧರ್ಮ ತನ್ನ ಚಲನಶೀಲತೆಯನ್ನು ಕಳೆದುಕೊಂಡು, ಯಜ್ಞ ಸಂಸ್ಕೃತಿಗೆ ಜೋತುಬಿದ್ದು ಬಸವತತ್ವಕ್ಕೆ ವಿರುದ್ಧ ಗತಿಯಲ್ಲಿ ನಡೆಯುತ್ತಿರುವುದರ ಬಗ್ಗೆ ತೀವ್ರ ವಿಷಾದ ಮತ್ತು ನೋವನ್ನು ಪ್ರಕಟಿಸುತ್ತಾರೆ. "ದೇಹವನ್ನೇ ದೇಗುಲವನ್ನಾಗಿಸುವುದರ ಮೂಲಕ ಮಂದಿರ ಸಂಸ್ಕೃತಿಯನ್ನೇ ತಳ್ಳಿಹಾಕಿ, ಕಾಯಕವನ್ನೇ ಕೈಲಾಸವೆಂದು ಪರಿಗಣಿಸುವ ಶ್ರಮಜೀವಿಗಳಿಗೆ ಹಿರಿಮೆಯನ್ನು ಸಲ್ಲಿಸುವುದರ ಮೂಲಕ ಆರ್ಥಿಕ ಶೋಷಣೆಯನ್ನು ತೊಲಗಿಸಿ; ದಾಸೋಹವೆಂಬ ಉನ್ನತ ಆಚರಣೆಯ ಮೂಲಕ ಉತ್ಪಾದನೆಯ ಯೋಗ್ಯ ಹಾಗೂ ನ್ಯಾಯಯುತ ಹಂಚುವಿಕೆಯನ್ನು ಅಣಿಗೊಳಿಸಿ; ಜನಹಿತವಾದಿ, ಮಾನವತಾವಾದಿ, ನೈತಿಕವಾದಿ ಸಂಸ್ಕೃತಿಯ ಸಮಾಜವನ್ನು ನಿರ್ಮಿಸುವ ಮಹತ್ಕಾರ್ಯವನ್ನು ಬಸವಣ್ಣ ಕೈಕೊಂಡಿರುವುದನ್ನು" ಮುಕ್ತಮನಸ್ಸಿನಿಂದ ಒಪ್ಪಿಕೊಂಡು ಬಸವ ಧರ್ಮ ವೀರಶೈವವಾಗಿ ಜಡವಾಗಿರುವುದರ ಬಗ್ಗೆ ತೀವ್ರತರವಾದ ನೋವನ್ನು ವ್ಯಕ್ತಪಡಿಸುತ್ತಾರೆ. ಸಮತೆ, ಬಂಧುತ್ವ , ಸ್ವಾತಂತ್ರ್ಯ, ಶ್ರಮ ಗೌರವಗಳೆಂಬ ವಚನಗಳ ಹೊಸ ಮೌಲ್ಯಗಳನ್ನು ಇಲ್ಲಿರುವ ಲೇಖನಗಳ ಮೂಲಕ ಓದುಗರಿಗೆ ಕಾಣಿಸಿಕೊಡುವ ಶಂಕರ ಮ. ಪಾಟೀಲರು ತಮ್ಮ ಆಳವಾದ ಅಧ್ಯಯನ, ಪ್ರಖರ ವೈಚಾರಿಕ ಪ್ರಜ್ಞೆ ಮತ್ತು ವೈಜ್ಞಾನಿಕ ವಿಶ್ಲೇಷಣೆಯಿಂದ ಬಸವ–ಅಲ್ಲಮ ವಿಚಾರಧಾರೆಗೆ ಒದಗಿಬಂದಿರುವ ತೊಡಕುಗಳನ್ನು ಬೊಟ್ಟು ಮಾಡಿ ತೋರಿಸುವಲ್ಲಿ ಎದ್ದು ಕಾಣಿಸುತ್ತಾರೆ. ಅವರ ಈ "ವಚನ ವೈಭವ" ಕೃತಿ ಈ ದಿಕ್ಕಿನಲ್ಲಿ ಒಂದು ಮೈಲಿಗಲ್ಲಾಗಿದೆ.

**ಡಾ॥ ರಂಗಾರೆಡ್ಡಿ ಕೋಡಿರಾಂಪುರ**
'ಇರುವಂತೆ', ಸ್ವಾಮಿ ವಿವೇಕಾನಂದ ರಸ್ತೆ, ೧ನೇ ಮುಖ್ಯರಸ್ತೆ
ಪಾರ್ವತಿ ನಗರ, ಲಗ್ಗೆರೆ, ಬೆಂಗಳೂರು – ೫೬೦ ೦೫೮



# ಸಾಹಿತ್ಯರತ್ನ ಪ್ರೇಮ್‌ಚಂದ್ – ಒಂದು ಪರಿಚಯ

**ಡಾ॥ ಸಿದ್ಧಲಿಂಗ ಪಟ್ಟಣಶೆಟ್ಟಿ**

ಇಂದು ಸಾಹಿತ್ಯಲೋಕದಲ್ಲಿ 'ಪ್ರೇಮ್‌ಚಂದ್' ಅವರ ಹೆಸರನ್ನು ಅರಿಯದ ವ್ಯಕ್ತಿಗಳೇ ಇಲ್ಲ. ಅವರ ಬದುಕು ಮತ್ತು ಸಾಹಿತ್ಯವನ್ನು ಕುರಿತು ಅಸಂಖ್ಯಾತ ವ್ಯಕ್ತಿಗಳು ಅಭಿಮಾನದಿಂದ ಬರೆದಿದ್ದಾರೆ, ಈಗಲೂ ವಿವಿಧ ದೃಷ್ಟಿಕೋನಗಳಿಂದ ಅವರ ಸಾಹಿತ್ಯ ಸಾಗರವನ್ನು ಮಥಿಸುತ್ತಿದ್ದಾರೆ. ತಮ್ಮ ತಮ್ಮ ಪಾಲಿನ ರತ್ನಭಾಗ್ಯ ಪಡೆಯುತ್ತಿದ್ದಾರೆ. ತಾನು ಸದಾ ಕಾಲವೂ 'ಅಕ್ಷರದ ಆಳು, ಕೂಲಿಕಾರ, ಮಜದೂರ್, ರೈತ, ಹೋರಾಡುವ ಸೈನಿಕ' ಎಂದು ಹೇಳಿಕೊಳ್ಳುತ್ತಿದ್ದ ಪ್ರೇಮ್‌ಚಂದ್‌ರನ್ನು ನಿಜವಾಗಿ ಅರಿಯಲು ಪ್ರೇಮಚಂದ್ ಪತ್ನಿ ಶಿವರಾನೀದೇವೀ ಬರೆದ 'ದಿನಚರಿ : ಸ್ಮರಣಗ್ರಂಥ', ಮದನ್ ಗೋಪಾಲ್ ಬರೆದ 'ಕಲಮ್ ಕಾ ಮಜ್‌ದೂರ್ : ಪ್ರೇಮ್‌ಚಂದ್' (೧೯೬೨–೬೪) ಪುತ್ರ ಅಮೃತ್‌ರಾಯ್ ಬರೆದ 'ಪ್ರೇಮ್‌ಚಂದ್ : ಕಲಮ್ ಕಾ ಸಿಪಾಹೀ (೧೯೬೨)' ಈ ರತ್ನತ್ರಯಗಳನ್ನು ಮಾತ್ರ ಅವಶ್ಯ ಓದಬೇಕು.

೧

ವಿಶ್ವಸಾಹಿತ್ಯದಲ್ಲಿ ಭಾರತದ ಕೀರ್ತಿಯನ್ನು ಅತ್ಯುನ್ನತ ಶಿಖರಕ್ಕೆ ಕೊಂಡೊಯ್ದ ಶ್ರೇಯಸ್ಸು ಮುಖ್ಯವಾಗಿ ಶರತ್‌ಚಂದ್ರ ಚಟರ್ಜಿ, ರವೀಂದ್ರನಾಥ ಠಾಕೂರ್ ಮತ್ತು ಪ್ರೇಮ್‌ಚಂದ್ ಅವರಿಗೆ ಸಲ್ಲುತ್ತದೆ. ರಾಜಾ ರಾಮಮೋಹನ್ ರಾಯ್, ಸ್ವಾಮಿ ದಯಾನಂದ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದ ಘೋಷ್, ಬಂಕಿಮಚಂದ್ರ ಚಟ್ಟೋಪಾಧ್ಯಾಯ, ದಾದಾಭಾಯಿ ನೌರೋಜಿ, ಗೋಖಲೆ, ತಿಲಕ್ ಮುಂತಾದವರು ತಮ್ಮ ವಿಚಾರ ಮತ್ತು ಕಾರ್ಯವಿಧಾನಗಳ ಮೂಲಕ ನವಭಾರತ ಸಮಾಜವನ್ನು ಕಟ್ಟುವ ಪ್ರಯತ್ನದಲ್ಲಿದ್ದ ಕಾಲದಲ್ಲಿ ಮೂಡಿ ಬಂದ ಲೇಖಕ ಪ್ರೇಮ್‌ಚಂದ್.

ಬ್ರಿಟಿಷರ ದಬ್ಬಾಳಿಕೆ, ವಿದೇಶಿ ಸಂಸ್ಕೃತಿ ಮತ್ತು ಧರ್ಮಪ್ರಚಾರಗಳ ವಿರುದ್ಧ ದೇಶದಲ್ಲೆಲ್ಲ ಅಸಂತೋಷದ ತೀವ್ರ ಬಿರುಗಾಳಿ ಬೀಸುತ್ತಿತ್ತು. ಈ ವಿಶಾಲ ದೇಶದ ಭೌಗೋಲಿಕ ಪ್ರಾದೇಶಿಕ ಭಿನ್ನತೆ, ಭಾಷಾ ವೈವಿಧ್ಯ, ಆಚಾರ–ವಿಚಾರಗಳ ಪರಸ್ಪರ ವಿರೋಧಗಳ ಮಧ್ಯೆಯೂ 'ಏಕದೇಶತ್ವ'ದ ಕಲ್ಪನೆಯನ್ನು, ಭಾವಾತ್ಮಕ 'ಐಕಮತ್ಯ'ವನ್ನು ಹುಟ್ಟುಹಾಕುವಲ್ಲಿ, ಸ್ವತಂತ್ರ ದೇಶ ಮತ್ತು ಭಾರತೀಯ ಸ್ವಾತಂತ್ರ್ಯದ ಹೊಸ ಭದ್ರ ಬಿಂಬವನ್ನು ರೂಪಿಸುವಲ್ಲಿ ಭಾರತದ ಬೇರೆ ಬೇರೆ ಭಾಗಗಳ ಮುಂದಾಳುಗಳು ಶ್ರಮಿಸತೊಡಗಿದ್ದರು. ಭಾಷೆ, ಕೋಮುಗಳ ನೆಪದಲ್ಲಿ ನಡೆದ ಬಂಗಾಲದ ವಿಭಜನೆ ರಾಷ್ಟ್ರಮಟ್ಟದಲ್ಲಿ ಚಳವಳಿಗೆ ಕಾರಣವಾಗಿತ್ತು. ಕಾಲದ ಅಗತ್ಯಕ್ಕೆ ತಕ್ಕಂತೆ ಹುಟ್ಟಿದ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್' ಭಾರತೀಯ ಜನಮಾನಸವನ್ನು ರೂಪಿಸುವ ಹೊಣೆ ಹೊರಲು ಸಿದ್ಧವಾಗಿತ್ತು. ಅಂಥ ಸಂದರ್ಭದಲ್ಲಿ ಭಾರತದ ರಾಜಕೀಯ ರಂಗದ ಮೇಲೆ ಪ್ರವೇಶಿಸಿದ ಮೋಹನದಾಸ್ ಕರಮ್‌ಚಂದ್ ಗಾಂಧಿಯವರು ಸಮಸ್ತ ಭಾರತೀಯರನ್ನು ಒಳಗೊಳ್ಳುವ ಸ್ವದೇಶ ಮತ್ತು ಸ್ವಾತಂತ್ರ್ಯದ ಚಿಂತನೆಗೆ ಒತ್ತುಕೊಟ್ಟರು.

ಗಾಂಧೀಜಿಯ ಜೊತೆಗೆ ದೇಶದ ಬೇರೆ ಬೇರೆ ಕ್ಷೇತ್ರಗಳಲ್ಲಿ ಅನೇಕ ನಾಯಕರು ದೇಶ ಕಟ್ಟುವ ಕಾರ್ಯದಲ್ಲಿ ತೊಡಗಿಕೊಂಡರು. ಭಗತ್‌ಸಿಂಗ್, ಚಂದ್ರಶೇಖರ್ ಆಜಾದ್, ಬಾಲಗಂಗಾಧರ ತಿಲಕ್, ಲಜಪತ್ ರಾಯ್, ಬಿಪಿನ್‌ಚಂದ್ರಪಾಲ್, ನೆಹರು, ಸುಭಾಷ್‌ಚಂದ್ರ ಬೋಸ್, ಚಕ್ರವರ್ತಿ ರಾಜಗೋಪಾಲಾಚಾರಿ, ರಾಜೇಂದ್ರ ಪ್ರಸಾದ್ ಮುಂತಾದವರು ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಬೆಳಗಿದರು; ಮತ್ತು ಮೊದಮೊದಲಲ್ಲಿ ಭಾರತೇಂದು ಹರಿಶ್ಚಂದ್ರ, ನಂತರದಲ್ಲಿ ಸುಬ್ರಹ್ಮಣ್ಯ ಭಾರತಿ, ಮೈಥಿಲೀಶರಣ್ ಗುಪ್ತ, ಪ್ರೇಮ್‌ಚಂದ್ ಮುಂತಾದವರು ಸಾಹಿತ್ಯ ಕ್ಷೇತ್ರದಲ್ಲಿ ಮೊಳಗಿದರು. ಇಂಥ ಕಾಲದಲ್ಲಿ ದೇಶದ ಎಲ್ಲ ಚಟುವಟಿಕೆಗಳಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಬರೆದ ಪ್ರೇಮ್‌ಚಂದ್ ಅವರು ತಮ್ಮ ಬರವಣಿಗೆಯಲ್ಲಿ ಪರೋಕ್ಷವಾಗಿ ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ರಾಷ್ಟ್ರೀಯ ಆಂದೋಲನದ, ಗ್ರಾಮೀಣ ಜೀವನದ ಆಗು–ಹೋಗುಗಳ ಚಿತ್ರಣದ ಮಟ್ಟಿಗೆ ಏಕಮಾತ್ರ ರೂವಾರಿಯೇ ಆಗಿದ್ದಾರೆ.

೨

ಪ್ರೇಮ್‌ಚಂದ್ ಅವರು ಬನಾರಸದ (ಈಗ ವಾರಾಣಸಿ, ಕಾಶಿ) ಪಕ್ಕದಲ್ಲಿರುವ 'ಲಮಹೀ' ಎಂಬ (ಆಜಮಗಢಕ್ಕೆ ಹೋಗುವ ದಾರಿಯಲ್ಲಿರುವ, ಈಗ ಕಾಶಿಯ ಭಾಗವೇ ಆಗಿರುವ) ಹಳ್ಳಿಯಲ್ಲಿ ಜನಿಸಿದ್ದು ೧೮೮೦ರ ಜುಲೈ ೩೧ರಂದು. ಅವರ ಅಜ್ಜ ಗುರ್‌ಸಹಾಯ್‌ಲಾಲ್ ಲಮಹಿಯಲ್ಲಿ 'ಪಟವಾರೀ' (ಪಟೇಲ್, ಪಾಟೀಲ) ಆಗಿದ್ದರು. ಕುರ್ಮಿಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದ ಆ ಗ್ರಾಮದಲ್ಲಿ ಗುರ್‌ಸಹಾಯ್‌ಲಾಲ್ ಅವರದು ಕಾಯಸ್ಥ ಕುಟುಂಬ. ಅವರ ೪ ಜನ ಮಕ್ಕಳಲ್ಲಿ ೩ನೆಯವರಾದ ಅಜಾಯಬ್‌ಲಾಲ್‌ರ ಪುತ್ರ ಪ್ರೇಮ್‌ಚಂದ್. ಮೂವರು ಹೆಣ್ಣುಮಕ್ಕಳ

ನಂತರ ಹುಟ್ಟಿದ ಪ್ರೀತಿಯ ಮಗನಿಗೆ ಅಜಾಯಬ್‌ಲಾಲ್ ಅವರು 'ಧನ್‌ಪತ್‌ರಾಯ್' ಎಂದು ಹೆಸರಿಟ್ಟಿದ್ದರು; ದೊಡ್ಡಪ್ಪ ಅಕ್ಕರೆಯಿಂದ 'ನವಾಬ್' ಎಂದು ಕರೆಯುತ್ತಿದ್ದರು. ತಂದೆ ಸಜ್ಜನ, ಪ್ರಾಮಾಣಿಕ, ಪರೋಪಕಾರಿ, ಸದಾಚಾರಿ ವ್ಯಕ್ತಿಯಾಗಿದ್ದರು. ತಾಯಿ ಆನಂದೀ ದೇವಿ ಸುಶಿಕ್ಷಿತ, ಸುಸಂಸ್ಕೃತ, ದಯಾಳು ಸ್ವಭಾವದವರು. ಪ್ರೇಮ್‌ಚಂದ್ ಅವರು ಆರಂಭದಲ್ಲಿ ಉರ್ದು ಮತ್ತು ಹಿಂದಿ ಎರಡೂ ಭಾಷೆಗಳಲ್ಲಿ 'ನವಾಬ್‌ರಾಯ್' ಎಂಬ ಹೆಸರಿನಿಂದಲೇ ಬರವಣಿಗೆಯಲ್ಲಿ ತೊಡಗಿದ್ದರು. ನಂತರ 'ಪ್ರೇಮ್‌ಚಂದ್' ಎಂಬ ಹೆಸರಿನಿಂದಲೇ ವಿಖ್ಯಾತರಾದರು.

ಪ್ರೇಮ್‌ಚಂದ್ ಅವರ ಕಥೆ, ಕಾದಂಬರಿ, ಇತರ ಬರವಣಿಗೆಗಳಂತೆಯೇ ಅವರ ವೈಯಕ್ತಿಕ ಜೀವನವೂ ಅದ್ಭುತ, ರಮ್ಯ, ರೋಮಾಂಚಕ ಮತ್ತು ಸಂಘರ್ಷ ಮಯವಾಗಿದೆ, ಪ್ರೇರಣಾದಾಯಕವಾಗಿದೆ. ತಮ್ಮ ಬದುಕನ್ನು ರೂಪಿಸಿಕೊಳ್ಳುವಲ್ಲಿ ಅವರು ಸಾಗಿ ಬಂದ ದಾರಿಯಲ್ಲಿ ಕಂಡ, ನೋಡಿದ, ಕೇಳಿದ, ಅನುಭವಿಸಿದ ಎಲ್ಲ ಅನುಭವಗಳಿಗೆ ಕಥಾತ್ಮಕ ಅಥವಾ ವೈಚಾರಿಕ ಸ್ವರೂಪವನ್ನು ನೀಡಿದರು. ಆ ಮೂಲಕ ತನ್ನ ದೇಶ, ಸಮುದಾಯ, ಪರಿಸರ, ಪರಿಸ್ಥಿತಿ, ನೀತಿ–ನೇಲೆಗಟ್ಟುಗಳಿಗೆ ಒಂದು ಚೌಕಟ್ಟನ್ನು ಹಾಕಿಕೊಟ್ಟರು. ಮತ್ತು ಸೃಜನಶೀಲ ಕಲೆಯ ಮೂಲಕ ಭಾರತೀಯ ಇತಿಹಾಸ, ಸಂಸ್ಕೃತಿಯನ್ನು ರಕ್ಷಿಸಿದ ಅಪೂರ್ವ ವ್ಯಕ್ತಿಯೆನಿಸಿದರು. ಮ್ಯಾಕ್ಸಿಂ ಗಾರ್ಕಿ, ಟಾಲ್‌ಸ್ಟಾಯ್ ಅವರ ಹಾಗೆ ಯುಗಪ್ರವರ್ತಕ ಲೇಖಕರೆನಿಸಿದರು.

'ನವಾಬ್‌ರಾಯ್ ಬನಾರಸೀ' ಎಂಬ ಹೆಸರಿನಲ್ಲಿ ಅವರ ಉರ್ದು ಬರವಣಿಗೆ ಆರಂಭವಾಯಿತು. ಬನಾರಸದ 'ಆವಾಜೇ ಖಲ್ಕ್' ಪತ್ರಿಕೆಯಲ್ಲಿ 'ಅಸ್‌ರಾರೇ ಮಆಬಿದ್' ಎಂಬ ಹೆಸರಿನ ಅವರ ಮೊದಲ ಕಾದಂಬರಿ ಪ್ರಕಟವಾಯಿತು. ನಂತರ ಕಾನಪುರದ 'ಜಮಾನಾ' ಎಂಬ ಉರ್ದು ಮಾಸಪತ್ರಿಕೆಯಲ್ಲಿ ನಿಯಮಿತವಾಗಿ ಬರೆಯತೊಡಗಿದರು. ಅವರ ಮೊದಲ ಉರ್ದು ಕಥಾಸಂಗ್ರಹ 'ಸೋಜೇ ವತನ್' ೧೯೦೮ರಲ್ಲಿ ಪ್ರಕಟವಾಯಿತು. ಅದರಲ್ಲಿದ್ದ ದೇಶಪ್ರೇಮದ ಕತೆಗಳು ಮತ್ತು ಪರೋಕ್ಷ ಬ್ರಿಟಿಷ್ ವಿರೋಧಿ ಧೋರಣೆಯಿಂದಾಗಿ 'ನವಾಬ್‌ರಾಯ್'ರ ಆ ಸಂಗ್ರಹ ಬ್ರಿಟಿಷ್ ಅಧಿಕಾರಿಗಳ ಕೆಂಗಣ್ಣಿಗೆ ಗುರಿಯಾಯಿತು. ಅದು ೧೯೧೦ರಲ್ಲಿ ಆಗಿನ ಬ್ರಿಟಿಷ್ ಕಲೆಕ್ಟರ್‌ರಿಂದ ನಿರ್ಬಂಧಕ್ಕೊಳಪಟ್ಟಿತು; ಅದರ ಉಳಿದ ಪ್ರತಿಗಳನ್ನು ಸುಡಲಾಯಿತು. ಮುಂದೆ ಅವರು ಬರೆಯುವ ಪ್ರತಿಯೊಂದು ಬರೆಹವನ್ನು ಸರಕಾರಕ್ಕೆ ತೋರಿಸಿ, ಅನುಮತಿ ಸಿಕ್ಕ ನಂತರವೇ ಪ್ರಕಟಿಸಬೇಕೆಂದು ನಿಬಂಧನೆಯನ್ನು ಹೇರಲಾಯಿತು. ಈ ಪ್ರಸಂಗದ ನಂತರ ನಿರ್ಬಂಧಿತ ಕಥಾಲೇಖಕ 'ನವಾಬ್‌ರಾಯ್' ಅವರು 'ಪ್ರೇಮ್‌ಚಂದ್' ಎಂಬ ಹೆಸರಿನಿಂದ ಬರೆಯತೊಡಗಿದರು. ತಮ್ಮ ಆತ್ಮೀಯ ಮಿತ್ರ ದಯಾನಾರಾಯಣ್ ನಿಗಮ್ ಅವರು ಸೂಚಿಸಿದ 'ಪ್ರೇಮ್‌ಚಂದ್' ಎಂಬ ಹೆಸರನ್ನು ಸ್ವೀಕರಿಸಿದ ಧನಪತ್‌ರಾಯ್ ಅವರು 'ಜಮಾನಾ' ಉರ್ದು ಪತ್ರಿಕೆಯಲ್ಲಿ, ಅದೇ ವರ್ಷದ ಡಿಸೆಂಬರ್ ತಿಂಗಳ ಸಂಚಿಕೆಯಲ್ಲಿ 'ಬಡೇ ಘರ್ ಕೀ ಬೇಟೀ' ಎಂಬ ಕತೆಯನ್ನು ಪ್ರಕಟಿಸಿದರು. 'ಪ್ರೇಮ್‌ಚಂದ್' ಎಂಬ ಹೆಸರು ಹೊತ್ತು ಪ್ರಕಟವಾದ ಅವರ ಮೊದಲ ಕತೆ ಅದು. ಹಾಗೆಯೇ ಅವರ ಮೊದಲ ಹಿಂದಿ ಕತೆ 'ಸೌತ್' 'ಸರಸ್ವತೀ' ಮಾಸಪತ್ರಿಕೆಯ ೧೯೧೫ರ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗಿತ್ತು.

೧೯೧೯ರಲ್ಲಿ ಬಿ.ಎ. ಪದವಿ ಗಳಿಸಿದ ಪ್ರೇಮ್‌ಚಂದ್ ತಮ್ಮ ಬರವಣಿಗೆಯ ಬದುಕನ್ನು ವಿಸ್ತರಿಸಿಕೊಳ್ಳತೊಡಗಿದರು. ೧೯೦೬ರಲ್ಲಿ ಶಿವರಾನೀ ದೇವಿ ಎಂಬ ಬಾಲವಿಧವೆಯನ್ನು ಮದುವೆಯಾದ ಪ್ರೇಮ್‌ಚಂದ್ ಆ ಕಾಲಕ್ಕೆ ಒಂದು ಕ್ರಾಂತಿಯನ್ನೇ ಮಾಡಿದರು. ಅವರಿಬ್ಬರ ವೈವಾಹಿಕ ಜೀವನ ಸುಖಮಯವಾಗಿತ್ತು. ಕಮಲಾ (೧೯೧೩), ಶ್ರೀಪತ್‌ರಾಯ್ (೧೯೧೬) ಮತ್ತು ಅಮೃತರಾಯ್ (೧೯೨೧) ಈ ದಂಪತಿಯ ಮಕ್ಕಳು. ಈ ಮಧ್ಯೆ ಹಲವಾರು ಸಂಸ್ಥೆಗಳಲ್ಲಿ ಕೆಲಸ ಮಾಡುತ್ತ, ಉರ್ದು, ಹಿಂದಿ ಪತ್ರಿಕೆಗಳಲ್ಲಿ ಬರೆಯತೊಡಗಿದ್ದ ಪ್ರೇಮ್‌ಚಂದ್ ತಾವೇ ಸಂಸ್ಥೆಗಳನ್ನು, ಪತ್ರಿಕೆಗಳನ್ನು, ಪ್ರಕಾಶನ ವ್ಯವಸ್ಥೆಯನ್ನು ಕೈಗೊಳ್ಳತೊಡಗಿದ್ದರು. ಆದರೆ ಲೆಕ್ಕಾಚಾರ ಮತ್ತು ವ್ಯವಹಾರ ಜ್ಞಾನದ ಕೊರತೆಯಿದ್ದ ಪ್ರೇಮ್‌ಚಂದ್ ಹಲವು ಕಡೆ ಕೈಸುಟ್ಟುಕೊಂಡರು. ಆರ್ಥಿಕವಾಗಿದ್ದ ಒಂದು ಸಂತೃಪ್ತ ಬದುಕು ಕೊನೆಯವರೆಗೂ ಅವರಿಗೆ ದಕ್ಕದೇ ಹೋಯಿತು. ೧೯೨೧ರಲ್ಲಿ ಸರಕಾರಿ ನೌಕರಿಗೆ ರಾಜೀನಾಮೆ ನೀಡಿದ ಪ್ರೇಮ್‌ಚಂದ್ ಅಸಹಕಾರ ಚಳವಳಿಯಲ್ಲಿ ಧುಮುಕಿದರು. ಆನಂತರ ಅವರ ಕಾಲದ ಅನೇಕ ಬಹು ಪ್ರತಿಷ್ಠಿತ ಜನಸೇವಕರು, ನಾಯಕರು, ಲೇಖಕರು, ಪತ್ರಕರ್ತರು, ಮುದ್ರಣಾಲಯಗಳ ಒಡೆಯರು ಮುಂತಾದವರು ಅವರ ಆಪ್ತ ಬಳಗದವರಾಗಿದ್ದರು. ಪ್ರೇಮ್‌ಚಂದ್ ಅವರ ಕಥೆ, ಕಾದಂಬರಿಗಳು ಉರ್ದು ಕಥಾ ಪರಂಪರೆಯ ಹಳೆಯ ಜಾಡನ್ನು ತ್ಯಜಿಸಿ ಹೊಸ ಬಗೆಯಲ್ಲಿ ಬರತೊಡಗಿದುವು. ಮೊದಲು ಉರ್ದುವಿನಲ್ಲಿ ಪ್ರಕಟವಾಗುತ್ತಿದ್ದ ಕಾದಂಬರಿ, ಕಥೆಗಳನ್ನು ನಂತರ ಹಿಂದಿಯಲ್ಲಿ ತಾವೇ ಅನುವಾದಿಸಿ ಪ್ರಕಟಿಸತೊಡಗಿದರು. ಮುಂದೆ ತಾವಾಗಿಯೇ ಮೊದಲು ಹಿಂದಿಯಲ್ಲಿ ಬರೆದು, ನಂತರ ಅವನ್ನು ಉರ್ದು ಭಾಷೆಗೆ ಭಾಷಾಂತರ ಅಥವಾ ರೂಪಾಂತರ ಮಾಡುತ್ತಿದ್ದರು.

ಆರ್ಥಿಕವಾಗಿ ಅಷ್ಟೇನೂ ಅನುಕೂಲವಿರದಿದ್ದ ಹಿನ್ನೆಲೆಯಲ್ಲಿ ಮಿತ್ರರ ಆಗ್ರಹಕ್ಕೆ ಒಪ್ಪಿ ಕೆಲ ಕಾಲ ಸಿನಿಮಾ ಕ್ಷೇತ್ರದಲ್ಲಿ, ವಾರ್ಷಿಕ ಎಂಟೂವರೆ ಸಾವಿರ ವೇತನದ ಮೇಲೆ, ಅಜಂತಾ ಸಿನಿಟೋನ್ ಸಂಸ್ಥೆಗೆ ಸೇರಿ, ಮುಂಬಯಿಯಲ್ಲಿಯೂ ಇದ್ದು ಬಂದರು. 'ಸೇವಾಸದನ್' ಕಾದಂಬರಿ ತಮಿಳಿನಲ್ಲಿ ಮತ್ತು 'ಮಿಲ್ ಕಾ ಮಜದೂರ್' ಹಿಂದಿಯಲ್ಲಿ ಸಿನಿಮಾ ಆದದ್ದು ಈಗ ಇತಿಹಾಸ. ಕೊನೆಗೆ ಸಿನಿಮಾ ಜಗತ್ತಿನಿಂದ ಪ್ರೇಮ್‌ಚಂದ್ ನಿರಾಶೆಯನ್ನೇ ಹೊತ್ತು ಮರಳಿದರು. ಹಾಗೆ ೧೯೩೫ರಲ್ಲಿ ಬಂದ ಅವರು, ಬನಾರಸ್ ಮತ್ತು ಅಲಾಹಾಬಾದ್‌ಗಳ ಮಧ್ಯೆ ಓಡಾಡುತ್ತಲೇ, ಸರಸ್ವತೀ ಪ್ರೆಸ್ ಮೂಲಕ 'ಹಂಸ' ಎಂಬ ಶುದ್ಧ ಭಾರತೀಯ ಸಾಹಿತ್ಯ ಪತ್ರಿಕೆಯನ್ನು ಪ್ರಕಟಿಸಲು ನಿರ್ಧರಿಸಿದರು. ಆ ಹೊತ್ತಿಗಾಗಲೇ ಉರ್ದು ಮತ್ತು ಹಿಂದಿ ಸಾಹಿತ್ಯ ಪ್ರಪಂಚ ಅವರನ್ನು 'ಉಪನ್ಯಾಸ್ ಸಾಮ್ರಾಟ್' (ಕಾದಂಬರಿ ಸಾಮ್ರಾಟ) ಎಂದು ಗೌರವಿಸತೊಡಗಿತ್ತು. ೧೯೩೬ರ ಫೆಬ್ರವರಿ ಸಂಚಿಕೆಯಲ್ಲಿ ತಮ್ಮ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ಹಂಸ' ಪತ್ರಿಕೆಯ ಸಲಹಾ ಸಮಿತಿಯಲ್ಲಿದ್ದ ೨೨ ಜನರ ಪೂರ್ಣ ಪಟ್ಟಿಯನ್ನು ಪ್ರೇಮ್‌ಚಂದ್ ಕೊಟ್ಟಿದ್ದಾರೆ. ಅವರಿಗೆ ಅತ್ಯಂತ ಆತ್ಮೀಯರಾಗಿದ್ದ ಆ ಹಿರಿಯರ ಹೆಸರುಗಳನ್ನು ನೋಡಿದರೆ ಆ ಹೊತ್ತಿಗೆ ಹಿಂದುಸ್ತಾನದಲ್ಲಿ ಪ್ರೇಮ್‌ಚಂದ್ ಅವರ ಸಾಹಿತ್ಯಿಕ ಸ್ಥಾನ–ಮಾನ ಎಷ್ಟು ಉನ್ನತವಾಗಿದ್ದಿತು ಎಂಬುದರ ಕಲ್ಪನೆ ಬರುತ್ತದೆ. ಆ ಹೆಸರುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸುತ್ತೇನೆ. ಇಲ್ಲಿ ನಾವು ಕನ್ನಡಿಗರು ಅತ್ಯಂತ ಅಭಿಮಾನದಿಂದ ಗಮನಿಸಬೇಕಾದ ಒಂದು ಅಂಶವಿದೆ; ೨೨ ಸದಸ್ಯರ ಈ ಪಟ್ಟಿಯಲ್ಲಿ ನಮ್ಮವರೇ ಆಗಿದ್ದ ರಂ. ರಾ. ದಿವಾಕರ ಅವರೂ ಇದ್ದಾರೆ. ಪ್ರೇಮ್‌ಚಂದ್ ಪ್ರಕಟಿಸಿದ ಕ್ರಮಸಂಖ್ಯೆ ಮತ್ತು ರೀತಿಯಲ್ಲಿ ಆ ಕೆಲವು ಹೆಸರುಗಳು ಹೀಗಿವೆ : ೧. ಮಹಾತ್ಮಾ ಮೋಹನ್‌ದಾಸ್ ಕರಮ್‌ಚಂದ್ ಗಾಂಧೀ, ೨. ಪುರುಷೋತ್ತಮ್‌ದಾಸ್ ಟಂಡನ್, ೩. ಮೈಥಿಲೀಶರಣ್ ಗುಪ್ತ, ೪. ರಾಮ್‌ನರೇಶ್ ತ್ರಿಪಾಠಿ, ೫. ಕಾಕಾಸಾಹಬ್ ಕಾಲೇಲ್‌ಕರ್, ೭. ಮುಹಮ್ಮದ್ ಆಖಿಲ್, ೧೦. ಎನ್. ಸಿ. ಬಾರ್ದೋಲೋಈ, ೧೨. ಕೆ. ಎಂ. ಝುವೇರೀ, ೧೫. ದತ್ತೋ ವಾಮನ್ ಪೋತ್‌ದಾರ್, ೧೬. ಡಿ. ಆರ್. ಪೆದ್ರೆ, ೧೭. ಆರ್. ಆರ್. ದಿವಾಕರ್, ೧೮. ಕೆ. ನಾಗೇಶ್ವರ್ ರಾವ್ ಪಂತುಲು. ೧೯. ಸಿ. ರಾಜಗೋಪಾಲಾಚಾರಿ, ೨೦. ಆರ್. ಕೃಷ್ಣಮೂರ್ತಿ, (ಆನಂದವಿಕಟನ್) ೨೧. ವಲ್ಲತ್ತೋಳ ನಾರಾಯಣ ಮೆನನ್ ಮತ್ತು ೨೨. ಸರದಾರ್ ಕೆ. ಎಂ. ಪಣಿಕ್ಕರ್.

ಮಿತ್ರರಾದ ಜಯ್‌ಶಂಕರ್ ಪ್ರಸಾದ್ ಸೂಚಿಸಿದ 'ಹನ್ಸ್ (ಹಂಸ)' ಎಂಬ ಹೆಸರಿನ ಪತ್ರಿಕೆ ಮತ್ತು ಸರಸ್ವತಿ ಪ್ರೆಸ್‌ಗಳ ಮೂಲಕ ಪ್ರೇಮ್‌ಚಂದ್ ರಾಷ್ಟ್ರ ಮಟ್ಟದಲ್ಲಿ ಲೇಖಕರ ಗೌರವಕ್ಕೆ ಪಾತ್ರರಾದರು. ಕೊನೆಯಲ್ಲಿ ಕೆಲ ಕಾಲದ ಮಟ್ಟಿಗೆ 'ಹಂಸ' ಪತ್ರಿಕೆಯ ಹೊಣೆಯನ್ನು ಭಾರತೀಯ ಸಾಹಿತ್ಯ ಪರಿಷದ್ ತೆಗೆದುಕೊಂಡಿತ್ತು. ಪ್ರೇಮ್‌ಚಂದ್‌ರನ್ನು ಜನರು, ಸಂಸ್ಥೆಗಳು ವಿವಿಧ ಕಾರ್ಯಕ್ರಮಗಳಿಗೆ ಆಹ್ವಾನಿಸತೊಡಗಿದ್ದರು. ಪ್ರಥಮ ಅಖಿಲ ಭಾರತ ಪ್ರಗತಿಶೀಲ ಲೇಖಕ ಸಂಘದ ಅಧ್ಯಕ್ಷತೆ ಅವರಿಗೆ ಸಿಕ್ಕ ದೊಡ್ಡ ಸನ್ಮಾನ. ತಮ್ಮ ಕೊನೆಯ ಉಸಿರು ಇರುವವರೆಗೂ ಬರೆಯುತ್ತಿದ್ದ ಪ್ರೇಮ್‌ಚಂದ್ 'ಗೋದಾನ್' ಕಾದಂಬರಿಯನ್ನು ಆಗತಾನೇ ಮುಗಿಸಿದ್ದರು. ಆನಂತರ 'ಮಂಗಲ್‌ಸೂತ್ರ' ಬರೆಯತೊಡಗಿದ್ದರು. 'ಮಹಾಜನೀ ಸಭ್ಯತಾ (ಬಂಡವಾಳಶಾಹಿ ವ್ಯವಸ್ಥೆ)' ಅವರು ಬರೆದ ಕೊನೆಯ ಮಹತ್ವದ ಲೇಖನ. ಇದು ಅವರು ನಿಧನಹೊಂದುವ ೨ ತಿಂಗಳು ಮೊದಲು 'ಹಂಸ' ಪತ್ರಿಕೆಯಲ್ಲಿ ಪ್ರಕಟವಾಯಿತು. ವೈಚಾರಿಕವಾಗಿ ಈವರೆಗೆ ಕಾಂಗ್ರೆಸ್‌ಅನ್ನು ಬೆಂಬಲಿಸುತ್ತಿದ್ದ ಪ್ರೇಮ್‌ಚಂದ್ ತಮ್ಮ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಪಟ್ಟ ಪಾಡು ಮತ್ತು ಗಳಿಸಿದ ಕಟು ಅನುಭವಗಳ ಹಿನ್ನೆಲೆಯಲ್ಲಿ ಸಂಪೂರ್ಣ ಸಾಮ್ಯವಾದಿಯಾದರು ಎಂಬುದು ಈ ಲೇಖನದಿಂದ ವಿದಿತವಾಗುತ್ತದೆ.

೩

೧೯ನೆಯ ಶತಮಾನದ ಕೊನೆಯಲ್ಲಿ, ೧೮೮೨ರ ಹೊತ್ತಿಗೆ ಪ್ರಕಟವಾದ ಶ್ರೀನಿವಾಸ್‌ದಾಸ್ ಅವರ 'ಪರೀಕ್ಷಾ ಗುರು' ಹಿಂದಿಯ ಮೊದಲ ಕಾದಂಬರಿ ಎಂದು

ಭಾವಿಸಲಾಗಿದೆ. ೧೮೯೦ರಲ್ಲಿ ಪ್ರಕಟವಾದ ದೇವಕೀನಂದನ್ ಖತ್ರೀ ಅವರ 'ಚಂದ್ರಕಾಂತಾ' ಮತ್ತು ನಂತರ ಈ ಮಾಲಿಕೆಯಲ್ಲಿ ಬಂದ ಕಾದಂಬರಿ ಸರಣಿಯಿಂದ ಓದುಗರಲ್ಲಿ ಕಾದಂಬರಿ ಪ್ರಕಾರದ ಆಸಕ್ತಿ ಹೆಚ್ಚತೊಡಗಿತು. ಆ ನಂತರ ಬಂಗಾಲೀ, ಇಂಗ್ಲಿಷ್ ಕಾದಂಬರಿಗಳ ಮಾದರಿಯಲ್ಲಿ ಅನೇಕ ಕೃತಿಗಳು ಬಂದುವು. ಗೋಪಾಲ್‌ರಾಮ್ ಗಹ್‌ಮರೀ, ಕಾರ್ತಿಕ್‌ಪ್ರಸಾದ್ ಖತ್ರೀ, ಕಿಶೋರೀಲಾಲ್ ಗೋಸ್ವಾಮಿ ಮುಂತಾದವರು ನಿಯಮಿತವಾಗಿ ಬರೆಯತೊಡಗಿದರು. ಪದ್ಯ ಪ್ರಕಾರದಿಂದ ಹೊರಬಂದು 'ಖಡೀಬೋಲೀ' ಗದ್ಯದಲ್ಲಿ ಕಾದಂಬರಿಗಳು ರಚಿತಗೊಂಡವು. ಇವುಗಳಲ್ಲಿ ಕಲ್ಪನೆ, ವಾಸ್ತವತೆ, ಉಪದೇಶ, ಮನರಂಜನೆ, ಸಮಾಜ, ಚರಿತ್ರೆ, ಪುರಾಣ, ಧರ್ಮ ಮುಂತಾದ ವಿಷಯಗಳ ಚರ್ಚೆ ಇರುತ್ತಿತ್ತು. ಬರಬರುತ್ತ ಲೇಖಕರಲ್ಲಿ ಭಾಷಾ ಕಾಳಜಿ ಮತ್ತು ಪ್ರಬುದ್ಧತೆ ಹೆಚ್ಚಿದಂತೆ ಒಳ್ಳೆಯ ಕೃತಿಗಳು ಪ್ರಕಟವಾಗತೊಡಗಿದವು. ಕಲಾತ್ಮಕತೆ ಮತ್ತು ವಸ್ತುನಿರೂಪಣೆಯಲ್ಲಿ ಪ್ರಗತಿ ಕಾಣತೊಡಗಿತು, ಸಾಮಾಜಿಕ ಚಿತ್ರಣಕ್ಕೆ ಪ್ರಾಧಾನ್ಯತೆ ಲಭಿಸತೊಡಗಿತು. ೧೮೮೨ರಿಂದ ೧೯೧೫ರವರೆಗಿನ ಆರಂಭದ ಘಟ್ಟದಲ್ಲಿ ಬರೆದವರಲ್ಲಿ ದೇವಕೀನಂದನ್ ಖತ್ರೀ, ಕಿಶೋರೀಲಾಲ್ ಗೋಸ್ವಾಮಿ, ಬ್ರಜ್‌ನಂದನ್ ಸಹಾಯ್ ಪ್ರಮುಖರೆನಿಸಿದರು.

ಇದೇ ಕಾಲದಲ್ಲಿ ಈ ಘಟ್ಟದ ಜೊತೆಗೇ ಬಂದು ಹೊಸ ದಾರಿ ತೆರೆದ ಪ್ರೇಮ್‌ಚಂದ್ ನವಯುಗದ ಪ್ರವರ್ತಕರಂತೆ ಬರೆಯತೊಡಗಿದರು. ಆದರ್ಶವಾದ ಅವರ ಬರವಣಿಗೆಯ ಮುಖ್ಯ ಆದ್ಯತೆಯಾಗಿತ್ತು. ಒಂದು ನಿಶ್ಚಿತ ಉದ್ದೇಶ, ವಿಚಾರ, ಸಾಮಾಜಿಕ ಚಿಂತನೆಯ ಹಿನ್ನೆಲೆಯಲ್ಲಿ ಅವರು ತಮ್ಮ ಪಾತ್ರಗಳನ್ನು ರೂಪಿಸತೊಡಗಿದರು. ಸಮಕಾಲೀನ ಪಾತ್ರಗಳಲ್ಲಿ ಎಲ್ಲ ವರ್ಗ, ಜಾತಿ, ಧರ್ಮಗಳ, ಹಳ್ಳಿ ಪಟ್ಟಣಗಳ, ಸಾಮಾನ್ಯ ಮನೆತನದ, ಅಧಿಕಾರಸ್ಥರ, ದೇಶಿ ವಿದೇಶೀ ಹಿನ್ನೆಲೆಯ ಪಾತ್ರಗಳು, ಜನಸೇವಕ ಜನಹಿತ ವಿರೋಧದ – ಹೀಗೆ ದೊಡ್ಡ ಕ್ಯಾನ್‌ವಾಸ್ ಇಟ್ಟುಕೊಂಡು ಪ್ರೇಮ್‌ಚಂದ್ ಬರೆಯತೊಡಗಿದರು. ಆರಂಭದಿಂದ ಕೊನೆಯವರೆಗೆ ಪ್ರೇಮ್‌ಚಂದ್ ಬರೆದ ಕಾದಂಬರಿಗಳಲ್ಲಿ ಅವರ ವ್ಯಕ್ತಿತ್ವ, ಅನುಭವ, ವೈಚಾರಿಕ ನಿಲುವು, ಸಾಮಾಜಿಕ ಚಿಂತನೆಯ ಮುಖಗಳು ಚಿತ್ರಿತವಾಗಿರುವುದನ್ನು ಸಹಜವಾಗಿ ಗುರುತಿಸಬಹುದು.

ಸಪ್ತಸರೋಜ್, ನವ್‌ನಿಧಿ, ಪ್ರೇಮ್‌ಪೂರ್ಣಿಮಾ, ಪ್ರೇರಣಾ, ಗುಪ್ತಧನ್ ಮುಂತಾದ ಹೆಸರಿನ ೧೫ ಸಂಗ್ರಹಗಳಲ್ಲಿ ಮತ್ತು ಮಾನ್‌ಸರೋವರ್ ಹೆಸರಿನ ೮ ಭಾಗಗಳಲ್ಲಿ ಪ್ರೇಮ್‌ಚಂದ್ ಬರೆದ, ಅವರಿದ್ದಾಗ ಸಿಕ್ಕಿದ್ದ, ಆಗಲೇ ಪ್ರಕಟವಾಗಿದ್ದ ೨೨೪ ಕತೆಗಳು ಮತ್ತು ಮರಣಾನಂತರ ಸಂಗ್ರಹಿತಗೊಂಡುವೂ ಸೇರಿ ಒಟ್ಟು ೩೦೦ಕ್ಕಿಂತ ಹೆಚ್ಚು ಕತೆಗಳು ಪ್ರಕಟಗೊಂಡಿವೆ. ಅವುಗಳಲ್ಲಿ ರಾನೀ ಸಾರಂಧಾ, ಬಡೇ ಘರ್ ಕೀ ಬೇಟೀ, ನಮಕ್ ಕಾ ದಾರೋಗಾ, ಪಂಚ್ ಪರಮೇಶ್ವರ್, ಶತ್‌ರಂಜ್ ಕೇ ಖಿಲಾಡೀ, ಸವಾ ಸೇರ್ ಗೇಹೂಂ, ಮಂತ್ರ, ಅಲಗ್ಯೋಝಾ, ಪೂಸ್ ಕೀ ರಾತ್, ದೋ ಬೈಲೋಂ ಕೀ ಕಥಾ, ಪಂಡಿತ್ ಮೋಟೇರಾಮ್ ಕೀ ಡಾಯರೀ, ಕಫನ್, ಠಾಕುರ್ ಕಾ ಕುಂಆ, ಗುಲ್ಲೀ ಡಂಡಾ, ಈದ್‌ಗಾಹ್ ಮುಂತಾದುವು ಸಾರ್ವಕಾಲಿಕ ಕಥೆಗಳು.

# ಅವಳಿಗೆ ಬರೆದ ಸಾಲುಗಳು






ನಿನ್ನ ಮೌನದ ಹೊಳವುಗಳೇ ಅರ್ಥವಾಗುತ್ತಿಲ್ಲ
ಅಡಗಿ ಕುಳಿತಿರುವ ಭೂಕಂಪದ ಕಂಗೆಟ್ಟ ಮೂಲವಾದರೂ ಯಾವುದು ?
ಮೌನವೆಂಬ ಸಜ್ಜನಿಕೆಯ ಪಿಸುಗುಟ್ಟುವಿಕೆ
ಅಂತರಾತ್ಮದ ಕುರುಹುಗಳಿಗೆ ನಾಟಿ ಮುಳ್ಳುಗಳಾಗಿ ಕಚ್ಚುತ್ತಿವೆ.

ನಿನ್ನ ತಣ್ಣನೆ ಕಣ್ಣಿನ ಆರ್ದ್ರತೆ ತಡಕಳಲಾಗುತ್ತಿಲ್ಲ
ಮುಸುಕು ಹೊದ್ದು ಮಲಗಿರುವ ಹಸಗೆಟ್ಟ ಸುನಾಮಿಯಾದರೂ ಯಾವುದು ?
ಕೀವನ್ನು ಗುಡುಕರಿಸಲಾರದ ನಿರ್ದಯತೆ
ಸಾವನ್ನೂ ಹಿಂಸಿಸಿ ಛೇಡಿಸುತ್ತಿದೆ.

ನಿನ್ನ ಹಸ್ತ ರೇಖೆಗಳಲಿ ಕಳೆದುಹೋದ ನನ್ನೂರದಾರಿಯ ಗುಟ್ಟು ಭೇದಿಸಲಾಗುತ್ತಿಲ್ಲ
ತಡೆಯೊಡ್ಡಿ ಕಾಡುತ್ತಿರುವ ಮಸಣದ ಕ್ಷುದ್ರ ಜಗತ್ತಾದರೂ ಯಾವುದು ?
ಕಾಲದ ಕಟ್ಟುಗಳ
ಛಿದ್ರಿಸಲಾಗದ ಕ್ಷಣಗಳು ಉಸಿರುಗಳನ್ನು ಹುರಿದಂತಾಗುತ್ತದೆ.

ಬರ್ಫದ ಕುಡಿಕೆಯಲಿ ಕಫದ ಗುಸುಗುಸು ಕೊಸರಾಟ ಸೈರಿಸಲಾಗುತ್ತಿಲ್ಲ
ಮುತ್ತಲಿರುವ ಭೀಕರ ರೋಗದ ಸೊಳ್ಳೆ ಮೊಟ್ಟೆಯಾದರೂ ಯಾವುದು ?
ಎದ್ದ ಬಿಳಿ ಹುಳುಗಳ ದಂಡು
ಮಾಂಸವನ್ನು ಕಳಚಿ ಎಲುಬನ್ನು ತಿಂದು ಆಕಳಿಸುವಂತಿದೆ.
ಪ್ರಳಯದ ಅವಿರತ ಚರ್ಚೆ ತಲೆ ಬುರುಡೆಯ ಕೀಲು ಒಡೆಯುವಂತಿದೆ
ನಂಬಿಕೆ ಕೈಬಿಟ್ಟ ದಿನಕ್ಕೆ ಪಾಲಿಗುಳಿದ ಭೂಮಿಯ ತುಂಡಾದರೂ ಯಾವುದು ?
ಇಲ್ಲವಾಗುವ ವಿಕಾರತೆ
ಗುದ್ದಿಗೆ ಜಡಿದ ವಿಳಾಸ ಕಲ್ಲಿನಂತಿದೆ.

ಬದುಕಿನ ಅರೆಸುಟ್ಟ ಸ್ಥಿತಿಗಳನ್ನು ತಡೆಯಲಾಗುತ್ತಿಲ್ಲ
ಇನ್ನೂ ನಿನ್ನೊಂದಿಗೆ ಮಾತ್ರ ಉಳಿದುಬಿಡುವ ಛಲವಾದರೂ ಯಾವುದು ?
ಕೂಡುವಿಕೆಯ ಒಡಂಬಡಿಕೆ
ನನ್ನ ನಿನ್ನ ಹುಟ್ಟು ಸಾವುಗಳ ಲಾಡಿಯಂತಿದೆ.

ಜಗದ ಪ್ರೇಮ ಕವಿತೆಗಳಿಗೆ ಸಾವಿನ ಭಯವಿಲ್ಲ
ಅದಕ್ಕೆ ಸೋತು ಗೆಲ್ಲುವ ಉಮೇದು.

**ಸೈಫ್ ಜಾನ್ಸ್, ಕೊಟ್ಟೂರು**
ಕೇರಾಫ್ : ಜಂಬೋಬನಹಳ್ಳಿ ಮಲ್ಲಪ್ಪ
ಮನೆ ಸಂಖ್ಯೆ : ೭೦೫/೭, ಬಸವೇಶ್ವರ ನಗರ, ಕೊಟ್ಟೂರು – ೫೮೩ ೧೩೪
ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ

ಸಂಗ್ರಾಮ್ (೧೯೨೩), ಕರ್ಬಲಾ (೧೯೨೪), ಪ್ರೇಮ್ ಕೀ ವೇದೀ (೧೯೩೩) ಪ್ರೇಮ್‌ಚಂದ್ ಅವರು ರಚಿಸಿದ ಮೂರು ನಾಟಕಗಳು. ಉರ್ದು ಭಾಷೆಗೆ ಮಾಡಿದ ಅನುವಾದಗಳೂ ಇವೆ. ಜೊತೆಗೆ ಮಕ್ಕಳಿಗಾಗಿ ಬರೆದ ಕತೆಗಳು ಅವರ ಲೇಖನಿಯಿಂದ ಮೂಡಿಬಂದಿವೆ.

ಅವರ 'ಸೇವಾಸದನ್', 'ಪ್ರೇಮಾಶ್ರಮ್', 'ರಂಗಭೂಮಿ', 'ಕಾಯಕಲ್ಪ', 'ಕರ್ಮಭೂಮಿ', 'ಗಬನ್', 'ಗೋದಾನ್' 'ಪ್ರತಿಜ್ಞಾ' ಕಾದಂಬರಿಗಳಲ್ಲಿ ಪ್ರೇಮ್‌ಚಂದ್ ಮಹಿಳೆಯರ ಸಮಸ್ಯೆಗಳು, ಜಮೀನುದಾರರು ಮತ್ತು ರೈತರ ನಡುವಣ ಸಂಘರ್ಷ, ಔದ್ಯೋಗಿಕ ಬೆಳವಣಿಗೆಯ ಕಾರಣ ಬಡವರು, ರೈತರು, ಭೂರಹಿತ ಕೂಲಿಕಾರರು ಎದುರಿಸಬೇಕಾಗಿ ಬಂದ ಸಂಕಷ್ಟಗಳು, ಸಾಮಾಜಿಕ, ರಾಜಕೀಯ ಮತ್ತು ಕೋಮು ಸಮಸ್ಯೆಗಳು, ಅಂದಿನ ಕಾಲದ ರಾಜಕೀಯ ಸಮಸ್ಯೆಗಳು, ಮನುಷ್ಯ ಮನುಷ್ಯರ ನಡುವೆ ನಡೆಯುವ ಮೋಸದ ಕೃತ್ಯಗಳು, ವಂಚನೆ, ಭ್ರಷ್ಟಾಚಾರ, ರೈತರ, ರೈತಕೂಲಿಕಾರರ ಬವಣೆ, ವಿಧವೆಯರ, ಅಸ್ಪೃಶ್ಯರ ಸಮಸ್ಯೆಗಳು ಮುಂತಾದುವು ಅತ್ಯಂತ ಪರಿಣಾಮ ಕಾರಿಯಾಗಿ ಚಿತ್ರಿಸಲ್ಪಟ್ಟಿವೆ. ಅವರು ಬರೆಯ ತೊಡಗಿದ್ದ 'ಮಂಗಲ್‌ಸೂತ್ರ' ಕಾದಂಬರಿಯನ್ನು ಪೂರ್ಣಗೊಳಿಸಲು ಸಾಧ್ಯವಾಗಲಿಲ್ಲ.




೪

ಪ್ರೇಮ್‌ಚಂದ್ ಹಿಂದಿಯಲ್ಲಿ ಬರೆದ ೩೦೦ ಕತೆಗಳಲ್ಲದೆ, ಉರ್ದು ಭಾಷೆಯಲ್ಲಿ ಬರೆದ ೧೦೦ಕ್ಕಿಂತಲೂ ಹೆಚ್ಚು ಕತೆಗಳಿವೆ. ಮೊದಮೊದಲು ಭಾವನಾಪ್ರಧಾನ ಕಥೆ ಬರೆಯುತ್ತಿದ್ದ ಪ್ರೇಮ್‌ಚಂದ್ ನಂತರ ವೈಚಾರಿಕ, ಮನೋವಿಶ್ಲೇಷಣಾತ್ಮಕ, ವಾಸ್ತವತಾ ಪ್ರಧಾನವಾದ ಕಥೆಗಳನ್ನು ಬರೆದರು. ಅವರ ಬರವಣಿಗೆಯ ಭಾಷೆ, ಶೈಲಿ, ಪ್ರಯೋಗಗಳು ಸಹ ಹೆಚ್ಚು ಪ್ರೌಢವಾಗುತ್ತ ನಡೆದುವು. ಸಾಮಾಜಿಕ, ರಾಜಕೀಯ, ಗ್ರಾಮೀಣ ಹಾಗೂ ನಗರ ಜೀವನದ ಹಲವಾರು ಮಗ್ಗಲುಗಳ ಜೀವಂತ ಚಿತ್ರಣ ಅವರ ಕಥೆಗಳಲ್ಲಿ ಸಿಗುತ್ತದೆ. ಮಹಿಳೆಯರ ಬಗ್ಗೆ ಬರೆದ 'ಬಡೇ ಘರ್ ಕೀ ಬೇಟೀ', 'ಶಾಂತಿ', 'ಆಹುತಿ' ಮುಂತಾದುವು; ಗ್ರಾಮ ಜೀವನದ ಚಿತ್ರಣಕ್ಕೆ ಪ್ರಾಧಾನ್ಯ ನೀಡಿದ್ದ 'ಅಲಗ್ಯೋಝಾ', 'ಪೂಸ್ ಕೀ ರಾತ್', 'ಶಂಖನಾದ್' ಮುಂತಾದುವು; ಮನೋವಿಶ್ಲೇಷಣೆಗೆ ಒತ್ತು ಕೊಟ್ಟಿದ್ದ 'ನಶಾ', 'ಮಾತಾ ಕಾ ಹೃದಯ್', 'ಪಂಚ್ ಪರಮೇಶ್ವರ್', 'ಬಡೇ ಭಾಈ ಸಾಹಬ್' 'ಕಫನ್' ಮುಂತಾದುವು; ರಾಜಕೀಯ ಮತ್ತು ಸಮಾಜ ಚಿತ್ರಣಕ್ಕೆ ಒಲಿದ 'ಆ್ಯಕ್ಟ್ರೆಸ್', 'ಅಗ್ನಿಸಮಾಧಿ', 'ಸಮರ್‌ಯಾತ್ರಾ' ಮುಂತಾದ ಕಥೆಗಳು ಪ್ರೇಮ್‌ಚಂದ್ ಸಾಗಿ ಬಂದ ಪ್ರಯೋಗ ಮಾರ್ಗವನ್ನು ನಂತರ ಬಂದ ಎಲ್ಲ ಭಾರತೀಯ ಲೇಖಕರಿಗಾಗಿ ಪ್ರಶಸ್ತವಾಗಿ ಉಳಿಸಿವೆ. ಬದುಕುವುದಕ್ಕಾಗಿ, ಹಣಕ್ಕಾಗಿ ಆಗ ಮಾಡಿರಬಹುದಾದ ಅವರ ಅನುವಾದಗಳು ಸಹ ವಸ್ತುವಿನ ಆಯ್ಕೆ ಮತ್ತು ಗುಣಮಟ್ಟದ ದೃಷ್ಟಿಯಿಂದ ಪ್ರಶಂಸೆಗೆ ತಕ್ಕುದಾಗಿಯೇ ಇವೆ.

ಹಿಂದಿಯಂತೆ ಉರ್ದು ಭಾಷೆಯಲ್ಲಿಯೂ, ಕಥೆ ಮತ್ತು ಕಾದಂಬರಿ ಕ್ಷೇತ್ರಕ್ಕೆ ಪ್ರೇಮ್‌ಚಂದ್ ನೀಡಿದ ಕೊಡುಗೆಯನ್ನು ಸಾಹಿತಿಗಳು, ಸಾಹಿತ್ಯ ವಿಮರ್ಶಕರು ಗೌರವಪೂರ್ವಕವಾಗಿ ಪರಿಗಣಿಸುತ್ತಾರೆ.

೪

ಪ್ರೇಮ್‌ಚಂದ್ ಬದುಕಿದ್ದಾಗ ಒಂದೊಂದು ಅಕ್ಷರವನ್ನೂ ಬರೆದು, ಪ್ರಕಟಿಸಿ, ಮಾರಿ, ಹೊಟ್ಟೆ ಹೊರೆದುಕೊಳ್ಳಲು; ಅನಾರೋಗ್ಯವನ್ನು ತೊಡೆದುಕೊಳ್ಳಲು ಎಷ್ಟು ಯತ್ನಿಸಿದರೂ ಉಪವಾಸ, ವನವಾಸ ತಪ್ಪಿರಲಿಲ್ಲ. ತೀರಿಹೋದ ನಂತರ ಅವರು ಬರೆದ ಒಂದೊಂದು ಅಕ್ಷರವೂ ಬಂಗಾರದ ಬೆಲೆ ಹೊತ್ತು ಬೆಳಗುತ್ತಿದೆ. ಇದು ಇದ್ದವರ, ಪಡೆದವರ ಭಾಗ್ಯ. ಇಂದು ಸಾಹಿತ್ಯಲೋಕದಲ್ಲಿ 'ಪ್ರೇಮ್‌ಚಂದ್' ಅವರ ಹೆಸರನ್ನೂ ಅರಿಯದ ವ್ಯಕ್ತಿಗಳೇ ಇಲ್ಲ. ಅವರ ಬದುಕು ಮತ್ತು ಸಾಹಿತ್ಯವನ್ನು ಕುರಿತು ಅಸಂಖ್ಯಾತ ವ್ಯಕ್ತಿಗಳು ಅಭಿಮಾನದಿಂದ ಬರೆದಿದ್ದಾರೆ, ಈಗಲೂ ವಿವಿಧ ದೃಷ್ಟಿಕೋನ ಗಳಿಂದ ಅವರ ಸಾಹಿತ್ಯ ಸಾಗರವನ್ನು ಮಥಿಸುತ್ತಿದ್ದಾರೆ. ತಮ್ಮ ತಮ್ಮ ಪಾಲಿನ ರತ್ನ ಭಾಗ್ಯ ಪಡೆಯುತ್ತಿದ್ದಾರೆ. ತಾನು ಸದಾ ಕಾಲವೂ 'ಅಕ್ಷರದ ಆಳು, ಕೂಲಿಕಾರ, ಮಜದೂರ್, ರೈತ, ಹೋರಾಡುವ ಸೈನಿಕ' ಎಂದು ಹೇಳಿಕೊಳ್ಳುತ್ತಿದ್ದ ಪ್ರೇಮ್‌ಚಂದ್‌ರನ್ನು ನಿಜವಾಗಿ ಅರಿಯಲು ಪ್ರೇಮಚಂದ್ ಪತ್ನಿ ಶಿವರಾನೀ ದೇವಿ ಬರೆದ 'ದಿನಚರಿ : ಸ್ಮರಣಗ್ರಂಥ', ಮದನ್ ಗೋಪಾಲ್ ಬರೆದ 'ಕಲಮ್ ಕಾ ಮಜ್‌ದೂರ್ : ಪ್ರೇಮ್‌ಚಂದ್' (೧೯೬೨-೬೫) ಪುತ್ರ ಅಮೃತ್‌ರಾಯ್ ಬರೆದ 'ಪ್ರೇಮ್‌ಚಂದ್ : ಕಲಮ್ ಕಾ ಸಿಪಾಹೀ (೧೯೬೨)' ಈ ರತ್ನತ್ರಯಗಳನ್ನು ಮಾತ್ರ ಅವಶ್ಯ ಓದಬೇಕು.

ಪ್ರೇಮ್‌ಚಂದ್ ೧೯೩೪ರ ಜನವರಿಯಲ್ಲಿ ಬೆಂಗಳೂರು, ಮೈಸೂರಿಗೆ ಬಂದು ಹೋಗಿದ್ದಾರೆ. ಅವರ ಪತ್ರಗಳಲ್ಲಿ, ಪ್ರವಾಸ-ವರ್ಣನೆಗಳಲ್ಲಿ ಸರ್ ಮಿರ್ಜಾ ಇಸ್ಮಾಯಿಲ್, ಸರ್ ಸಿ. ವಿ. ರಾಮನ್ ಅವರನ್ನು ಮಾತಾಡಿಸಿದ್ದು, ಮೈಸೂರು, ಶ್ರೀರಂಗಪಟ್ಟಣ, ಬೆಂಗಳೂರಿನ ಅರಮನೆ, ಉದ್ಯಾನಗಳನ್ನು ನೋಡಿದ್ದು, ಟಾಟಾ ಸಂಸ್ಥೆಗೆ ಹೋಗಿದ್ದು, ಹಿಂದೀ ಪ್ರಚಾರಕ್ಕಾಗಿ ಇಲ್ಲಿಯ ಆಗಿನ ಕೆಲವು ಹಿಂದಿ ಪ್ರಚಾರಕರು, ಅಧ್ವರ್ಯುಗಳೊಡನೆ ಚರ್ಚಿಸಿದ್ದು ಮುಂತಾದ ವಿಷಯಗಳನ್ನು ವಿವರವಾಗಿ ಬರೆದಿದ್ದಾರೆ. 'ಹಂಸ' ಪತ್ರಿಕೆಯ ೧೯೩೪ ಫೆಬ್ರವರಿ-ಮಾರ್ಚ್ ಸಂಚಿಕೆ ಯಲ್ಲಿ ಪ್ರಕಟವಾದ ಅವರ 'ದಕ್ಷಿಣ್ ಭಾರತ್ ಮೇಂ ಹಮಾರೀ ಹಿಂದಿ ಪ್ರಚಾರ್-ಯಾತ್ರಾ' ಒಂದು ಮಹತ್ವದ ಲೇಖನ. ಗಾಂಧೀಜಿ ಭಾರತದ ಐಕ್ಯಕ್ಕಾಗಿ ಹಿಂದೂ ಮತ್ತು ಮುಸಲ್ಮಾನರನ್ನು ಒಗ್ಗೂಡಿಸುವ ಮೂಲಕ ಪ್ರಯತ್ನಿಸಿದಂತೆಯೇ, ಹಿಂದೀ ಮತ್ತು ಉರ್ದು ಭಾಷೆಗಳ ಸಮ್ಮಿಲಿತ ಪ್ರಯೋಗದ ಮೂಲಕ ಹಿಂದುಸ್ತಾನಿ ಭಾಷೆಯನ್ನು ಪ್ರಚುರಗೊಳಿಸಿ ಶ್ರಮಿಸಿದವರು ಪ್ರೇಮ್‌ಚಂದ್.

ಪ್ರೇಮ್‌ಚಂದ್ ೧೯೩೬ರ ಅಕ್ಟೋಬರ್ ೮ನೇ ತಾರೀಖು ಬೆಳಗ್ಗೆ ದೈಹಿಕವಾಗಿ ದಿವಂಗತರಾದರು. ವಿಶ್ವಸಾಹಿತ್ಯದಲ್ಲಿ ಭಾರತೀಯ ಸಾಹಿತ್ಯ ಸೂರ್ಯನನ್ನು ಶಾಶ್ವತವಾಗಿ ಬೆಳಗಿಸಿದ ಒಬ್ಬ ಶ್ರೇಷ್ಠ 'ಮಾಸ್ಟರ್' ಕಾಶಿಯಲ್ಲಿ ಕಾಣದಾದರು. ಅವರು ವೈಯಕ್ತಿಕ ಹೋರಾಟ ಮಾಡುತ್ತ ಮಾಡುತ್ತ ತಮಗೆ ಅರಿವಿಲ್ಲದಂತೆಯೇ ಅದ್ಭುತ ಬದುಕನ್ನು ಬದುಕಿದ್ದರು; ಉರ್ದು ಮತ್ತು ಹಿಂದಿ, ಸ್ವಲ್ಪಮಟ್ಟಿಗೆ ಇಂಗ್ಲಿಷಿನಲ್ಲಿಯೂ ಅಪಾರ ಸಾಹಿತ್ಯವನ್ನು ಸೃಜಿಸಿದ್ದರು. ಬದುಕಿದ್ದಾಗಲೇ ಅವರ ಕೃತಿಗಳ ಮಹತ್ವವನ್ನು ಅರಿತಿದ್ದ ಕೆಲವರು ಅವರ ಹಲವಾರು ಕೃತಿಗಳನ್ನು ರಶಿಯನ್, ಜರ್ಮನ್, ಜಪಾನಿ, ಇಂಗ್ಲಿಷ್, ಮರಾಠಿ, ಗುಜರಾತಿ, ತಮಿಳು ಭಾಷೆಗಳಿಗೆ ಅನುವಾದಿಸತೊಡಗಿದ್ದರು. ಪ್ರೇಮ್‌ಚಂದ್ ತಾವು ಬದುಕಿದ್ದ ೫೬ ವರ್ಷಗಳಲ್ಲಿ ೫೬೦ ವರ್ಷಗಳಷ್ಟು ಜೀವನ ದ್ರವ್ಯವನ್ನು ಅನುಭೋಗಿಸಿದರು. ಅದೆಲ್ಲವನ್ನೂ ಅಕ್ಷರಗಳಲ್ಲಿ ಅಮರಗೊಳಿಸಿ ಕಾಲಕ್ಕೆ ಮರಳಿಸಿಹೋದರು. ಪ್ರೇಮ್‌ಚಂದ್ ಹೆಸರಿನಲ್ಲಿ ಯಾವುದೇ ಪ್ರತಿಷ್ಠಾನ ಇತ್ಯಾದಿ ಸ್ಥಾಪಿತಗೊಂಡಿರಲಿಲ್ಲ; ಹೀಗಾಗಿ ಪ್ರೇಮ್‌ಚಂದ್ ನಿಧನ ಹೊಂದಿ ಐವತ್ತು ವರ್ಷಗಳು ಮುಗಿಯುವ ಹೊತ್ತಿಗೆ, ಕಾನೂನು ಪ್ರಕಾರ ಸಮಗ್ರ ಪ್ರೇಮ್‌ಚಂದ್ ಸಾಹಿತ್ಯ ಸಾರ್ವಜನಿಕ ಆಸ್ತಿಯಾಗಲಿತ್ತು, ಜನತೆಯ ಸಂಪತ್ತಾಗಲಿತ್ತು, ಆಗಬೇಕಿತ್ತು ; ಆದರೆ, ಭಾರತದ ಬಹುಪಾಲು ಹಿಂದಿ ಪ್ರಕಾಶಕರು, ಮೊದಲೇ ಸಿದ್ಧಪಡಿಸಿ ಇಟ್ಟುಕೊಂಡಿದ್ದ , ಸಮಸ್ತ ಪ್ರೇಮ್‌ಚಂದ್ 'ಸಾಹಿತ್ಯಸಂಪತ್ತನ್ನು' ತಮ್ಮದನ್ನಾಗಿಸಿಕೊಂಡು, ತಮ್ಮ ತಮ್ಮ ರೀತಿಯಲ್ಲಿ, ೧೯೮೬ರ ಅಕ್ಟೋಬರ್ ೨ನೇ ವಾರದಲ್ಲಿ ಪೈಪೋಟಿಯಿಂದ ಬಿಡುಗಡೆ ಮಾಡಿದ ಪರಿ ನನಗೆ ನೆನಪಿದೆ. ಪ್ರೇಮಚಂದ್ ಸಾಹಿತ್ಯದ ಈ ಸಂಪುಟಗಳನ್ನು ಕಂಡಾಗ, ಪ್ರೇಮ್‌ಚಂದ್ ನಿಧನ ಹೊಂದುವ ಮೊದಲು ಬರೆದು ಪ್ರಕಟಿಸಿದ್ದ, ಅವರ ಮೃತ್ಯುಪತ್ರದಂತಿದ್ದ, 'ಮಹಾಜನೀ ಸಭ್ಯತಾ' ಲೇಖನವನ್ನು ಮತ್ತೊಮ್ಮೆ ಓದಬೇಕೆನ್ನಿಸಿತು !

ಪ್ರೇಮ್‌ಚಂದ್ ನಿಧನ ಹೊಂದಿದ ಸುದ್ದಿ ತಿಳಿದಾಗ ಸಮಸ್ತ ಭಾರತದ ಸಾಹಿತಿಗಳನ್ನು, ಪ್ರಜೆಗಳನ್ನು ಉದ್ದೇಶಿಸಿ ರವೀಂದ್ರನಾಥ್ ಠಾಕೂರ್ ಹೀಗೆ ಉದ್ಗರಿಸಿದ್ದರು : "ನಿಮಗೆ ಒಂದು ರತ್ನ ಸಿಕ್ಕಿತ್ತು, ಕಳೆದುಕೊಂಡುಬಿಟ್ಟಿರಿ...!"


**ಡಾ॥ ಸಿದ್ಧಲಿಂಗ ಪಟ್ಟಣಶೆಟ್ಟಿ**
'ಹೂಮನೆ', ಶ್ರೀದೇವಿನಗರ, ವಿದ್ಯಾಗಿರಿ, ಧಾರವಾಡ – ೫೮೦ ೦೦೪

# ಸ್ತ್ರೀ ಅಸ್ಮಿತೆಯ ಪರಿಕಲ್ಪನೆ

ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ತಿತ್ವದಲ್ಲಿರುವುದು ಲಿಂಗ ರಾಜಕಾರಣ. ಈ ಲಿಂಗ ರಾಜಕಾರಣ ಪುರುಷ ಮತ್ತು ಮಹಿಳೆಯರಿಗೆ ಒಂದಲ್ಲ ಒಂದು ರೀತಿಯಲ್ಲಿ ಆತಂಕಿತ ಮನೋಭಾವವನ್ನು ಹುಟ್ಟಿಸುತ್ತದೆ. ಹಾಗಾಗಿ, ಉಳಿವಿಗಾಗಿ ಹೋರಾಟ ಎಂಬ ನೆಲೆಯಲ್ಲಿ ಅಸ್ಮಿತೆಯ ಹುಡುಕಾಟ ಸೃಷ್ಟಿಯಾಗುತ್ತದೆ. ತಾನು ಶೋಷಿತಳು, ತನ್ನ ಅವಕಾಶ, ಅಧಿಕಾರಗಳನ್ನು ಪುರುಷ ಪ್ರಧಾನ ವ್ಯವಸ್ಥೆಯು ಕಸಿದುಕೊಂಡಿದೆ ಎಂಬ ಮನೋಭಾವ ಮಹಿಳೆಯರಲ್ಲಿ ಜಾಗೃತವಾದ ಕಾರಣಗಳಿಂದಾಗಿ ಅಸ್ಮಿತೆಯ ಪ್ರಶ್ನೆಯು ಹುಟ್ಟಿಕೊಂಡಿತು. ಹಾಗೆಯೇ ಒಟ್ಟು ವರ್ಗ ಹೋರಾಟದಲ್ಲಿ ಪುರುಷ, ಮಹಿಳೆ ಹಾಗೂ ಎಲ್ಲ ಧರ್ಮದ, ಜಾತಿಯ ಜನರು ಸೇರಬೇಕೆಂದು ಬಯಸುವ ವರ್ಗ ಹೋರಾಟ ಚಳುವಳಿಗಳನ್ನು ಒಡೆಯಲು ಅಸ್ಮಿತೆಯ ಪ್ರಶ್ನೆಯನ್ನು ಹುಟ್ಟುಹಾಕಲಾಯಿತು. ಅಂದರೆ ಕೂಡುನೆಲೆಯ ಹೋರಾಟಕ್ಕೆ ಆಸ್ಪದ ನೀಡದೆ ಜನರನ್ನು (ಸಮುದಾಯ) ಬಿಡಿಬಿಡಿಗೊಳಿಸುವ ಜಾಗತೀಕರಣ ಮತ್ತು ಬಂಡವಾಳಶಾಹಿ ಹುನ್ನಾರವು ಅಸ್ಮಿತೆಯ ಪ್ರಶ್ನೆಯ ಬೀಜಗಳನ್ನು ಬಿತ್ತಿತು.

**ಗಾಯಿತ್ರಿ ಟಿ. ಪಾಂಚಜನ್ಯ**

'ಐಡೆಂಟಿಟಿ' ಅಥವಾ 'ಅಸ್ಮಿತೆ' ಎಂಬ ಪದವು ಇತ್ತೀಚೆಗೆ ಬೌದ್ಧಿಕ ವಲಯದಲ್ಲಿ ಬಹಳ ಚಾಲ್ತಿಯಲ್ಲಿದೆ. ದಿನನಿತ್ಯದ ಬರಹ, ಚಿಂತನೆ, ಆಗು–ಹೋಗುಗಳಲ್ಲಿ ಅಸ್ಮಿತೆಯ ಚರ್ಚೆಗಳನ್ನು ಕಾಣಬಹುದು. ಅಸ್ಮಿತೆಯ ಪ್ರಶ್ನೆಗಳು ಸಮಾಜ, ಸಂಸ್ಕೃತಿ, ಪ್ರದೇಶ, ಲಿಂಗ, ಭಾಷೆ ಮೊದಲಾದವುಗಳ ನೆಲೆಯಲ್ಲಿ ಬದಲಾಗುತ್ತಾ ಹೋಗುತ್ತವೆ. ಭಾರತ ಐಕ್ಯತಾಶೀಲ ರಾಷ್ಟ್ರ, ನಾವೆಲ್ಲರೂ ಒಂದೇ ಎಂಬ ಘೋಷವಾಕ್ಯಗಳು ಹಲವಿದ್ದರೂ, ಒಳನೋಟದಲ್ಲಿ ಜನರು ತಮ್ಮ ಅಸ್ಮಿತೆಯ ಬಗೆಗೆಯೇ ಹೆಚ್ಚಿನ ಹೊಡೆದಾಟ ಮಾಡುತ್ತಿದ್ದಾರೆ. ಅಸ್ಮಿತೆಯನ್ನು 'ಅನನ್ಯತೆ' ಎಂಬ ಹೆಸರಿನಿಂದ ಕರೆಯಬಹುದಾದರೂ, ಜನರಲ್ಲಿ ಐಡೆಂಟಿಟಿ ಕ್ರೈಸಿಸ್ ಎನ್ನುವುದು ತಾನು ಮೇಲು ಮತ್ತು ಇತರರು ಕೀಳು ಎಂಬ ಪರಸ್ಪರ ಅಸಹಿಷ್ಣುತೆಯನ್ನು ಹುಟ್ಟುಹಾಕುವ ವೈರುಧ್ಯದ ದಾರಿಯಲ್ಲಿ ಅಸ್ಮಿತೆ ಎನ್ನುವುದು ಪ್ರಸ್ತುತ ದಿನಗಳಲ್ಲಿ ಮುನ್ನಡೆಯುತ್ತಿದೆ. ಅಸ್ಮಿತೆಯ ಪ್ರತಿ ಹಂತದಲ್ಲಿಯೂ ಇತರರೊಂದಿಗೆ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತದೆ. ತನ್ನ ಚಹರೆಯ ಹುಡುಕಾಟದಲ್ಲಿನ ವ್ಯಕ್ತಿ ತಾನು ಯಾರು, ತನ್ನ ಗೌರವ ಏನು ಈ ಸಮಾಜದಲ್ಲಿ ಎನ್ನುವಂತಹ ಹಲವು ವಿಚಾರಗಳನ್ನು ಸದಾ ತನ್ನ ವ್ಯಕ್ತಿಗತ ಮನಸ್ಸಿನಲ್ಲಿ ವ್ಯಕ್ತಪಡಿಸುತ್ತಿರುತ್ತಾನೆ. ಒಬ್ಬನು ಇನ್ನೊಬ್ಬನಿಂದ ನಾನಾ ವಿಧದ ಅಸ್ಮಿತೆಗಳಿಂದ ಗುರುತಿಸಲ್ಪಡುವ ಪ್ರಕ್ರಿಯೆಯೇ ಅಸ್ಮಿತೆಯ ಪ್ರಕ್ರಿಯೆ. 'ಅಸ್ಮಿತೆ' ಎಂದರೆ ವ್ಯಕ್ತಿಯನ್ನು ಗುರುತಿಸುವ ಬಗೆ. ಹೀಗೆ ನಾನಾ 'ಮಾರ್ಕರ್'ಗಳಿಂದ ತನ್ನನ್ನು ಇತರರಿಂದ ಗುರುತಿಸಲ್ಪಡಲು ಇಚ್ಛಿಸುತ್ತಾನೆ. ಇಲ್ಲಿ ಎರಡನೇ ವ್ಯಕ್ತಿಯ ಅವಶ್ಯಕವಿರುತ್ತದೆ. ಏಕೆಂದರೆ ಒಬ್ಬ ವ್ಯಕ್ತಿಯನ್ನು ವಿವಿಧ ಚಿಹ್ನೆಗಳಿಂದ ಗುರುತಿಸಬೇಕಾಗುತ್ತದೆ. ಉದಾಹರಣೆಗೆ ತಾನು ಯಾರು, ತಾನು ಒಂದು ಪ್ರದೇಶಕ್ಕೆ ಸೇರಿದವನು, ಒಂದು ಭಾಷೆಯನ್ನು ಮಾತನಾಡುವವನು, ಧರ್ಮ, ಸಂಸ್ಕೃತಿ ಇತ್ಯಾದಿ. ಹಾಗಾಗಿ ಅಸ್ಮಿತೆಯ ಬಳಕೆಯ ನೆಲೆಗಳು ಏಕರೂಪಿಯಾಗಿರುವುದಿಲ್ಲ. ಸಾಮಾನ್ಯವಾಗಿ ಅಸ್ಮಿತೆಯ ಪ್ರಶ್ನೆಗಳು ಭಾಷಿಕ ನೆಲೆಯಲ್ಲಿ ಉಂಟಾಗುವುದನ್ನು ಭಾಷಿಕ ಅಸ್ಮಿತೆ ಎಂದೂ, ಜನಾಂಗದ ಪ್ರಶ್ನೆಯಾಗಿ ಹುಟ್ಟಿಕೊಂಡ ಅಸ್ಮಿತೆಯನ್ನು ಜನಾಂಗಿಕ ಅಸ್ಮಿತೆ ಎಂದೂ, ಸಾಂಸ್ಕೃತಿಕ ಉಳಿವಿಗಾಗಿ ರೂಪಿತವಾದ ಅಸ್ಮಿತೆಯನ್ನು ಸಾಂಸ್ಕೃತಿಕ ಅಸ್ಮಿತೆ ಎಂದೂ, ಪ್ರದೇಶಕ್ಕೆ ಸಂಬಂಧಿಸಿದ ಅಸ್ಮಿತೆಯನ್ನು ಭೌಗೋಳಿಕ ಅಸ್ಮಿತೆ ಎಂದೂ ಗುರುತಿಸಲಾಗುತ್ತಿದೆ. ಹೀಗೆ ಅಸ್ಮಿತೆಯ ಬಳಕೆಯ ವ್ಯಾಪ್ತಿ ವಿಸ್ತೃತವೂ ಆಗಿದ್ದು, ಪ್ರಸ್ತುತದಿನಗಳಲ್ಲಿ ತೃತೀಯ ಲಿಂಗ/ಲೈಂಗಿಕ ಅಲ್ಪಸಂಖ್ಯಾತರ ಅಸ್ಮಿತೆಯವರೆಗೂ ಅದು ಬಳಕೆಯ ನೆಲೆ ವ್ಯಾಪಿಸಿಕೊಂಡಿದೆ.

**ಲಕ್ಷಣಗಳು :** ಅಸ್ಮಿತೆಯ ಹುಡುಕಾಟ ಎನ್ನುವುದು ಒಂದು ಎಚ್ಚೆತ್ತ ಪ್ರಜ್ಞಾಪೂರ್ವಕ ಸ್ಥಿತಿಯಾಗಿದೆ. ಅಂದರೆ ಅಸ್ಮಿತೆಯ ಪ್ರಶ್ನೆ ಎದುರಾಗುವುದು ದಮನಕ್ಕೆ ಒಳಗಾಗುತ್ತಿದ್ದೇನೆ ಎಂಬ ಪ್ರಜ್ಞೆ ಉಂಟಾದಾಗಲೇ ಅಸ್ಮಿತೆಯು ಜಾಗೃತವಾಗುತ್ತದೆ. ಹಾಗೆಯೇ ಒಂದು ನಿರ್ದಿಷ್ಟವಾದ ವ್ಯವಸ್ಥೆಯಲ್ಲಿ ತಮ್ಮ ದನಿಯನ್ನು ಕೇಳುವವರಿಲ್ಲ

ಎಂದೆನಿಸಿದಾಗಲೂ ಅಸ್ಮಿತೆಯ ಹುಡುಕಾಟದ ಪ್ರಶ್ನೆ ಎದುರಾಗುತ್ತದೆ. ಸಂಪತ್ತಿನ ಸಮಾನವಾಗಿ ಹಂಚಿಕೆಯನ್ನು ಮಾಡಲಾಗದ ಪ್ರಭುತ್ವವು ದುಡಿಯುವ ಜನರನ್ನು ಜಾತಿ – ಉಪಜಾತಿಗಳಲ್ಲಿ ಒಡೆದುಹಾಕಿದೆ. ಇದರ ಪ್ರತಿಫಲವಾಗಿ ಐಡೆಂಟಿಟಿ ರಾಜಕಾರಣ ಮುಂಚೂಣಿಗೆ ಬಂದಿದೆ. ಇಂತಹ ಅಸ್ಮಿತೆಯ ಲಕ್ಷಣಗಳನ್ನು ಅದರ ಸ್ವರೂಪದ ಆಧಾರದ ಮೇಲೆ ಈ ಕೆಳಗಿನಂತೆ ಗುರುತಿಸಬಹುದು:

* ತನ್ನತನದ ಅರಿವು
* ದಮನಿತ ಪ್ರಜ್ಞೆ
* ಆತಂಕಿತ ಮನೋಭಾವ
* ತನ್ನತನವನ್ನು ಪಡೆದುಕೊಳ್ಳುವ ಹಠ
* ಪರಂಪರೆಯನ್ನು ಕಟ್ಟಿಕೊಳ್ಳುವ ಪ್ರಯತ್ನ
* ಸಂಘಟನೆಯನ್ನು ರೂಪಿಸಿಕೊಳ್ಳುವಿಕೆ

**ಸ್ತ್ರೀ ಅಸ್ಮಿತೆಯ ಪರಿಕಲ್ಪನೆ :** ಈಗಾಗಲೇ ಹೇಳಿದಂತೆ ಅಸ್ಮಿತೆಯ ಪ್ರಶ್ನೆಯು ಜನಾಂಗಿಕ, ಪ್ರಾದೇಶಿಕ, ಲಿಂಗೀಯ ಆಯಾಮಗಳಲ್ಲಿ ಎದುರಾಗುತ್ತದೆ. ಪ್ರಸ್ತುತ ಸ್ತ್ರೀ ಅಸ್ಮಿತೆಯು ಲಿಂಗೀಯ ಆಯಾಮದಲ್ಲಿ ಎದುರಾಗುವ ಅಸ್ಮಿತೆಯ ಪ್ರಶ್ನೆಯಾಗಿದೆ. ಸಾಹಿತ್ಯ ಸಾಮಾಜಿಕ ವಲಯದಲ್ಲಿ ನಡೆಯುವ ಪ್ರತ್ಯೇಕೀಕರಣ ಮತ್ತು ತಾರತಮ್ಯದ ಹಿಂದಿರುವ ಲಿಂಗರಾಜಕಾರಣವನ್ನು ಈ ಪರಿಕಲ್ಪನೆ ವಿವರಿಸುತ್ತದೆ. ಈ ಹಿನ್ನೆಲೆಯಲ್ಲಿ, ಸ್ತ್ರೀ ಅಸ್ತಿತ್ವದ ಶೋಧಕ್ಕಾಗಿ ಪ್ರಧಾನವಾಹಿನಿಗೆ ಬಂದ ಕವಿ, ಲೇಖಕ, ಓದುಗ ಮೊದಲಾದವರು ಈ ಚರ್ಚೆಗಳತ್ತ ಗಮನಹರಿಸಿದರು. ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯು ಮಹಿಳೆಯನ್ನು ಎರಡನೇ ದರ್ಜೆಯ ಪ್ರಜೆ ಎಂದು ಭಾವಿಸಲಾಗಿದೆ. ಮನುವಾದಿ ವೈದಿಕಶಾಹಿ ವ್ಯವಸ್ಥೆಯೂ ಈ ಅಂಶವನ್ನೇ ಪುರಸ್ಕರಿಸಿದೆ. ೧೨ನೇ ಶತಮಾನದಲ್ಲಿ ತಲೆಯೆತ್ತಿದಂತಹ ವಚನ ಚಳುವಳಿಯು ಸ್ತ್ರೀ ವಿಮೋಚನೆ, ಸ್ತ್ರೀ ಸಮಾನತೆಗಳಂತಹ ಪ್ರಶ್ನೆಗಳನ್ನು ಹುಟ್ಟುಹಾಕಿ ಭಿನ್ನವಾದ ಚರ್ಚೆಗೆ ನಾಂದಿ ಹಾಡಿತಾದರೂ, ಈ ಕುರಿತಂತಹ ಚರ್ಚೆಗಳು ನಡೆದದ್ದು ೨೦ನೇ ಶತಮಾನದಲ್ಲಿ ಎಂಬುದು ವೈರುಧ್ಯದ ಸಂಗತಿ.

ಆಧುನಿಕ ಕನ್ನಡ ಸಾಹಿತ್ಯದ ಆರಂಭಿಕ ಕಾಲಘಟ್ಟವು ರಾಷ್ಟ್ರೀಯ ಚಳುವಳಿಗಳು ಬಿರುಸಿನಿಂದ ಜರುಗಿ ಕಾಲಮಾನ. ಇಂತಹ ಸಂದರ್ಭದಲ್ಲಿ ರಾಷ್ಟ್ರೀಯತೆಯ ಪ್ರಶ್ನೆ, ಚಿಂತನೆ, ಲೇಖನ, ಬರಹ ಹಾಗೂ ಭಾಷಣಗಳು ಹೇರಳವಾಗಿ ಸೃಷ್ಟಿಯಾದವು. ಆದರೆ ಈ ಯಾವ ಚಿಂತನೆಗಳಿಗೂ ಸ್ತ್ರೀ ಅಸ್ಮಿತೆಯ ಪ್ರಶ್ನೆಗಳು ರಾಷ್ಟ್ರೀಯತೆಯ ಪ್ರಶ್ನೆಯ ಭಾಗವಾಗಲಿಲ್ಲ. ಹಾಗಾದರೆ ರಾಷ್ಟ್ರೀಯತೆಯ ಕಾಲಘಟ್ಟದಲ್ಲಿ ಸ್ತ್ರೀಯರನ್ನು ಕುರಿತ ಚರ್ಚೆಗಳು ಬರಲಿಲ್ಲವೇ ? ಉತ್ತರ ತೀರ ಸರಳ. ಸ್ತ್ರೀಯರನ್ನು ಕುರಿತ ಚರ್ಚೆಗಳು ನಿರ್ದಿಷ್ಟ ಚೌಕಟ್ಟಿನೊಳಗೆ ಬರುವ ಕಥೆ ಕಾದಂಬರಿಗಳಲ್ಲಿ ಮಾತ್ರ ಚರ್ಚೆಗೆ ಒಳಪಟ್ಟಿತ್ತಾದರೂ ಅದು ಸಾರ್ವಜನಿಕ ವಲಯಗಳ ವೈಚಾರಿಕ ಚರ್ಚೆಯ ಹಂತದವರೆಗೆ ವ್ಯಾಪಿಸಿರಲಿಲ್ಲ. ಅಂದರೆ 'ಸೃಜನಶೀಲ' ಎನಿಸಿಕೊಳ್ಳಬಹುದಾದ ಸಾಹಿತ್ಯ ವಲಯದಲ್ಲಿ ಕೌಟುಂಬಿಕ ನೆಲೆಯಲ್ಲಿ ಮಾತ್ರ ಚರ್ಚಿಸಲಾಗಿತ್ತು. ಆದರೆ ರಾಷ್ಟ್ರೀಯತೆಯ ಭಾಗವಾಗಿ ಬಂದ ವಿಚಾರ ಸಾಹಿತ್ಯದಲ್ಲಿ ಸ್ತ್ರೀಯ ಕುರಿತ ಪ್ರಶ್ನೆಗಳು ನಗಣ್ಯವಾಗಿದ್ದವು. ಈ ಹಿನ್ನೆಲೆಯಲ್ಲಿ ಇಪ್ಪತ್ತನೇ ಶತಮಾನದ ಸ್ತ್ರೀವಾದವು ಜೈವಿಕವಾದ ತಾರತಮ್ಯವನ್ನು ನಿರಾಕರಿಸುವ ಜೊತೆಗೆ ಸ್ತ್ರೀ ಅಸ್ಮಿತೆಯ ದನಿಯ ಮೂಲಕ ತನ್ನ ತಳಮಳ ಮತ್ತು ಆಶೋತ್ತರಗಳನ್ನು ಹೆಚ್ಚು ಹೆಚ್ಚು ಪ್ರಕಟಿಸುತ್ತಾ ಬಂದಿತು. ಇದಕ್ಕೂ ಸ್ತ್ರೀಯರ ದಮನಿತ ಪ್ರಜ್ಞೆ ಎಚ್ಚರಗೊಂಡಿರುವುದಕ್ಕೂ ಸಂಬಂಧವಿದೆ. ಹಾಗೆಯೇ 'ಸ್ತ್ರೀ ಅಸ್ಮಿತೆ' ಎಂಬ ಪರಿಕಲ್ಪನೆಯನ್ನು

# ಮರಳಿ ಮನೆಗೆ






**ಯಾ**ರಿಗೂ ಏನೂ ಗೊತ್ತಿರದ ಕಾಲವದು
ನಮ್ಮಷ್ಟಕ್ಕೆ ನಾವೇ ಹೇಗೋ ಹುಳು–
ಹುಪ್ಪಡಿ, ಬಾಡು ಏನೆಲ್ಲ ತಿಂದು
ಬದುಕಿದ್ದೆವು ನಾವೂ ಮನುಷ್ಯರು
ಎನ್ನುವುದ ತಿಳಿಯದಂತೆ

ಸಂಸ್ಕಾರ, ತಿಳಿ ಶುದ್ಧತೆ, ಕರಿಯ ಬಿಳಿಯ
ಕುಲ ಗೋತ್ರವನ್ನೆಲ್ಲ ಅದ್ಯಾರು ಸೃಷ್ಟಿಸಿಬಿಟ್ಟಿದ್ದರೋ
ಬೆಳಗು ರಾತ್ರಿಯಾಗುವುದರೊಳಗೆ
ದಿಕ್ಕುಗಳೇ ತೇಲಿಸಿಕೊಂಡು ಬಂದವೋ...
ನಮಗಂತೂ ತಿಳಿಯದು ನೀವು ಯಾರೆನ್ನುವುದು
ಅದಾಗಲೇ ಸಣ್ಣಗೆ ಜ್ವರ ಬಂದಂತೆ
ಮೇಲು–ಕೀಳು ವ್ಯಾಪಿಸಿದ್ದಂತೂ
ಗಾಂಧಿಯ ಕಾಡಿದಷ್ಟು ಗ್ಯಾರಂಟಿ

ತೊಗಲು ತೆವಲುಗಳ ಮೇಲಾಟಕೆ ಸಿಕ್ಕು
ನುಜ್ಜುಗುಜ್ಜಾದವರು ತಳೆದ ಸ್ವಾಭಿಮಾನ
ಬಿಟ್ಟು ಕ್ಷುದ್ರತೆಯ ಗೂಡು ಆಚೆ–ಈಚೆ
ಕೈ ಚಾಚಿ ವಿಶ್ವಾಸದೆಡೆ ಪಯಣಿಸಿ
ಅಲ್ಲೇ ನಮ್ಮ ಸಂತಾನದ ಮರ ನೆಟ್ಟು
ನೆಮ್ಮದಿಯುಸಿರು ಹೆರೆ ರೆಂಬೆ ಕೊಂಬೆ
ಅದೆಷ್ಟು ತೊಪ್ಪಲುಗಳು ಮಗ್ಗುಲ ಮಗುಚಿದ್ದಾಗಿದೆ.

ಈಗ್ಯಾವ ಧಾವಂತ ನಿಮ್ಮದು...
ಮತ್ತದೇ ಮನೆಗೆ ಕರೆಯುವುದು
ಬರಲಾರದಷ್ಟು ದೂರ ಬಂದಿರುವಲ್ಲಿಗೆ
ನಮ್ಮ ನೆನಪು ಕಾಳಜಿಯಾದರೂ ಎಂತು
ಒಮ್ಮೆ ಮರಳುವ ಇಂಗಿತವಿಟ್ಟರೆ
ಯಾವ ಕುಲ ಇನ್ನಾವ ಜಾತಿಯಲ್ಲಿ
ವರ್ತರಿಸಿಡಬೇಕೆಂಬ ತಂತ್ರಗಾರಿಕೆ ನಿಮ್ಮದು !


**ಎಸ್. ಎ. ಮಂಜುನಾಥ**
ಉಪ್ಪಳೆ ಕೊಪ್ಪ, ಅಂಚೆ : ಉಂಬಳೇ ಕೊಪ್ಪ – ೫೮೧ ೩೧೮
ಶಿರಸಿ ತಾಲೂಕು, ಉತ್ತರ ಕನ್ನಡ

ವ್ಯಾಖ್ಯಾನಿಸುವುದಾದರೆ ಹೆಣ್ಣಿಗೆ ಆದ ಅನ್ಯಾಯದ ಬಗ್ಗೆ, ಅವಳ ಹಕ್ಕು, ಕರ್ತವ್ಯ, ಸ್ವಾತಂತ್ರ್ಯಗಳ ಬಗ್ಗೆ ಮಾತನಾಡುವ ಎಲ್ಲ ಅಕ್ಷರ ರೂಪಿ ಹಾಗೂ ಮೌಖಿಕ ಅಭಿವ್ಯಕ್ತಿಗಳು ವಿಶಾಲ ಅರ್ಥದಲ್ಲಿ ವಿಚಾರ ಸಾಹಿತ್ಯ ಎನಿಸಿಕೊಂಡರೆ, ಇಂತಹ ವಿಚಾರ ಸಾಹಿತ್ಯದಲ್ಲಿ ಸ್ತ್ರೀಯರ ಗೈರುಹಾಜರಿಯನ್ನು ತಪ್ಪಿಸಿ ಆಕೆಯ ಅಸ್ತಿತ್ವವನ್ನು ಸ್ಥಾಪಿಸುವುದು ಅಥವಾ ಗುರುತಿಸುವುದನ್ನು 'ಸ್ತ್ರೀ ಅಸ್ಮಿತೆ' ಎಂದು ಕರೆಯಬಹುದು. ಸ್ತ್ರೀ ಅಸ್ಮಿತೆ ಎನ್ನುವುದು ಸ್ತ್ರೀ ಅಸ್ತಿತ್ವವನ್ನು ಗುರುತಿಸುವ ಒಂದು ನೋಟಕ್ರಮವಾಗಿದೆ. ಇಂತಹ ಅಸ್ಮಿತೆಯ ನೋಟಕ್ರಮವನ್ನು ಎರಡು ಆಯಾಮಗಳಲ್ಲಿ ಗುರುತಿಸಬಹುದು:

**ಒಂದು :** ಎಲ್ಲ ಪುರುಷರ ವಿರುದ್ಧದ ದ್ವೇಷ ಸಾಧನೆಯ ಒಂದು ಒರಟಾದ ಕ್ರಮ. ಅಂದರೆ ಇಲ್ಲಿ ಅಸ್ಮಿತೆ ಪರಿಕಲ್ಪನೆಯನ್ನು ಎದುರಾಳಿಯ ಪರಿಕಲ್ಪನೆಯ ಮೂಲಕ ಗುರುತಿಸಲಾಗುತ್ತದೆ. ಪುರುಷ, ಮಹಿಳೆ ಎಂದರೆ ಪರಸ್ಪರ ಎದುರಾಳಿ ಎಂಬ ಶತ್ರುವಿನ ನೆಲೆಯ ಕ್ರಮ.

**ಎರಡು :** ಈ ಮೇಲೆ ಹೇಳಿದ ಸಾರಾಸಗಟು ಪುರುಷ ವಿರೋಧಿ ಪರಿಕಲ್ಪನೆಯಿಂದ ಹೊರಬಂದು, ಸಂಕೀರ್ಣ ಆಯಾಮಗಳಲ್ಲಿ ಸ್ತ್ರೀ ಅಸ್ಮಿತೆಯನ್ನು ನೋಡುವ ಇನ್ನೊಂದು ಸೂಕ್ಷ್ಮವಾದ ಕ್ರಮ. ಈ ಎರಡನೇ ಕ್ರಮದಲ್ಲಿ ಸ್ತ್ರೀ ಮತ್ತು ಪುರುಷರು ಪರಸ್ಪರ ವಿರೋಧಿಗಳು ಎಂಬ ಸರಳೀಕೃತ ಮನೋಭಾವಕ್ಕೆ ಬದಲಾಗಿ, ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯ ಸಂಕಟಕ್ಕೆ ಕಾರಣವಾಗಿರುವ ಎಲ್ಲಾ ಆಯಾಮಗಳನ್ನು ಗಮನಿಸುವುದು. ಸ್ತ್ರೀ ಬಂಧನವು ಪುರುಷ ಸಮಾಜವನ್ನು ಕ್ಷುದ್ರಗೊಳಿಸಿದೆ ಎಂದು ತಿಳಿಯುವುದು. ಸ್ತ್ರೀ ಪುರುಷರಿಬ್ಬರೂ ಪರಸ್ಪರ ಪೂರಕವಾಗಿ ಸ್ತ್ರೀ ಸಾಮಾಜಿಕ ನ್ಯಾಯ ಪಡೆಯಲು ಸಮಾನವಾಗಿ ತೊಡಗಿಸಿಕೊಂಡು ಕೂಡು ಹೋರಾಟ ಮಾಡುವ ಅಗತ್ಯವಿದೆ ಎಂದು ಗ್ರಹಿಸಲಾಗುವುದು. ಸ್ತ್ರೀ ಪುರುಷರಿಬ್ಬರೂ ಕೂಡು ನೆಲೆಯಲ್ಲಿ ಬಿಡುಗಡೆಗೊಳ್ಳುವುದರ ಮೂಲಕ ಸಮಾಜದ ಬಿಡುಗಡೆ ಎಂಬುದು ಈ ಪಂಥದವರ ಆಶೋತ್ತರವಾಗಿದೆ.

**ಲಿಂಗ-ಜಾತಿ :** ಅಸ್ಮಿತೆಯ ಪ್ರಶ್ನೆ ಎನ್ನುವುದು ಏಕಮುಖವಾದುದಲ್ಲ, ಲಿಂಗ ಕುರಿತ ಪ್ರಶ್ನೆ ಕಾಲ ಜಾತಿ ಪ್ರದೇಶಕ್ಕೆ ಅನುಗುಣವಾಗಿ ಬದಲಾಗುತ್ತಾ ಹೋಗುತ್ತದೆ. ಪ್ರಸ್ತುತ ಈ ಒಂದು ಭಾಗದಲ್ಲಿ ಲಿಂಗ ಮತ್ತು ಜಾತಿಯ ಹಿನ್ನೆಲೆಯಲ್ಲಿ ಸ್ತ್ರೀ ಅಸ್ಮಿತೆ ರೂಪುಗೊಳ್ಳುವ ಬಗೆಯನ್ನು ಚರ್ಚಿಸಲಾಗುವುದು. ಲಿಂಗ ತಾರತಮ್ಯದ ಸಾಮಾಜಿಕ ಚಿಂತನೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ತಿಳಿಯುವ ಸಂಗತಿಯೆಂದರೆ ಮಹಿಳೆಯರು ಬಹುಮುಖ್ಯವಾಗಿ ಜೈವಿಕತೆ ಮತ್ತು ಸಾಮಾಜಿಕತೆ ಎಂಬ ಎರಡು ನೆಲೆಗಳಲ್ಲಿ ಶೋಷಿತರಾಗಿದ್ದಾರೆ. ಜೈವಿಕತೆಯ ಹಿನ್ನೆಲೆಯಲ್ಲಿ ಮಹಿಳೆಯರು ತಾರತಮ್ಯಕ್ಕೆ ಒಳಗಾಗುವ ಸವಾಲಿನ ಪ್ರಕ್ರಿಯೆಯು ಮೇಲ್ವರ್ಗದ ಮಹಿಳೆಯರ ಅಸ್ಮಿತೆಯ ಪ್ರಶ್ನೆಯಾದರೆ, ಕೆಳವರ್ಗದ ಮಹಿಳೆಯರು ಲಿಂಗ ಮತ್ತು ಜಾತಿ ಎಂಬ ಎರಡೂ ಆಯಾಮಗಳಲ್ಲಿ ಮೇಲ್ವರ್ಗದ ಮಹಿಳೆಯರಿಗಿಂತ ದುಪ್ಪಟ್ಟು ಶೋಷಣೆಯನ್ನು ಅನುಭವಿಸುತ್ತಾರೆ. ಅಂದರೆ, ಜೈವಿಕತೆಯ ಆಧಾರದಿಂದಾಗಿ ಕೌಟುಂಬಿಕ ಒಳ ಜಗತ್ತಿನಲ್ಲಿ ಶೋಷಣೆಗೆ ಒಳಗಾದರೆ, ಜೈವಿಕತೆ ಮತ್ತು ಲಿಂಗತ್ವದ ಎರಡು ಆಯಾಮಗಳಲ್ಲಿ ಕೌಟುಂಬಿಕ ಹೊರ ಜಗತ್ತಿನಲ್ಲಿ ಕೆಳವರ್ಗದ ಮಹಿಳೆಯರು ಶೋಷಣೆಗೆ ಒಳಗಾಗುತ್ತಿದ್ದಾರೆ. ಹಾಗೆಯೇ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹದ ಮೂಲಕ ಸಾಮಾಜಿಕ ಚಲನೆಯನ್ನು ಗುರುತಿಸಲಾಗುತ್ತಿದೆ. ವಿವಾಹ ಕ್ರಮದಲ್ಲಿ ಅನುಲೋಮ ವಿವಾಹ ಮತ್ತು ಪ್ರತಿಲೋಮ ವಿವಾಹ ಎಂಬ ಎರಡು ಕ್ರಮಗಳಿದ್ದು, ಕೆಳವರ್ಗದ ಮಹಿಳೆ ಮೇಲ್ವರ್ಗದ ಪುರುಷನನ್ನು ವಿವಾಹವಾದರೆ ಮೇಲ್ಮುಖ ಚಲನೆ. ಕೆಳವರ್ಗದ ಪುರುಷ ಮೇಲ್ವರ್ಗದ ಮಹಿಳೆಯನ್ನು ವಿವಾಹವಾದರೆ ಕೆಳಮುಖದ ಚಲನೆ. ಅಂದರೆ ಇಲ್ಲಿನ ಚಲನೆಯು ಪುರುಷರ ಕೇಂದ್ರದಲ್ಲಿ ಗುರುತಿಸಲಾಗಿದ್ದು, 'ಮಹಿಳೆ' ಎಂಬ ಲಿಂಗತ್ವದ ಕಾರಣ ಹಾಗೂ ಜಾತಿ ಎಂಬ ಸಾಮಾಜಿಕ ಕಾರಣ ಎಂಬ ಎರಡು ನೆಲೆಯಲ್ಲಿ ಶೋಷಣೆ, ಶ್ರೇಣೀಕರಣವನ್ನು ಗುರುತಿಸಲಾಗುವುದು. ಹಾಗಾಗಿ ಈ ರೀತಿಯ ಲಿಂಗ-ಜಾತಿಯ ಪರಿಕಲ್ಪನೆಗಳು ಎದುರಾದಾಗ ಸ್ತ್ರೀ ಅಸ್ಮಿತೆಯ ಹುಡುಕಾಟದ ಪ್ರಶ್ನೆಗಳು ಸೃಷ್ಟಿಯಾಗುತ್ತವೆ.

ಗಂಡು-ಹೆಣ್ಣುಗಳ ಸಂಬಂಧದಲ್ಲಿ ನಿಯೋಗಿ ಹಾಗೂ ಅನುಭೋಗಿ ಸ್ಥಿತಿಗಳನ್ನು ವ್ಯಾಖ್ಯಾನಿಸುತ್ತಿರುವವರು ಗಂಡಸರು. ಅವರು ವ್ಯಾಖ್ಯಾನಿಸುತ್ತಿರುವ ಯಜಮಾನಿಕೆಯಲ್ಲಿ ತಾವು ನಿಯೋಗಿ ಎಂದು, ಹೆಣ್ಣು ಅನುಭೋಗಿ ಎಂದು, ಹೇಳುವುದು ತೀರಾ ಸಹಜ, ಚಾರಿತ್ರಿಕವಾಗಿ ಹೆಣ್ಣು ಅದನ್ನು ಒಪ್ಪಿಕೊಂಡು ಬಂದಿದ್ದರೂ ಕೂಡ. ಆದರೆ ಮಹಿಳೆ ಕೈಗಾರಿಕಾ ಕ್ರಾಂತಿ, ಸ್ವಾತಂತ್ರ್ಯ, ಚಳುವಳಿ ಆಧುನಿಕ ಶಿಕ್ಷಣ ವೈಚಾರಿಕತೆಗಳಿಂದಾಗಿ ತನ್ನ ಅಧೀನತೆಯ ಸ್ಥಿತಿಯಿಂದ ಎಚ್ಚೆತ್ತುಕೊಂಡಳು. ಅನುಭೋಗಿ, ನಿಯೋಗಿ ಎಂಬ ವ್ಯಾಖ್ಯಾನಗಳನ್ನು ಪ್ರಶ್ನಿಸಿದಳು. ಹಾಗಾಗಿಯೇ ಅವಳೊಳಗೆಯೇ ಅಸ್ಮಿತೆಯು ಜಾಗೃತಗೊಳ್ಳತೊಡಗಿತು. ಅಭದ್ರತೆ ಉಂಟಾದಾಗ ಅಂದರೆ ತಮಗೆ ಸಂಬಂಧಿಸಿದಂತೆ ಪ್ರತಿಕೂಲವಾದ ಯಾವುದೇ ನಿಯಮಗಳು ಬರಬಹುದು ಎಂಬ ಭಯದ ವಾತಾವರಣ ಉಂಟಾದಾಗ ತನ್ನ ಉಳಿವಿಗಾಗಿ ಅಸ್ಮಿತೆಯ ಪ್ರಜ್ಞೆ ಜಾಗೃತವಾಗುತ್ತದೆ. ಒಂದು ಸಮುದಾಯಕ್ಕೆ ತನ್ನತನದ ಹುಡುಕಾಟವು ಆರಂಭವಾಗುವುದು ಎದುರಾಳಿಯ ಕಲ್ಪನೆಯಿಂದ. ಅದೇ ರೀತಿ ಸ್ತ್ರೀ ಅಥವಾ ಪುರುಷ ಅಸ್ಮಿತೆಯ ಪ್ರಶ್ನೆ ಎದುರಾಗುವುದು ಸಾಮಾನ್ಯವಾಗಿ ಪ್ರಬಲವಾದ ಎದುರಾಳಿಯ ಪ್ರವೇಶವಾಗಿ ತನ್ನ ಅಸ್ತಿತ್ವದ ಬಗ್ಗೆ ಆತಂಕ ಮೂಡಿದಾಗ. ಹಾಗೆಯೇ ಸಂಪತ್ತಿನ ಸಮಾನ ಹಂಚಿಕೆಯನ್ನು ಮಾಡಲಾಗದ ಪ್ರಭುತ್ವವು ದುಡಿವ ಜನರನ್ನು ಜಾತಿ-ಉಪಜಾತಿಗಳಲ್ಲಿ ಒಡೆದುಹಾಕಿದೆ. ಇದರ ಫಲವಾಗಿ ಐಡೆಂಟಿಟಿಯ ರಾಜಕಾರಣ ಮುಂಚೂಣಿಗೆ ಬಂದಿದೆ. ದಮನಕ್ಕೆ ಒಳಗಾಗುತ್ತಿರುವ ದಲಿತರು, ಮಹಿಳೆಯರು, ಬುಡಕಟ್ಟುಗಳು, ಅಲೆಮಾರಿಗಳು, ಧಾರ್ಮಿಕ ಹಾಗೂ ಭಾಷಾ ಅಲ್ಪಸಂಖ್ಯಾತರು, ಲೈಂಗಿಕ ಅಲ್ಪಸಂಖ್ಯಾತರು ಮೊದಲಾದವರು ಇಂದು ಎಚ್ಚೆತ್ತ ಗುಂಪುಗಳಾಗಿ ಹೊರಬರುತ್ತಿದ್ದಾರೆ. ಈ ಸಮುದಾಯಗಳ ಸಮಸ್ಯೆಗಳನ್ನು ಕೈಗೊಳ್ಳಲು ಸಾಧ್ಯವಾಗದೇ ಹೋದಾಗ ಈ ಬಗ್ಗೆ ಅಸ್ಮಿತೆಗಾಗಿ ಹೋರಾಟಗಳು ಅಸ್ತಿತ್ವಕ್ಕೆ ಬರುತ್ತವೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ತಿತ್ವದಲ್ಲಿರುವುದು ಲಿಂಗ ರಾಜಕಾರಣ. ಈ ಲಿಂಗ ರಾಜಕಾರಣ ಪುರುಷ ಮತ್ತು ಮಹಿಳೆಯರಿಗೆ ಒಂದಲ್ಲ ಒಂದು ರೀತಿಯಲ್ಲಿ ಆತಂಕಿತ ಮನೋಭಾವವನ್ನು ಹುಟ್ಟಿಸುತ್ತದೆ. ಹಾಗಾಗಿ ಉಳಿವಿಗಾಗಿ ಹೋರಾಟ ಎಂಬ ನೆಲೆಯಲ್ಲಿ ಅಸ್ಮಿತೆಯ ಹುಡುಕಾಟ ಸೃಷ್ಟಿಯಾಗುತ್ತದೆ. ತಾನು ಶೋಷಿತಳು ತನ್ನ ಅವಕಾಶ, ಅಧಿಕಾರಗಳನ್ನು ಪುರುಷ ಪ್ರಧಾನ ವ್ಯವಸ್ಥೆಯು ಕಸಿದುಕೊಂಡಿದೆ ಎಂಬ ಮನೋಭಾವ ಮಹಿಳೆಯರಲ್ಲಿ ಜಾಗೃತವಾದ ಕಾರಣಗಳಿಂದಾಗಿ ಅಸ್ಮಿತೆಯ ಪ್ರಶ್ನೆಯು ಹುಟ್ಟಿಕೊಂಡಿತು. ಹಾಗೆಯೇ ಒಟ್ಟು ವರ್ಗ ಹೋರಾಟದಲ್ಲಿ ಪುರುಷ, ಮಹಿಳೆ ಹಾಗೂ ಎಲ್ಲಾ ಧರ್ಮದ, ಜಾತಿಯ ಜನರೂ ಸೇರಬೇಕೆಂದು ಬಯಸುವ ವರ್ಗ ಹೋರಾಟಗಳಿಗೂ ಒಡೆಯಲು ಅಸ್ಮಿತೆಯ ಪ್ರಶ್ನೆಯನ್ನು ಹುಟ್ಟುಹಾಕಲಾಯಿತು. ಅಂದರೆ, ಕೂಡು ನೆಲೆಯ ಹೋರಾಟಕ್ಕೆ ಆಸ್ಪದ ನೀಡದೆ ಜನರನ್ನು (ಸಮುದಾಯ) ಬಿಡಿಬಿಡಿಗೊಳಿಸುವ ಜಾಗತೀಕರಣ ಮತ್ತು ಬಂಡವಾಳಶಾಹಿ ಹುನ್ನಾರವು ಅಸ್ಮಿತೆಯ ಪ್ರಶ್ನೆಯ ಬೀಜಗಳನ್ನು ಬಿತ್ತಿತು.

ಅಸ್ಮಿತೆಯ ಪ್ರಶ್ನೆ ಎನ್ನುವುದು ಪ್ರತಿಯೊಂದು ಜೀವಿಯಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಒಡಮೂಡುತ್ತಾ ಬಂದಿದೆ. ಹಾಗಾಗಿಯೇ ಇನ್ನೂ ಚಳುವಳಿಗಳು, ಸಂಘಟನೆಗಳು, ಸಂಘರ್ಷಗಳು ನಡೆಯುತ್ತಾ ಬಂದಿವೆ. ಅಸ್ಮಿತೆಯ ಪ್ರಶ್ನೆಯು ಅಳಿವು-ಉಳಿವಿನ ಪ್ರಶ್ನೆಯಾಗಿ ಬರಬಹುದು. ಕೆಲವೊಮ್ಮೆ ತನ್ನನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆಯಾಗಿಯೂ ಬರಬಹುದು. ಒಟ್ಟಾರೆಯಾಗಿ, ಅಸ್ಮಿತೆ ಎನ್ನುವುದು ದಮನಿತರ ಧ್ವನಿಯಾಗಿ ಒಡಮೂಡುತ್ತದೆ. ಆ ಮೂಲಕ ಸಮಾಜದ ಮುಖ್ಯ ಸ್ತರಕ್ಕೆ ಬಂದು ತನ್ನನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆಯಾಗಿದೆ.

**ಫಲಿತಗಳು**

೧. ಅಸ್ಮಿತೆಯ ಹುಡುಕಾಟವು ವಸಾಹತೋತ್ತರ ಚಿಂತನೆಗಳ ತಾತ್ವಿಕತೆಗಳಲ್ಲೊಂದಾಗಿದೆ. ದಮನಿತರ ದನಿಯಾಗಿ ಒಡಮೂಡುವ ಅಸ್ಮಿತೆಯು ಪರೋಕ್ಷವಾಗಿ ದಮನಿತರಿಗೇ ಹೆಚ್ಚು ಅನನುಕೂಲಕರವಾಗಿದೆ. ಅಂದರೆ ಇದು ದಮನ ಸ್ಥಿತಿಗೆ ಕಾರಣವಾದ ಪ್ರಭುತ್ವಕ್ಕೆ ಸಹಕಾರಿಯಾಗಿದೆ. ಸಮುದಾಯಗಳನ್ನು ವಿಕೇಂದ್ರೀಕರಿಸುವ ಮೂಲಕ ಸಮುದಾಯಗಳ ಬಲವನ್ನು ಕುಗ್ಗಿಸುವ ಕೆಲಸ ಎನ್ನಬಹುದು.

೨. ಅಸ್ಮಿತೆ ಚಳುವಳಿಗಳು ಪ್ರಭುತ್ವದ ನಿಯಂತ್ರಣ ಹಾಗೂ ಅದರ ನಿರ್ಣಯಗಳ ಒತ್ತಡಕ್ಕೆ ಹೆಚ್ಚು ಹೆಚ್ಚಾಗಿ ಒಳಗಾಗುತ್ತಿರುವ ಸಮುದಾಯಗಳು ಅಂತಹ ಹಿಡಿತದಿಂದ ತಪ್ಪಿಸಿಕೊಳ್ಳುವ ಪ್ರಯತ್ನದ ಫಲವಾಗಿ ಹುಟ್ಟಿಕೊಳ್ಳುತ್ತವೆ.

೩. ಅಸ್ಮಿತೆಯ ರಾಜಕೀಯವು ಜನರಲ್ಲಿ ಮೇಲು-ಕೀಳಿನ ಮನೋಭಾವವನ್ನು ಮೂಡಿಸುತ್ತದೆ. ಆದ್ದರಿಂದ ಸಹಜವಾಗಿಯೇ ಸಂಘರ್ಷದ ಭಾವನೆ ಸೃಷ್ಟಿಯಾಗುತ್ತದೆ.

**ಗಾಯಿತ್ರಿ ಟಿ. ಪಾಂಚಜನ್ಯ**
ಸಂಶೋಧಕರು, ಸಂಶೋಧನಾ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ



# ಸಂಜೆಗೆ ಐದೂ ಗ್ರಹಗಳು

**ಕ**ಳೆದ ಜನವರಿ – ಫೆಬ್ರವರಿ ತಿಂಗಳುಗಳಲ್ಲಿ ಬೆಳಗಿನ ಜಾವ ಐದೂ ಗ್ರಹಗಳು ಸೇರಿ ಖಗೋಳ ಪ್ರೇಮಿಗಳ ಗಮನ ಸೆಳೆದಿದ್ದವು. ಬೆಳಗಿನ ಚಳಿಯಲ್ಲಿ ನೂರಾರು ಮಂದಿ ತಾರಾಲಯಕ್ಕೆ ಬಂದು ಗ್ರಹಗಳನ್ನು ನೋಡಿ ಆನಂದಿಸಿದ್ದರು. ಈಗ ಜುಲೈ ತಿಂಗಳಲ್ಲಿ ಸಂಜೆಯ ಆಕಾಶದಲ್ಲಿಯೇ ಎಲ್ಲಾ ಗ್ರಹಗಳೂ ಸೇರಿವೆ. ಆದರೆ, ಮೋಡಗಳು ಬಿಡುವು ಕೊಟ್ಟರೆ ಮಾತ್ರ ಅವನ್ನು ನೋಡಬಹುದು.

ಪೂರ್ವ ದಿಕ್ಕಿನಲ್ಲಿ ಮಂಗಳ ಮತ್ತು ಶನಿ ಇವುಗಳನ್ನು ಸುಲಭವಾಗಿ ಗುರುತಿಸಬಹುದು. ಇವೆರಡರ ಸಮೀಪವೇ ಕಾಣುವ ಕೆಂಪು ನಕ್ಷತ್ರವೇ ಜ್ಯೇಷ್ಠಾ. ಗುರುಗ್ರಹ ಪಶ್ಚಿಮ ದಿಕ್ಕಿನತ್ತ ಸರಿದಿದೆ. ಇದು ಸಾಕಷ್ಟು ಪ್ರಕಾಶಮಾನವಾಗಿರುವುದರಿಂದ ಸುಲಭವಾಗಿ ಗುರುತಿಸಬಹುದು. ತಿಂಗಳ ಮಧ್ಯಭಾಗದ ನಂತರ ಇದಕ್ಕಿಂತ ಪ್ರಕಾಶಮಾನವಾದ ಚುಕ್ಕೆಯೊಂದು ಪಶ್ಚಿಮದ ಅಂಚಿನಲ್ಲಿ ಕಾಣತೊಡಗುತ್ತದೆ. ಅದೇ ಶುಕ್ರ. ಆಕಾಶ ಶುಭ್ರವಾಗಿದ್ದಲ್ಲಿ ಅದರ ಪಕ್ಕ ಬುಧವೂ ಕಾಣುತ್ತದೆ. ಹೀಗೆ ತಿಂಗಳ ಕೊನೆಗೆ ಐದೂ ಗ್ರಹಗಳು ಸಂಜೆ ಕಾಣುತ್ತವೆ. ಯಾವುದೇ ಸಂಜೆ ಶುಭ್ರ ಆಕಾಶ ದೊರೆತಾಗಲೆಲ್ಲಾ ಗ್ರಹಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು.

ಗುರುಗ್ರಹ ಸಿಂಹರಾಶಿಯಲ್ಲಿದೆ. ಶುಕ್ರ ಕಟಕದಿಂದ ಸಿಂಹದ ದಿಕ್ಕಿಗೆ ಚಲಿಸುವುದನ್ನೂ ನೋಡಬಹುದು. ಬುಧವೂ ಸಹ ಈ ದಿಕ್ಕಿಗೇ ಚಲಿಸಿದರೂ ಅದರ ಚಲನೆ ಶುಕ್ರಕ್ಕಿಂತ ವೇಗವಾಗಿದೆ ಎಂಬುದನ್ನು ಗಮನಿಸಬಹುದು. ಗುರು ಕ್ರಮೇಣ ಪಶ್ಚಿಮದ ಅಂಚಿಗೆ ಸರಿಯುವುದು. ಇದು ನಮಗೆ ದಿನೇ ದಿನೇ ಕೆಳಗಿಳಿದ ಹಾಗೆ (ದಿಗಂತವನ್ನು ಸಮೀಪಿಸಿದ ಹಾಗೆ) ಕಾಣುತ್ತದೆ. ವಾಸ್ತವವಾಗಿ ಗುರುವಿನ ಸ್ಥಾನದಲ್ಲಿ ಹೆಚ್ಚಿನ ಬದಲಾವಣೆ ಇರುವುದಿಲ್ಲ. ಆದರೆ ಭೂಮಿಯ ಚಲನೆಯ ಕಾರಣ ಗುರುವನ್ನೂ ಒಳಗೊಂಡು ಇಡೀ ಸಿಂಹರಾಶಿಯೇ ಪಶ್ಚಿಮಕ್ಕೆ ಸರಿಯುತ್ತದೆ. ಆದ್ದರಿಂದ ಕಟಕದಿಂದ ಸಿಂಹದತ್ತ ಚಲಿಸುವ ಬುಧ ಮತ್ತು ಶುಕ್ರ ಇವೆರಡೂ ದಿನೇ ದಿನೇ ಮೇಲೇರಿದ ಹಾಗೆ ಕಾಣುತ್ತವೆ. ಪ್ರತಿ ವಾರಕ್ಕೊಮ್ಮೆ ಯಾದರೂ ಅವುಗಳ ಚಲನೆಯನ್ನು ಗಮನಿಸುತ್ತಿದ್ದಲ್ಲಿ ಮುಂದಿನ ತಿಂಗಳಲ್ಲಿ ಇವು ಮೂರೂ ಒಟ್ಟುಗೂಡುತ್ತವೆ ಎಂದು ಸುಲಭವಾಗಿ ಊಹಿಸಬಹುದು.

ಈ ತಿಂಗಳಲ್ಲಿ ಗುರುಗ್ರಹ ಮತ್ತು ಯುರೇನಸ್‌ಗಳನ್ನು ಚಂದ್ರ ಮರೆಮಾಡುವ ಆಚ್ಛಾದನೆಗಳಿವೆ; ಆದರೆ ಎರಡೂ ಭಾರತೀಯ ವೀಕ್ಷಕರಿಗೆ ಅನುಕೂಲಕರವಾಗಿಲ್ಲ.

ಮಂಗಳ ಮತ್ತು ಶನಿ ಇರುವ ಭಾಗದಲ್ಲಿಯೇ ವೃಶ್ಚಿಕರಾಶಿ ಮತ್ತು ಆಕಾಶಗಂಗೆ ಇವೆ. ತಿಂಗಳ ಮೊದಲ ವಾರದಲ್ಲಿ ಚಂದ್ರ ಇಲ್ಲದಾಗ ಈ ಭಾಗವನ್ನು ಸೂಕ್ಷ್ಮವಾಗಿ ಗಮನಿಸಿದರೆ ಆಕಾಶಗಂಗೆಯ ಚೆಲುವು ಗೋಚರಿಸುತ್ತದೆ. ಜ್ಯೇಷ್ಠಾದಿಂದ ಕೆಳಭಾಗಕ್ಕೆ, ಅಂದರೆ ಪೂರ್ವಕ್ಕೆ ಧನುವಿನಲ್ಲಿ ಆಕಾಶಗಂಗೆಯ ಕೇಂದ್ರ. ಯಾವುದೇ ಸಂಜೆ ಮೋಡಗಳು ಶುಭ್ರವಾಗಿರುವ ಅವಕಾಶ ಕೊಟ್ಟರೂ ತಪ್ಪದೇ ಗಮನಿಸಬೇಕು. ವೃಶ್ಚಿಕರಾಶಿಯ ಚೇಳಿನ ಆಕಾರವನ್ನೂ ಇದಕ್ಕೆ ಬಳಸಿಕೊಳ್ಳುವುದು ಸಾಧ್ಯವಿದೆ.



ಜುಲೈ ೧೬ (ಸಂಜೆ)
ಬುಧ-ಶುಕ್ರ ಜೋಡಿ

ಸಂಜೆಯ ಆಕಾಶದಲ್ಲಿ ದಕ್ಷಿಣದಲ್ಲಿ ಕಾಣುವ ಕಿನ್ನರ (ಸೆಂಟಾರಸ್) ತ್ರಿಶಂಕು (ಕ್ರಕ್ಸ್) ಈ ಪುಂಜಗಳ ಭಾಗವನ್ನು ಗಮನಿಸಿ. ಧನುರಾಶಿಯಿಂದ ಹೊರಟ ಆಕಾಶ ಗಂಗೆಯ ಒಂದು ಭಾಗ ಈ ದಿಕ್ಕಿಗೆ ಹಾಯುತ್ತದೆ ಎಂಬುದನ್ನು ನಕ್ಷತ್ರಗಳ ದಟ್ಟಣೆಯಿಂದಲೇ ತಿಳಿಯಬಹುದು. ಅಲ್ಲಿ ಹರಡಿರುವ ಅಸಂಖ್ಯಾತ ನೀಹಾರಿಕೆಗಳಲ್ಲಿ ಅತಿ ಹೆಚ್ಚು ದ್ರವ್ಯರಾಶಿಯ ನಕ್ಷತ್ರಗಳಿಂದಾದ ಈಟಾ ಕರೀನಾ ಎಂಬ ನೀಹಾರಿಕೆಯೂ ಸೇರಿದೆ. ಇದನ್ನು ಬರಿಗಣ್ಣಿನಿಂದ ಹುಡುಕುವ ಪ್ರಯತ್ನ ಮಾಡಬಹುದು. ನೆತ್ತಿಯ ಮೇಲೆ ಚಿತ್ರಾ ಮತ್ತು ಸ್ವಾತಿ, ಉತ್ತರದ ಸಪ್ತರ್ಷಿಮಂಡಲ ಈಶಾನ್ಯದಲ್ಲಿ ಅಭಿಜಿತ್ – ಇವನ್ನೂ ಗುರುತಿಸಬಹುದು.




ದೀರ್ಘವೃತ್ತದ ಕಕ್ಷೆಯಲ್ಲಿ ಸೂರ್ಯನನ್ನು ಸುತ್ತುವ ಭೂಮಿ ಈ ತಿಂಗಳಿನಲ್ಲಿ ಗರಿಷ್ಠ ದೂರದ ಅಪರವಿ ಬಿಂದುವನ್ನು ದಾಟುತ್ತದೆ. ಜುಲೈ ೪ರಂದು ಉತ್ತರ ಭಾರತದ ಅರ್ಧಭಾಗದಷ್ಟು ಜನ ಬಿಸಿಲಿನ ಬೇಗೆಯಿಂದ ತತ್ತರಿಸುವಾಗ "ಸದ್ಯ ಸೂರ್ಯನಿಂದ ಗರಿಷ್ಠ ದೂರದಲ್ಲಿದ್ದೇವೆ" ಎಂದು ಸಮಾಧಾನ ಪಟ್ಟುಕೊಳ್ಳಬಹುದು.

ಆಗಸ್ಟ್ ತಿಂಗಳಲ್ಲಿ ಗರಿಷ್ಠ ಮುಟ್ಟುವ ಪರ್ಸಿಯೈಡ್ ಉಲ್ಕಾವೃಷ್ಟಿಯ ಆರಂಭದ ಸೂಚನೆಯಂತೆ ಈ ತಿಂಗಳ ಕೊನೆಯಲ್ಲಿ ಮುಂಜಾವಿನಲ್ಲಿ ಉಲ್ಕೆಗಳು ಕಾಣುವುವು. ಇವೆಲ್ಲವೂ (ಪರ್ಸಿಯುಸ್) ಪಾರ್ಥ ಎಂಬ ಪುಂಜದಿಂದ ಹೊರಟಂತೆ ಕಾಣುವುವು.

### ಖಗೋಳ ದಿನಚರಿ

ಜುಲೈ ೧ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
೪ ಬುಧ-ಚಂದ್ರ ನಡುವೆ ೫ ಡಿಗ್ರಿ ಅಂತರ
ಭೂಮಿ-ಸೂರ್ಯ ನಡುವೆ ಗರಿಷ್ಠ ಅಂತರ
ಅಮಾವಾಸ್ಯೆ ೧೬:೩೧ಕ್ಕೆ
೫ ಶುಕ್ರ-ಚಂದ್ರ ನಡುವೆ ೬ ಡಿಗ್ರಿ ಅಂತರ
೬ ಬುಧ ಗ್ರಹದ ಯುತಿ (ಸೂರ್ಯನೊಡನೆಯೇ ಉದಯ ಮತ್ತು ಅಸ್ತಮಾನ)
೯ (ಸಂಜೆ) ಗುರು-ಚಂದ್ರ ಜೋಡಿ (ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ) *
೧೨ ಚಾಂದ್ರಮಾಸದ ಮೊದಲಪಾದ (ಚಂದ್ರಾಸ್ತ ಮಧ್ಯರಾತ್ರಿಗೆ)
೧೩ ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ
೧೪ (ಸಂಜೆ) ಚಂದ್ರ-ಮಂಗಳ ಜೋಡಿ *
೧೬ (ಸಂಜೆ) ಶನಿ-ಚಂದ್ರ ಜೋಡಿ *
(ಸಂಜೆ) ಬುಧ-ಶುಕ್ರ ಜೋಡಿ *
೨೦ ಹುಣ್ಣಿಮೆ ೦೪:೨೭ಕ್ಕೆ
೨೬ ಚಾಂದ್ರಮಾಸದ ಕೊನೆಯ ಪಾದ
೨೭ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
ಆಗಸ್ಟ್ ೪ (ಸಂಜೆ) ಬುಧ-ಶುಕ್ರ-ಚಂದ್ರ ಪುಟ್ಟ ಗುಂಪು *
(* ಛಾಯಾಗ್ರಹಣಕ್ಕೆ ಸದವಕಾಶ)


ಡಾ|| ಬಿ. ಎಸ್. ಶೈಲಜಾ
ಜವಾಹರ ಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

ಅಯ್ಯಂಕಳಿ ಬೆಳೆದ ಪರಿಸರದಲ್ಲಿ ಜಾತಿ ತಾರತಮ್ಯ ಮತ್ತು ಶೋಷಣೆ ಎಗ್ಗಿಲ್ಲದೆ ನಡೆಯುತ್ತಿತ್ತು. ಅದರಲ್ಲೂ ಸಾಮಾಜಿಕವಾಗಿ ಉನ್ನತ ಸ್ತರದಲ್ಲಿದ್ದ 'ನಾಯರ್' ಸಮುದಾಯವು ದಲಿತ ಹಾಗೂ ಇತರ ಶೂದ್ರ ವರ್ಗದವರನ್ನು ತನ್ನ ಊಳಿಗದವರನ್ನಾಗಿಸಿ ಅವರ ಮೇಲೆ ನಿರಂತರ ಶೋಷಣೆ ನಡೆಸುತ್ತಿದ್ದರು. ಅಯ್ಯಂಕಳಿಗೆ ತನ್ನ ಬಾಲ್ಯದಲ್ಲಿ ಓರಗೆಯ ಬಾಲಕರೊಂದಿಗೆ ಕಾಲ್ಚೆಂಡು ಆಟವಾಡುತ್ತಿದ್ದಾಗ ನಡೆದ ಆಕಸ್ಮಿಕ ಘಟನೆಯೊಂದು ಜಾತಿ ತಾರತಮ್ಯದ ಕ್ರೂರ ದಿಗ್ದರ್ಶನವನ್ನು ಪ್ರದರ್ಶಿಸಿತು. ಈ ಘಟನೆ ಅಯ್ಯಂಕಳಿಯ ಸಾಮಾಜಿಕ ಬದುಕು ಹೊಸ ತಿರುವು ಪಡೆಯಲು ಹಾಗೂ ಹಿಂದೂ ಧರ್ಮದ ಹೆಸರಿನಲ್ಲಿ ನಿರಂತರ ಶೋಷಣೆ ನಡೆಸುತ್ತಿದ್ದ ನಾಯರ್ ಸಮುದಾಯಕ್ಕೆ ತಕ್ಕ ಶಾಸ್ತಿ ಮಾಡುವಂತೆ ಪ್ರೇರೇಪಿಸಿತು. ಈ ಪ್ರೇರಣೆಗೆ ತನ್ನದೇ ಸಮುದಾಯದ ಗೆಳೆಯರಿಂದಲೂ ಅಭೂತಪೂರ್ವ ನೈತಿಕ ಬೆಂಬಲ ದೊರೆತದ್ದು ಅಯ್ಯಂಕಳಿಯ ಹೋರಾಟದ ಕಿಚ್ಚನ್ನು ಇಮ್ಮಡಿಗೊಳಿಸಿತು.

# ಅಯ್ಯಂಕಳಿ : ಕೇರಳದ ದಲಿತ ಹೋರಾಟಗಾರ



ಭಾರತದ ಸಾಮಾಜಿಕ ಚಳುವಳಿಗಳ ಇತಿಹಾಸವನ್ನು ಗಮನಿಸಿದಾಗ, ೧೯ನೇ ಶತಮಾನದ ಸಾಮಾಜಿಕ ಚಳುವಳಿಗಳು ದೇಶದ ಜನರ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳಲ್ಲಿ ಆಮೂಲಾಗ್ರ ಬದಲಾವಣೆ ತರಲು ಪ್ರಯತ್ನಿಸಿದವು. ಆದರೆ ಈ ಸಾಮಾಜಿಕ ಚಳುವಳಿಗಳಲ್ಲಿ ತೊಡಗಿಕೊಂಡ ಬಹುತೇಕರು ಹಿಂದೂ ಧರ್ಮದ ಮೇಲ್ವರ್ಗಕ್ಕೆ ಸೇರಿದವರಾಗಿದ್ದು, ಹಿಂದೂ ಧರ್ಮದಲ್ಲಿ ಬೇರೂರಿದ್ದ ಸಾಮಾಜಿಕ ಪಿಡುಗುಗಳನ್ನು ಆಂಶಿಕವಾಗಿ ಪರಿಹರಿಸುವುದಕ್ಕೆ ಪ್ರಾಮುಖ್ಯ ಕೊಟ್ಟರೇ ವಿನಾ ಧರ್ಮದ ಹೆಸರಿನಲ್ಲಿ ಶತಮಾನಗಳಿಂದ ನಿರಂತರ ತುಳಿತಕ್ಕೊಳಗಾದ ದಲಿತರ ವಿಮೋಚನೆ ಬಗ್ಗೆ ಅಷ್ಟೇನೂ ಪ್ರಖರವಾಗಿ ಯೋಚಿಸಿರಲಿಲ್ಲ. ಬ್ರಿಟಿಷ್ ಆಳ್ವಿಕೆಯ ಉತ್ಪನ್ನವಾದ 'ಆಧುನಿಕತೆ'ಯು ದಲಿತರ ಬದುಕಿನ ಮೇಲೆ ಯಾವುದೇ ರೀತಿಯ ಗಣನೀಯ ಮೂಲಭೂತ ಪರಿಣಾಮ ಬೀರಲಿಲ್ಲ, ಬದಲಾಗಿ ಆಧುನಿಕತೆಯ ಫಲವನ್ನು ಮೇಲ್ವರ್ಗ ಮತ್ತು ಮಧ್ಯಮ ವರ್ಗದ ಜಾತಿಗಳು ಯಥೇಚ್ಛವಾಗಿ ಅನುಭವಿಸಿ ಸಾಮಾಜಿಕವಾಗಿ ಉನ್ನತ ಸ್ಥಾನಮಾನವನ್ನು ಪಡೆದಿದ್ದವು. ದಕ್ಷಿಣ ಭಾಗದ ರಾಜ್ಯಗಳಲ್ಲಿನ ದಲಿತರ ಪರಿಸ್ಥಿತಿ ಉಳಿದ ರಾಜ್ಯಗಳಿಗಿಂತ ಭಿನ್ನವಾಗಿರಲಿಲ್ಲ. ಕೇರಳದ ಆರ್ಥಿಕತೆಯಲ್ಲಿ ಪ್ರಮುಖವಾಗಿದ್ದ ಕೃಷಿಯ ಪ್ರಾಥಮಿಕ ಉತ್ಪಾದಕರು ದಲಿತರೇ ಆಗಿದ್ದರೂ ಅವರಿಗೆ ಭೂಮಿಯ ಮೇಲೆ ಯಾವುದೇ ಒಡೆತನವಿರಲಿಲ್ಲ, ಧಾರ್ಮಿಕ ಮತ್ತು ಸಾಂಸ್ಕೃತಿಕ ಯಜಮಾನಿಕತೆಯ ಕರಿನೆರಳಿನಲ್ಲಿ ದಲಿತ ಸಮುದಾಯದ ಬದುಕು ತೀರಾ ಕರಾಳವಾಗಿತ್ತು. ಸಾಮಾಜಿಕ ಚಳುವಳಿಗಳ ಹೆಸರಿನಲ್ಲಿ ಮೇಲ್ವರ್ಗವು ತಮ್ಮ ಸಮುದಾಯದ ಹಿತಾಸಕ್ತಿಗಳನ್ನು ಪೂರೈಸಿಕೊಂಡು ಭೂಮಾಲೀಕತ್ವದ ಮೂಲಕ ಇತರ ನಿಮ್ನ ವರ್ಗಗಳ ಮೇಲೆ ನಿಯಂತ್ರಣ ಸ್ಥಾಪಿಸಲು ಆರಂಭಿಸಿದವು.

ಯಾವುದೇ ಚಳುವಳಿಗಳು ಅಥವಾ ಉದಾರವಾದಿ ಚಿಂತನೆಗಳು ದಲಿತರ ಪರವಾಗಿರಲಿಲ್ಲ. ಇಂತಹ ನಿಕೃಷ್ಟ ಬದುಕನ್ನು ನಡೆಸುತ್ತಿದ್ದ ದಲಿತರ ಕ್ರಾಂತಿಕಾರಿ ನಾಯಕನಾಗಿ ಹೊರಹೊಮ್ಮಿದವರು ಅಯ್ಯಂಕಳಿ. ಈತ ಕೇರಳದ ಪುಲಯನ್ ಜಾತಿಗೆ ಸೇರಿದ ಅಯ್ಯನ್ ಮತ್ತು ಮಾಲಾ ದಂಪತಿಗೆ ಮಗನಾಗಿ ಹುಟ್ಟಿದ್ದು ೧೮೬೩ರ ಆಗಸ್ಟ್ ೨೮ರಂದು, ತಿರುವನಂತಪುರದಿಂದ ೧೩ ಮೈಲು ದೂರದ 'ವೆಂಗನ್ನೂರು' ಎಂಬ ಪುಟ್ಟ ಹಳ್ಳಿಯಲ್ಲಿ. ಎಂಟು ಜನ ಮಕ್ಕಳಲ್ಲಿ ಹಿರಿಯವನಾದ ಅಯ್ಯಂಕಳಿ ದೈಹಿಕವಾಗಿ ಬಲಾಢ್ಯನಾಗಿ, ಕ್ರಿಯಾಶೀಲ ವ್ಯಕ್ತಿತ್ವವನ್ನು ಹೊಂದಿದ್ದನು. ಈತನ ತಂದೆ 'ಅಯ್ಯನ್' ವೆಂಗನ್ನೂರು ಗ್ರಾಮದ ನಾಯರ್ ಜಾತಿಗೆ ಸೇರಿದ ಜಮಿನ್ದಾರನೊಬ್ಬನ ಮನೆಯಲ್ಲಿ ಜೀತದಾಳಾಗಿದ್ದನು. ಅಯ್ಯನ್‌ನ ಪ್ರಾಮಾಣಿಕ ಕೆಲಸಕ್ಕೆ ಮನಸೋತ ಜಮೀನ್ದಾರನು ಸುಮಾರು ಐದು ಎಕರೆಗಳಷ್ಟು ಫಲವತ್ತಾದ ಜಮೀನನ್ನು ಈತನ ಕುಟುಂಬದ ನಿರ್ವಹಣೆಗೋಸ್ಕರ ಬಿಟ್ಟುಕೊಟ್ಟಿದ್ದನು. ಇದರಿಂದಾಗಿ ಅಯ್ಯನ್ ಕುಟುಂಬವು ಇತರ ಪುಲಯ ಕುಟುಂಬಗಳಿಗಿಂತ ತಕ್ಕಮಟ್ಟಿನ ಉತ್ತಮ ಜೀವನವನ್ನು ನಡೆಸುತ್ತಿದ್ದರೂ, ಅಯ್ಯಂಕಳಿ ಬೆಳೆದ ಪರಿಸರದಲ್ಲಿ ಜಾತಿ ತಾರತಮ್ಯ ಮತ್ತು ಶೋಷಣೆ ಎಗ್ಗಿಲ್ಲದೆ ನಡೆಯುತ್ತಿತ್ತು. ಅದರಲ್ಲೂ ಸಾಮಾಜಿಕವಾಗಿ ಉನ್ನತ ಸ್ತರದಲ್ಲಿದ್ದ 'ನಾಯರ್' ಸಮುದಾಯವು ದಲಿತ ಹಾಗೂ ಇತರ ಶೂದ್ರ ವರ್ಗದವರನ್ನು ತನ್ನ ಊಳಿಗದವರನ್ನಾಗಿಸಿ ಅವರ ಮೇಲೆ ನಿರಂತರ ಶೋಷಣೆ ನಡೆಸುತ್ತಿದ್ದರು. ಅಯ್ಯಂಕಳಿಗೆ ತನ್ನ ಬಾಲ್ಯದಲ್ಲಿ ಓರಗೆಯ ಬಾಲಕರೊಂದಿಗೆ ಕಾಲ್ಚೆಂಡು ಆಟವಾಡುತ್ತಿದ್ದಾಗ ನಡೆದ ಆಕಸ್ಮಿಕ ಘಟನೆಯೊಂದು

**ಪ್ರಕಾಶ್ ಮಾರ್ಪಾಡಿ**

ಜಾತಿ ತಾರತಮ್ಯದ ಕ್ರೂರ ದಿಗ್ದರ್ಶನವನ್ನು ಪ್ರದರ್ಶಿಸಿತು. ಈ ಘಟನೆ ಅಯ್ಯಂಕಳಿಯ ಸಾಮಾಜಿಕ ಬದುಕು ಹೊಸ ತಿರುವು ಪಡೆಯಲು ಹಾಗೂ ಹಿಂದೂ ಧರ್ಮದ ಹೆಸರಿನಲ್ಲಿ ನಿರಂತರ ಶೋಷಣೆ ನಡೆಸುತ್ತಿದ್ದ ನಾಯರ್ ಸಮುದಾಯಕ್ಕೆ ತಕ್ಕ ಶಾಸ್ತಿ ಮಾಡುವಂತೆ ಪ್ರೇರೇಪಿಸಿತು. ಈ ಪ್ರೇರಣೆಗೆ ತನ್ನದೇ ಸಮುದಾಯದ ಗೆಳೆಯರಿಂದಲೂ ಅಭೂತಪೂರ್ವ ನೈತಿಕ ಬೆಂಬಲ ದೊರೆತದ್ದು ಅಯ್ಯಂಕಳಿಯ ಹೋರಾಟದ ಕಿಚ್ಚನ್ನು ಇಮ್ಮಡಿಗೊಳಿಸಿತು. ಸ್ಥಳೀಯವಾಗಿ ಸಂಘಟಿತರಾದ ಪುಲಯ ಯುವಕರ ಗುಂಪು ಸಾರ್ವಜನಿಕ ಸ್ಥಳಗಳಲ್ಲಿ ಸಭೆ ನಡೆಸಿ ಹಾಡು, ನಾಟಕಗಳ ಮೂಲಕ ಮೇಲ್ವರ್ಗದ ಮೇಲಿನ ಆಕ್ರೋಶವನ್ನು ಹೊರಗೆಡಹಿ ದಲಿತ ಸಮುದಾಯದಲ್ಲಿ ಶೋಷಣೆ ಕುರಿತು ಜಾಗೃತಿ ಮೂಡಿಸಲಾರಂಭಿಸಿತು. ಸಾಮಾಜಿಕ ಬದಲಾವಣೆ ಮತ್ತು ಸಮಾನತೆಯ ಆಶಯವನ್ನು ಹೊಂದಿದ ಯುವ ದಲಿತರ ಸಶಕ್ತ ತಂಡವೊಂದು ಮೂರ್ತ ಸ್ವರೂಪಕ್ಕೆ ಬರಲಾರಂಭಿಸಿದ್ದು ಬಹುತೇಕ ನಾಯರ್ ಜನರಿಗೆ ನುಂಗಲಾರದ ಬಿಸಿ ತುಪ್ಪದಂತಾಯಿತು. ಆದರೂ ಅಯ್ಯಂಕಳಿ ದಿನದಿಂದ ದಿನಕ್ಕೆ ತನ್ನ ವರ್ಚಸ್ಸನ್ನು ವೃದ್ಧಿಸಿಕೊಂಡು ದಲಿತ ಹೋರಾಟಗಾರನಾಗಿ ಹೊರಹೊಮ್ಮಿದರು. ಪುಲಯ ಸಮುದಾಯದ ಜನರು ಇವರನ್ನು ಅತೀ ಗೌರವದಿಂದ 'ಊರಪಿಳ್ಳೈ' ಎಂದು ಕರೆಯಲಾರಂಭಿಸಿದರು.

ಅಯ್ಯಂಕಳಿಯವರ ಹೋರಾಟದ ಸ್ವರೂಪವು ದೇಶದ ಇತರ ಭಾಗಗಳಲ್ಲಿ ಮೇಲ್ವರ್ಗದ ಜನರ ವಿರುದ್ಧ ಸಿಡಿದೆದ್ದ ದಲಿತರ ಹೋರಾಟದ ಸ್ವರೂಪಕ್ಕಿಂತ ಭಿನ್ನವಾಗಿತ್ತು. ತಿರುವನಂತಪುರದ 'ನಾಯರ್' ಸಮುದಾಯದ ವಿರುದ್ಧ ಕ್ರಾಂತಿಕಾರಿ ಧೋರಣೆಯನ್ನು ಹೊಂದಿದ್ದ ಅಯ್ಯಂಕಳಿ, ತಮ್ಮದೇ ಆದ ಬಲಿಷ್ಠ ಯುವಕರ ತಂಡವೊಂದನ್ನು ವ್ಯವಸ್ಥಿತವಾಗಿ ರಚಿಸಿಕೊಂಡಿದ್ದರು. ಈ ತಂಡವನ್ನು 'ಅಯ್ಯಂಕಳಿ ಪದ' ಎಂದು ಕರೆಯಲಾಗುತ್ತಿತ್ತು. ತಂಡದ ಸದಸ್ಯರಿಗೆ ಅನುಭವಿಗಳಿಂದ ಆಕ್ರಮಣ ಕಲೆ, ಕರಾಟೆ ಮುಂತಾದ ದೈಹಿಕ ಕಸರತ್ತುಗಳ ತರಬೇತಿಯನ್ನು ನೀಡಿದರು. ಇವರ ಪ್ರಾರಂಭಿಕ ಹಂತದ ಬಹುತೇಕ ಹೋರಾಟಗಳು ಮೇಲ್ವರ್ಗದ ವಿರುದ್ಧದ ದಂಗೆ, ದೈಹಿಕ ಆಕ್ರಮಣ, ಹಲ್ಲೆಗಳ ರೂಪದಲ್ಲಿ ನಡೆದಿವೆ. ಪುಲಯ ಸಮುದಾಯದ ತೀವ್ರಗಾಮಿ ಧೋರಣೆಗೆ ಅಂದಿನ ಸಮಾಜದಲ್ಲಿ ದೃಢವಾಗಿ ಬೇರೂರಿದ್ದ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳೇ ಪ್ರಮುಖ ಕಾರಣವಾಗಿತ್ತು. ಇಂತಹ ಸಂಕೀರ್ಣ ಸಾಮಾಜಿಕ ಪರಿಸ್ಥಿತಿಗೆ ಕ್ರಾಂತಿಕಾರಿಯಾಗಿ ಸ್ಪಂದಿಸುವ ನಾಯಕತ್ವ ಅನಿವಾರ್ಯವಾಗಿತ್ತೆಂಬುದು ಇತಿಹಾಸಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಅಯ್ಯಂಕಳಿಯವರ ಕ್ರಾಂತಿಕಾರಿ ಹೋರಾಟಗಳಲ್ಲಿ ಪ್ರಮುಖವಾದವುಗಳು, ದಲಿತರ ನಾಗರಿಕ ಹಕ್ಕುಗಳ ಈಡೇರಿಕೆಗಾಗಿ ೧೮೯೩ರಿಂದ ೧೮೯೮ರವರೆಗೆ ನಡೆದ ಸಾಮಾಜಿಕ ದಂಗೆಗಳು. ೨೦ನೇ ಶತಮಾನದ ಅಂತ್ಯದವರೆಗೆ ತಿರುವನಂತಪುರವೂ ಸೇರಿದಂತೆ ಕೇರಳದ ಬಹುತೇಕ ನಗರಗಳ ಸಾರ್ವಜನಿಕ ರಸ್ತೆ ಹಾಗೂ ಮಾರುಕಟ್ಟೆಗಳಿಗೆ ದಲಿತರ ಪ್ರವೇಶವನ್ನು ನಿಷೇಧಿಸಲಾಗಿತ್ತು. ಇದನ್ನು ಮೀರಿ ಪ್ರವೇಶಿಸಿದ ದಲಿತರನ್ನು ಕಠಿಣ ಶಿಕ್ಷೆಗೆ ಗುರಿಪಡಿಸಲಾಗುತ್ತಿತ್ತು. ಇದಕ್ಕೆ ವಿರುದ್ಧವಾಗಿ ಅಯ್ಯಂಕಳಿ ೧೮೯೩ರಲ್ಲಿ ವೆಂಗನ್ನೂರು ಗ್ರಾಮದ ನಿಷೇಧಿತ ಸಾರ್ವಜನಿಕ ರಸ್ತೆಯಲ್ಲಿ ತಾನೂ ಕೂಡ ನಾಯರ್ ಜನರಂತೆ ದಿರಿಸನ್ನು ಧರಿಸಿ, ತಲೆಗೆ ಪೇಟ ಕಟ್ಟಿಕೊಂಡು ಎತ್ತಿನ ಬಂಡಿಯಲ್ಲಿ ಉದ್ದೇಶಪೂರ್ವಕವಾಗಿ ಜೊತೆಗಾರನೊಂದಿಗೆ ಹೆಜ್ಜೆ ಹಾಕಿದರು. ಇದರಿಂದ ಕುಪಿತರಾದ ನಾಯರ್‌ಗಳು ಈತನ ಮೇಲೆ ಆಕ್ರಮಣಕ್ಕೆ ಮುಂದಾದಾಗ, ತನ್ನ ಕೈಯಲ್ಲಿದ್ದ ಆಯುಧದಿಂದ ಅವರನ್ನು ಹೊಡೆದೋಡಿಸಿದರು. ಈ ಸೋಲಿನ ಘಟನೆ ನಾಯರ್‌ಗಳಿಗೆ ಸಹಿಸಲಸಾಧ್ಯವಾದ ಆಘಾತ ನೀಡಿತು. ೧೮೯೮ರಲ್ಲಿ ಅಯ್ಯಂಕಳಿ ತನ್ನ ಸಂಗಡಿಗರೊಂದಿಗೆ ನಿಷೇಧಿತ ಬ್ರಹ್ಮಲಪುರಂ ಮಾರುಕಟ್ಟೆಗೆ ದಲಿತರ ಪಾದಯಾತ್ರೆಯನ್ನು ಹಮ್ಮಿಕೊಂಡರು. ಇದನ್ನರಿತ ಮೇಲ್ಜಾತಿಯವರು ಆಕ್ರಮಣಕ್ಕೆ ಮುಂದಾದಾಗ ಎರಡು ಗುಂಪುಗಳ ಮಧ್ಯೆ ತೀವ್ರಸ್ವರೂಪದ ಹೋರಾಟ ನಡೆದು ನಾಯರ್‌ಗಳನ್ನು ಹಿಮ್ಮೆಟ್ಟಿಸಿದ್ದರು. ಈ ಹೋರಾಟದ ಬಿಸಿ ಅಕ್ಕಪಕ್ಕದ ಹಳ್ಳಿಗಳಿಗೂ ಪಸರಿಸಿ ಅಲ್ಲಿನ ದಲಿತರೂ ನಾಯರ್ ಸಮುದಾಯದ ವಿರುದ್ಧ ದಂಗೆಯೆದ್ದರು. ಈ ಐತಿಹಾಸಿಕ ದಲಿತರ ಹೋರಾಟವು 'ಚೆಲಿಯಾರ್ ದಂಗೆ' ಎಂಬುದಾಗಿ ಇತಿಹಾಸದಲ್ಲಿ ದಾಖಲಾಗಿದೆ.

ಅಯ್ಯಂಕಳಿ ಸಾಮಾಜಿಕ ಸೂಕ್ಷ್ಮತೆಯನ್ನು ಗ್ರಹಿಸುವ ಮತ್ತು ಪ್ರತಿಸ್ಪಂದಿಸುವ ಸಾಮರ್ಥ್ಯವನ್ನು ಹೊಂದಿದ್ದರು. ಪರಿಣಾಮವಾಗಿ, ಅಂದಿನ ಸಮಕಾಲೀನ ಸಮಾಜ ಸುಧಾರಕರ ಚಿಂತನೆಗಳ ನೆಲೆಗಟ್ಟಿನ ಮೇಲೆ ತನ್ನ ಹೋರಾಟದ ರೂಪುರೇಷೆಯನ್ನು ರಚಿಸಿ ಮುಂಚೂಣಿಗೆ ತರಲು ಪ್ರಯತ್ನಿಸಿದರು. ಹಿಂದೂ ಧರ್ಮದ ದೌರ್ಜನ್ಯದಿಂದ ಬೇಸತ್ತ ದಲಿತರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾಗುವುದನ್ನು ತಡೆಯುತ್ತಿದ್ದ ಶ್ರೀ ಸದಾನಂದ ಸ್ವಾಮಿ ಮತ್ತು ಅವರ 'ಬ್ರಹ್ಮನಿಷ್ಠ ಮಂಟಪ', ಸಾಮಾಜಿಕ ಸ್ವಾತಂತ್ರ್ಯದ ಪರವಾಗಿ ಹೋರಾಟ ನಡೆಸುತ್ತಿದ್ದ ತಾಯಿಕಟ್ಟ್ ಅಯ್ಯವ್ ಮುಂತಾದ ವ್ಯಕ್ತಿಗಳು ಮತ್ತು ಚಳುವಳಿಗಳಿಂದ ಅಯ್ಯಂಕಳಿಯವರು ಬಹಳಷ್ಟು ಪ್ರಭಾವಿತರಾದರು. ನಾರಾಯಣ ಗುರುಗಳು ಸಮಕಾಲೀನರಾಗಿದ್ದರೂ ಇವರಿಬ್ಬರ ಮಧ್ಯೆ ತಾತ್ವಿಕ ಭಿನ್ನಾಭಿಪ್ರಾಯಗಳಿದ್ದವು.

ಸ್ವತಃ ಅನಕ್ಷರಸ್ಥರಾಗಿದ್ದ ಅಯ್ಯಂಕಳಿಯವರಿಗೆ ದಲಿತರ ಶಿಕ್ಷಣದ ಬಗ್ಗೆ ಅತೀವ ಕಾಳಜಿಯಿತ್ತು. ಕೇರಳದಲ್ಲಿ ಬ್ರಿಟಿಷ್ ವಸಾಹತುಶಾಹಿಯಿಂದ ಪ್ರವರ್ಧಮಾನಕ್ಕೆ ಬಂದ ಆಧುನಿಕತೆಯ ಫಲವನ್ನು ಮೇಲ್ವರ್ಗದ ಮತ್ತು ಮಧ್ಯಮ ವರ್ಗದ ಕೆಲವರು ಮಾತ್ರ ಅನುಭವಿಸುತ್ತಿದ್ದುದರ ಬಗ್ಗೆ ವ್ಯಥೆ ಇತ್ತು. ಇಂತಹ ಅಸಮಾನ ಅನುಭವಿಸುವಿಕೆಗೆ ಶಿಕ್ಷಣವೊಂದೇ ಪರಿಹಾರವೆಂದು ಮನಗಂಡು, ೧೯೦೪ರಲ್ಲಿ ದಲಿತರಿಗಾಗಿಯೇ ಪ್ರತ್ಯೇಕ ಪ್ರಾಥಮಿಕ ಶಾಲೆಯನ್ನು ವೆಂಗನ್ನೂರಿನಲ್ಲಿ ಪ್ರಾರಂಭಿಸಿದರು. ಇದರಿಂದ ಅಸಮಾಧಾನಗೊಂಡ ನಾಯರ್‌ಗಳು ತರಗತಿ ಪ್ರಾರಂಭವಾದ ಮೊದಲ ದಿನವೇ ಶಾಲೆಗೆ ಬೆಂಕಿ ಹಚ್ಚಿದರು.

ಈ ಘಟನೆಯಿಂದ ಎಳ್ಳಷ್ಟೂ ವಿಚಲಿತರಾಗದ ಅಯ್ಯಂಕಳಿ ೧೯೦೭ರಲ್ಲಿ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗಾಗಿ ದಲಿತ ಮತ್ತು ಇನ್ನಿತರ ದಮನಿತ ಜನರನ್ನೊಳಗೊಂಡ 'ಸಾಧು ಜನ ಪರಿಪಾಲನಾ ಸಂಘಂ' ಎಂಬ ಸಂಘಟನೆಯನ್ನು ತಿರುವನಂತಪುರದಲ್ಲಿ ಆರಂಭಿಸಿದರು. ವ್ಯವಸ್ಥಿತ ಕಾರ್ಯಸೂಚಿ, ಸಾಮಾಜಿಕ ಬದ್ಧತೆ ಮತ್ತು ನಿಯಮಾವಳಿಯನ್ನು ಹೊಂದಿದ್ದ ಈ ಸಂಘಟನೆ ಕೆಲವೇ ವರ್ಷಗಳಲ್ಲಿ ತಿರುವನಂತಪುರದಾದ್ಯಂತ ತನ್ನ ಅನೇಕ ಶಾಖೆಗಳನ್ನು ಪ್ರಾರಂಭಿಸಿತು. ಸಂಘಟನೆಯು ದಲಿತ ಮಕ್ಕಳಿಗೂ ಶಿಕ್ಷಣದ ಸಮಾನ ಅವಕಾಶ ನೀಡುವಂತೆ ಕೋರಿ ತಿರುವನಂತಪುರ ಸಂಸ್ಥಾನಕ್ಕೆ ಮಾಡಿದ ಮನವಿಯನ್ನು ಪುರಸ್ಕರಿಸಿ, ಅಂದಿನ ದಿವಾನರಾಗಿದ್ದ ಪಿ. ರಾಜಗೋಪಾಲಾಚಾರಿಯವರು ೧೯೦೭ರಲ್ಲಿ ದಲಿತರಿಗೂ ಸರಕಾರದ ಶಾಲೆಗಳಲ್ಲಿ ಇತರ ವರ್ಗದ ವಿದ್ಯಾರ್ಥಿಗಳ ಜೊತೆ ಕಲಿಯಲು ಅವಕಾಶ ನೀಡುವಂತೆ ಆದೇಶ ಹೊರಡಿಸಿದರು. ಆದರೆ ಮೇಲ್ವರ್ಗದ ಜನರ ಪಿತೂರಿಯಿಂದ ಈ ಆದೇಶ ಜಾರಿಗೆ ಬರಲಿಲ್ಲ. ಮುಂದೆ, ೧೯೧೦ರಲ್ಲಿ ತಿರುವನಂತಪುರದ ಶಿಕ್ಷಣ ನಿರ್ದೇಶಕರಾಗಿದ್ದ ಬ್ರಿಟಿಷ್ ಅಧಿಕಾರಿ ಮಿಚೆಲ್‌ರವರ ವಿಶೇಷ ಆಸಕ್ತಿಯಿಂದ ಮತ್ತೊಂದು ಆದೇಶವನ್ನು ಹೊರಡಿಸಲಾಯಿತು. ಈ ಆದೇಶದಿಂದ ಪ್ರೇರೇಪಿತರಾದ ಅಯ್ಯಂಕಳಿಯವರು ಪಂಚಮಿ ಎಂಬ ಪುಲಯ ಜಾತಿಗೆ ಸೇರಿದ ವಿದ್ಯಾರ್ಥಿಯನ್ನು 'ಬಲಪ್ಪುರಂ' ಗ್ರಾಮದ ಶಾಲೆಗೆ ಪ್ರವೇಶ ನೀಡುವಂತೆ ಶಾಲಾ ಮುಖ್ಯಸ್ಥರಲ್ಲಿ ವಿನಂತಿಸಿದರು. ಆದರೆ ಇವರ ಬೇಡಿಕೆಗೆ ಬೆಲೆ ನೀಡದ ಶಾಲಾ ಮುಖ್ಯಸ್ಥರ ಧೋರಣೆ ಮತ್ತೊಂದು ಗಲಭೆಗೆ ಕಾರಣವಾಯಿತು. ಈ ಗಲಭೆಯಲ್ಲಿ ಬಹಳಷ್ಟು ದಲಿತರ ಮನೆಗಳು ಬೆಂಕಿಗಾಹುತಿಯಾಗಿ, ದಲಿತ ಮಹಿಳೆಯರ ಮೇಲೆ ನಿರಂತರ ಅತ್ಯಾಚಾರ, ಹಲ್ಲೆ ನಡೆಯಿತು. ಈ ಗಲಭೆಯಲ್ಲಿ ಆಗಷ್ಟೇ ಪ್ರವರ್ಧಮಾನಕ್ಕೆ ಬರುತ್ತಿದ್ದ 'ಈಳವ' ಜಾತಿಯೂ ನಾಯರ್ ಜಾತಿಯವರ ಜೊತೆ ಕೈಜೋಡಿಸಿ ದಲಿತರ ಮೇಲೆ ಹಲ್ಲೆ ನಡೆಸಿದ್ದು ವಿಪರ್ಯಾಸವೇ ಸರಿ. ಅಯ್ಯಂಕಳಿಯವರ ಬೆಂಬಲಕ್ಕೆ ನಿಂತ ಬ್ರಿಟಿಷ್ ಅಧಿಕಾರಿ ಮಿಚೆಲ್‌ರವರ ವಾಹನವನ್ನೂ ಸುಟ್ಟುಹಾಕಲಾಯಿತು. ಈ ಗಲಭೆಯು ಹತ್ತಿರದ ಬಹುತೇಕ ಹಳ್ಳಿಗಳಿಗೆ ಪಸರಿಸಿ ಅಲ್ಲಿಯೂ ದಲಿತರು ದಂಗೆಯೇಳುವಂತಾಯಿತು. ದಲಿತರ ಶೈಕ್ಷಣಿಕ ಮತ್ತು ಮಾನವ ಹಕ್ಕುಗಳಿಗಾಗಿ ನಡೆದ ಈ ಹೋರಾಟವು 'ಪುಲಯರ

### ಪರಿವರ್ತನೆ

ನಿನ್ನೆ<br>
ಆಗಿತ್ತದು<br>
ಒಣಮರದ ಕೊಂಬೆ<br>
ಇಂದು<br>
ಆಗಿದೆ<br>
ಅದರಿಂದ ಚಂದದ ಬೊಂಬೆ

**ಗೀತಾಶಾಸ್ತ್ರಿ**<br>
ಬೆಂಗಳೂರು – ೨೮

ದಂಗೆ' ಎಂದೇ ಇತಿಹಾಸದ ಪುಟ ಸೇರಿತು. ಆದರೂ ಛಲ ಬಿಡದ ವಿಕ್ರಮನಂತೆ ಮಿಚೆಲ್ ಮತ್ತು ಅಯ್ಯಂಕಳಿ ಜೊತೆಗೂಡಿ ಕೇವಲ ಎಂಟು ಪುಲಯ ಮಕ್ಕಳೊಂದಿಗೆ ಮತ್ತೊಂದು ಶಾಲೆಯನ್ನು ಪ್ರಾರಂಭಿಸಿದರು. ಅನಿರೀಕ್ಷಿತ ಒತ್ತಡ ಮತ್ತು ಅನಾನುಕೂಲ ವಾತಾವರಣದ ನಡುವೆಯೂ ಹಲವಾರು ಪುಲಯ ಸಮುದಾಯದ ಮಕ್ಕಳು ಶಿಕ್ಷಿತರಾದರು, ೧೯೧೩ರಲ್ಲಿ ಕೇವಲ ಶೇಕಡ ೨ರಷ್ಟಿದ್ದ ಸಾಕ್ಷರತೆಯ ಪ್ರಮಾಣ ೧೯೧೬ರಲ್ಲಿ ಶೇಕಡ ೧೧ಕ್ಕೆ ಏರಿತು. ಈ ಹೋರಾಟದಲ್ಲಿ ದಲಿತ ಕೃಷಿ ಕಾರ್ಮಿಕರು ಕೈಗೊಂಡ ಅಸಹಕಾರ ತಂತ್ರ, ಕಾರ್ಮಿಕ ಶಕ್ತಿಯು ರಾಜಕೀಯ ಶಕ್ತಿಯಾಗಿ ಹೊರಹೊಮ್ಮುವುದಕ್ಕೆ ಕಾರಣವಾಯಿತು. ಮಹಿಳೆಯರ ಪರವಾಗಿ ಅಯ್ಯಂಕಳಿ ಕೈಗೊಂಡ ಹೋರಾಟಗಳು ಸಾಮಾಜಿಕ ಅಧ್ಯಯನದಲ್ಲಿ ಮರೆಯಲಾಗದ ಅಧ್ಯಾಯಗಳು. ಕೇರಳದಲ್ಲಿ ದಲಿತರೂ ಸೇರಿದಂತೆ ಬಹುತೇಕ ಶೂದ್ರ ಸಮುದಾಯದ ಮಹಿಳೆಯರು ತಮ್ಮ ಪೂರ್ತಿ ದೇಹವನ್ನು ಮುಚ್ಚುವಂತೆ ಉಡುಪು ಧರಿಸುವಂತಿರಲಿಲ್ಲ. ಇಂತಹ ಅಮಾನುಷ ಪದ್ಧತಿಯನ್ನು ವಿರೋಧಿಸಿ ೧೯೧೫ರಲ್ಲಿ 'ಪೆರಿನಾಡು ದಂಗೆ' ನಡೆದು ಸಮಸ್ಯೆ ಪರಿಹಾರವಾಯಿತು. ಈ ದಂಗೆಯ ಪರಿಣಾಮವಾಗಿ ಅಯ್ಯಂಕಳಿಯವರನ್ನು ಪುಲಯ ಸಮುದಾಯದ ಪ್ರತಿನಿಧಿಯನ್ನಾಗಿ ತಿರುವನಂತಪುರ ಸಂಸ್ಥಾನದ 'ಶ್ರೀಮೂಲಂ ಪ್ರಜಾ ಸಭೆಗೆ' ಸೇರಿಸಲಾಯಿತು. ಇದು ದಲಿತರ ರಾಜಕೀಯ ಪ್ರತಿನಿಧೀಕರಣಕ್ಕೆ ಮತ್ತು ನೀತಿ ನಿರೂಪಣೆಯಲ್ಲಿ ದಲಿತರ ನೇರ ಭಾಗವಹಿಸುವಿಕೆಗೆ ಅವಕಾಶ ಕಲ್ಪಿಸಿತು. ಕೇರಳದ ಪುಲಯ ಸೇರಿದಂತೆ ಇನ್ನಿತರ ದಲಿತ ವರ್ಗಗಳ ವಿರುದ್ಧ ನಡೆಯುತ್ತಿದ್ದ ಅಮಾನುಷ ಕೃತ್ಯಗಳಿಗೆ ಪ್ರತಿಭಟನೆಯ ಮೂಲಕ ಪ್ರತಿಕ್ರಿಯಿಸಿ, ದಲಿತರು ಶತಮಾನಗಳಿಂದ ಕಳೆದುಕೊಂಡಿದ್ದ ಮಾನವ ಹಕ್ಕುಗಳು ಮತ್ತು ನಾಗರಿಕ ಹಕ್ಕುಗಳಿಗಾಗಿ ಪಣತೊಟ್ಟು ಹೋರಾಡಿದ ಹೋರಾಟಗಾರ ಅಯ್ಯಂಕಳಿಯವರು ೧೯೪೧ರ ಜೂನ್ ೧೮ರಂದು ನಿಧನರಾದರು. ಇಂತಹ ಕ್ರಾಂತಿಕಾರಿಯ ಧೋರಣೆ, ಚಿಂತನೆ ಮತ್ತು ನಿಲುವುಗಳ ಕುರಿತು ಅಕಾಡೆಮಿಕ್ ವಲಯದಲ್ಲಿ ಗಂಭೀರ ಅಧ್ಯಯನ ನಡೆಯದಿರುವುದು ಒಂದು ದುರಂತ.

**ಪ್ರಕಾಶ್ ಮಾರ್ಪಾಡಿ**
ಯುಜಿಸಿ–ಸೀನಿಯರ್ ರಿಸರ್ಚ್ ಫೆಲೋ, ಸಮಾಜಕಾರ್ಯ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಕರ್ನಾಟಕ

ಕಾವ್ಯಲೋಕ

# ಮಹಾತ್ಮನಾಗಬೇಕಂತೆ...!!!



೧

**ನಾ**ನೀಗ ನೂರರ ಅಜ್ಜಿ
ದಲಿತ ಕೇರಿಗೆ ಒಮ್ಮೆ ಬಂದ... ಗಾಂಧೀ...
ಪೊರಕೆ ಹಿಡಿದ;
ಕ್ಷಣದಲ್ಲಿ
ಹೊಲಸು ಮಾಯ...
ಗಾಂಧೀ ಹಿಂದೆ ಸಾವಿರದ ಜನ.
ಗಾಂಧಿಗೆಂದು "ಹಾಲು" ತಂದೆ
ಅಷ್ಟರಲ್ಲಿ ಗಾಂಧೀ ಜನರಲ್ಲಿ ಮಾಯ.

೨

ಮೊನ್ನೆ...
ಬೆಳಗಾಯಿತೋ ಇಲ್ಲವೋ ಎನ್ನುವಾಗ
ಸೆಗಣಿ ಬಳಿವ ಮೊಮ್ಮಗನ ಕೈಗೆ
ನೀರು ಹಾಕುತ್ತಿದ್ದ ಅಂಬೇಡ್ಕರ್...
ತನ್ನ ಕೋಟಿನಿಂದ ಕೈ ಒರಸಿ
ಹಲಗೆ–ಬಳಪ ಹಿಡಿಸಿ
ಅಕ್ಷರ ಕಲಿಸಲು ಕುಳಿತ–ಕಟ್ಟೆಯ ಮೇಲೆ.
ಭೀಮ ಬಂದನೆಂದು ಜನ ಬಂದರು
ಬೆರಳು ತೋರಿಸಿ; ಸ್ವಾಭಿಮಾನಿಯಾಗಲು
ತಿಳಿಸಿದರು; ಚಹಾ ತಂದೆ.
ಅಷ್ಟರಲ್ಲಿ ಅಂಬೇಡ್ಕರ್ ಜನರಲ್ಲಿ ಕರಗಿಹೋದರು.

೩

ಬಸವ...
ಕಿರೀಟ ಧರಿಸಿ ಕುದುರೆ ಏರಿಬಂದ
ಕಿರೀಟ ಆಭರಣ ಕಿತ್ತೆಸೆದು
ಅಂಗೈಯಲ್ಲಿ ಲಿಂಗವಿರಿಸಿ
ಅಂಗವೇ ಲಿಂಗವೆಂದ.
ಮೈದಡವಿ ನೀನೇ
ನನ್ನ ತಾಯಿ – ಎಂದ.
ನೂರರ ಅಜ್ಜಿಗೆ ಕಣ್ಣಂಚಲ್ಲಿ ನೀರು...
ಬಸವ, ಬಂದಿದ್ದಾನೆ ಕೇರಿಗೆ... ಬನ್ನಿ
ಎಂದು ಕೂಗುವಷ್ಟರಲ್ಲಿ ಜನವೋ ಜನ...
ಪಾದ ಮುಟ್ಟಲು ಬಂದವರಿಗೆ
ಬೇಡ;
ನಿಮ್ಮ ಪಾದುಕೆ ನಾ ಹೊರುವೆ – ಎಂದ.
ಜನಸಾಗರದಲ್ಲಿ ಬೆರೆತುಹೋದ ಬಸವ
ನನಗೇಕೋ ಮತ್ತೆ ಕಾಣಲಿಲ್ಲ...
ಕಲ್ಲು ಸಕ್ಕರೆ ಕೈಯಲ್ಲಿಯೇ ಕರಗಿತು.

೪

ಬುದ್ಧ ಬಂದ...
ಇನ್ನೂ ಬದಲಾಗಿಲ್ಲವೇ ನೀವು ? ಎಂದ.
ಸ್ಪರ್ಶದಿಂದಲೇ ಮೋಕ್ಷ ಕೊಟ್ಟ
ಹೆಣ್ಣು–ಗಂಡು ಭೇದವಳಿದ
ವೈಚಾರಿಕತೆಯ ಗಾಳಿ ಬೀಸಿದ...
ಕಣ್ಣು ಬಂದಂತಾಯಿತು.
ಬಾಗಿದ ಬೆನ್ನು ನೆಟ್ಟಗಾಗಿ
ಜನರೆಡೆಗೆ ನೋಡಿದೆ.
ನೂರಾರು ಕಣ್ಣಲ್ಲಿ ಬುದ್ಧ ಬೆಳಕಾಗಿ ಹೋದ.

೫

ಕೇರಿಯ ಗೋಳು ನೋಡಿಯೋ ಏನೊ ?
ನೆನಪಾಗಿ... ಇಂದು
ಮೊಮ್ಮಗನನ್ನು ಕೇಳಿದೆ...
ಬುದ್ಧ, ಬಸವ; ಗಾಂಧೀ ಅಂಬೇಡ್ಕರ್
ಮತ್ತೆ ಬರಲಿಲ್ಲ ಏಕೆ ? ಎಂದು.
ಅಜ್ಜೀ...
ಪ್ರತಿನಿತ್ಯ ಬರುತ್ತಾರೆ ಶಾಲೆಗೆ
ಮಾತನಾಡಿಸುತ್ತಾರೆ... ಎಂದ.
ಹೌದಾ ! ಎಂದು ಹೌಹಾರಿ;
ಬರಹೇಳು – ಎಂದೆ.
ಮರುದಿನ ಶಾಲೆಯಿಂದ ಓಡಿಬಂದವನೆ,
ಏದುಸಿರು ಬಿಡುತ್ತ ಹೇಳಿದ...
ಇನ್ನು ಮುಂದೆ...
ಬುದ್ಧ, ಬಸವ; ಗಾಂಧೀ, ಅಂಬೇಡ್ಕರ್ – ಎಲ್ಲಾ
ನಾನೇ ಆಗಬೇಕಂತೆ !!
ನಾನೇ ಆಗಬೇಕಂತೆ !!!

**ಯು. ಶ್ರೀನಿವಾಸಮೂರ್ತಿ**
ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜ್
ಸಿರುಗುಪ್ಪ, ಬಳ್ಳಾರಿ ಜಿಲ್ಲೆ

# 'ಏಲಾಡಕ್ಕಿ' ಘಮದಂಥ ಪ್ರಬಂಧಗಳು...

**ಮ**ನುಷ್ಯ ಸಂಬಂಧಗಳ ಮೇಲೆ ಅಗಾಧವಾದ ನಂಬಿಕೆ ಇಟ್ಟಿರುವ ಕವಿ ವಿಜಯಕಾಂತ ಪಾಟೀಲರು ಪ್ರಬಂಧಗಳನ್ನು ಸಹ ಬರೆದಿರುವುದಕ್ಕೆ ಅವರಲ್ಲಿರಬಹುದಾದ, ನಮ್ಮ ಸುತ್ತಲಿನ ವ್ಯವಸ್ಥೆಯನ್ನು ನೋಡಲು ಬೇಕಾಗಿರುವ, ಹರಿತವಾದ ದೃಷ್ಟಿಕೋನವೇ ಕಾರಣ. ತಮ್ಮ ಅನುಭವಕ್ಕೆ ಬಂದ ಸಂಗತಿಗಳ ಕುರಿತಾದ ಆಲೋಚನೆಗಳನ್ನು ಮೈಮನಗಳಲ್ಲಿ ತುಂಬಿಕೊಂಡು, ಅದರ ಕುರಿತಾದ ಆಲೋಚನೆಗಳನ್ನು ತೆಳು ಹಾಸ್ಯದ ಧಾಟಿಯಲ್ಲಿ, ಪ್ರಬಂಧ ರೂಪದಲ್ಲಿ ಮಂಡಿಸುವ ಕಲೆ ಅವರಿಗೆ ಸಿದ್ಧಿಸಿದೆ. ಅವರು ಬರೆದ ಒಟ್ಟು ಒಂಭತ್ತು ಪ್ರಬಂಧಗಳ ಸಂಕಲನವೇ 'ವಜನು ಕಟ್ಟು' ಕೃತಿ. ಮತ್ತು ಈ ಕೃತಿಯಲ್ಲಿರುವ ಪ್ರಬಂಧಗಳನ್ನು ಸವಿಬಂಧಗಳು ಎಂದು ಕರೆದಿರುವುದಕ್ಕೆ ಅವರು ಬದುಕಿನ ಬಗ್ಗೆ ಹೊಂದಿರಬಹುದಾದ ಅಗಾಧವಾದ ಪ್ರೀತಿಯೇ ಕಾರಣವಾಗಿದೆ ಎನ್ನಬೇಕು.

ಈ ಸಂಕಲನದಲ್ಲಿರುವ, 'ಬಂದಿದ್ದೇನೆ ಗುರುಗಳೇ...!' ಪ್ರಬಂಧ, ಒಂದು ಕಾಲದ ಶಿಕ್ಷಣ ಪದ್ಧತಿ, ಗುರು-ಶಿಷ್ಯ ಸಂಬಂಧದ ನಡುವೆ ಇದ್ದ ಪಾವಿತ್ರ್ಯತೆಯ ರೋಚಕ ಸತ್ಯಸಂಗತಿಗಳನ್ನು ವಿವರಿಸುತ್ತಲೇ ಪ್ರಸ್ತುತ ಸಂದರ್ಭದಲ್ಲಿ ವ್ಯಾಪಾರೀಕರಣಗೊಂಡಿರುವ ಶಿಕ್ಷಣ ವ್ಯವಸ್ಥೆ, ಕೇವಲ ತೋರಿಕೆಗಷ್ಟೆ ಇರುವ ಗುರು-ಶಿಷ್ಯರ ನಡುವಿನ ಕೃತ್ರಿಮ ಸಂಬಂಧ ಮತ್ತು ಇಂದಿನ ಗುರು-ಶಿಷ್ಯರು ಹೊಂದಿರಬಹುದಾದ ವಿಕಾರ ಮನೋಸ್ಥಿತಿಗಳ ಕುರಿತಾಗಿ ವ್ಯಂಗ್ಯದ ನೆಲೆಯಲ್ಲಿ ಅನಾವರಣ ಮಾಡುತ್ತದೆ. ಜೊತೆಗೆ, ನಾವೆಲ್ಲ ಒತ್ತಡದ ಬದುಕನ್ನು ನಿರ್ವಹಿಸುತ್ತಿರುವ ಈ ಹೊತ್ತಲ್ಲಿ, ನಮ್ಮೆಲ್ಲ ಬಾಲ್ಯದ ನೆನಪುಗಳು ಯಾವತ್ತಿಗೂ ಕೂಡ ಮೈಮನಗಳಿಂದ ಮಾಸಿಹೋಗದಂತೆ ಮತ್ತೊಮ್ಮೆ ನಮ್ಮೊಳಗೆ ಕಾಪಿಟ್ಟುಕೊಳ್ಳುವಂತೆ ಮಾಡುತ್ತದೆ.

ವಿಜಯಕಾಂತರು ಅಳವಡಿಸಿಕೊಂಡಿರುವ ಬದುಕಿನ ಮಾದರಿ ತುಂಬ ಸರಳವಾದದ್ದು. ಅವರಿಗೆ ಸಂಬಂಧಗಳನ್ನು ಬೆಸೆಯುವುದರಲ್ಲಿಯೇ ನಂಬಿಕೆ. ಈ ಹಿನ್ನೆಲೆಯಲ್ಲಿ ಈ ಕಾಲದಲ್ಲಿ ಮಾನವೀಯ ಸಂಬಂಧಗಳು ಶಿಥಿಲಗೊಳ್ಳುತ್ತಿರುವ ಅಸಂಖ್ಯ ಹಳ್ಳಿಗಳನ್ನು ತನ್ನೂರು 'ಕ್ಯಾಸನೂರ'ನೊಂದಿಗೆ ತುಲನೆಮಾಡಿ ನೋಡುತ್ತಾರೆ. ಈ ಮಾತಿಗೆ ಪೂರಕವಾಗಿ 'ಒಂದೊಮ್ಮೆ ನನ್ನೂರಲ್ಲಿ ಅಳುವೇ ಅಪರೂಪ...!' ಪ್ರಬಂಧ, ಜಾಗತೀಕರಣ ಮತ್ತು ನಗರೀಕರಣ ಪ್ರಕ್ರಿಯೆಯಿಂದಾಗಿ ಒಂದು ಕಾಲದ ಸಂಸ್ಕೃತಿ, ಸಂಪ್ರದಾಯ ಮತ್ತು ಮನುಷ್ಯ ಸಂಬಂಧಗಳು ನಿಧನಿಧಾನವಾಗಿ, ತಮ್ಮ ಪೊರೆಯನ್ನು ಕಳಚಿಕೊಳ್ಳುತ್ತಿರುವ ಈ ದೇಶದ ಅಸಂಖ್ಯ ಹಳ್ಳಿಗಳಿಗೆ ಭಿನ್ನವಾಗಿ ಈಗಲೂ ತನ್ನತನವನ್ನು ಉಳಿಸಿಕೊಂಡಿರುವ 'ಕ್ಯಾಸನೂರು' ಎಂಬ ಅಪ್ಪಟ ದೇಶೀಯತೆಯ ಹಿಂದಿನ ಇತಿಹಾಸವನ್ನು ಅನಾವರಣ ಮಾಡುತ್ತಲೇ ಎಲ್ಲ ಕಾಲಕ್ಕೂ ಎಲ್ಲೆಲ್ಲೂ ಇಂಥದೇ ಪರಿಸರ, ಸಂಸ್ಕೃತಿ ಮತ್ತು ಸಂಬಂಧಗಳ ಅನಿವಾರ್ಯತೆ ಈ ಹೊತ್ತಿನ ತುರ್ತು ಎಂಬ ವಾಸ್ತವ ಸಂಗತಿಯನ್ನು ಮನದಟ್ಟುಮಾಡುತ್ತದೆ.

ಇನ್ನು, ಈ ಕೃತಿಯ ಶೀರ್ಷಿಕೆಯೂ ಆಗಿರುವ, 'ಅಜ್ಜಯ್ಯನೆಂಬೋ ವಜನು ಕಟ್ಟು ಮಾಕಾವ್ಯ' ಪ್ರಬಂಧ, ಒಂದಾನೊಂದು ಕಾಲದಲ್ಲಿನ ಹಳ್ಳಿಯೊಂದರಲ್ಲಿದ್ದ ಪ್ರೀತಿ, ಪ್ರೇಮ, ವಿಶ್ವಾಸ, ಆಂತರಿಕ ಸಂಬಂಧಗಳು ಇವೆಲ್ಲವುಗಳನ್ನು 'ಅಜ್ಜ' ಎಂಬ ಮೊಮ್ಮಕ್ಕಳ ಪಾಲಿನ ವಿಸ್ಮಯದ ಮೂಲಕ ತೆರೆದಿಡುತ್ತಲೇ ನಾವೆಲ್ಲ ಮರೆತು ಮುನ್ನಡೆಯುತ್ತಿರುವ ನಮ್ಮದೇ ಬದುಕಿನ ಒಂದು ಕಾಲದ ಇತಿಹಾಸವನ್ನು ಕಣ್ಮುಂದೆ ತರುತ್ತದೆ. ಜಾಗತೀಕರಣ ಪ್ರಕ್ರಿಯೆಯಿಂದಾಗಿ ಈ ದೇಶದ ಹಳ್ಳಿಗಳಲ್ಲಿದ್ದ ಕೂಡು ಕುಟುಂಬಗಳು, ಇಂದಿನ ದಿನಗಳಲ್ಲಿ ಚಿಕ್ಕ ಚಿಕ್ಕ ಕುಟುಂಬಗಳಾಗಿ ಪರಿವರ್ತನೆಗೊಂಡು, 'ಅಜ್ಜ - ಅಜ್ಜಿ' ಎಂಬ ಹಿರಿಯ ಜೀವಗಳು ವೃದ್ಧಾಶ್ರಮಗಳ ಪಾಲಾಗುತ್ತಿರುವ ಈ ತುರ್ತಿನಲ್ಲಿ ಸಂಬಂಧಗಳ ಕುರಿತು ನಾವೆಲ್ಲರೂ ಯೋಚಿಸಲೇಬೇಕಾದ ಅನಿವಾರ್ಯವನ್ನು ಸಹ ಹೇಳುತ್ತದೆ.

ಇನ್ನೊಂದು, 'ಹನ್ನೊಂದ್ ನಂಬರ್ ಗಾಡಿ !' ಪ್ರಬಂಧ, ಅನಾದಿಕಾಲದಿಂದಲೂ ಮನುಷ್ಯ ರೂಢಿಸಿಕೊಂಡು ಬಂದ 'ನಡಿಗೆ' ಎಂಬ ಸುಖದ ಬಗ್ಗೆ ವಿವರಿಸುತ್ತಲೇ ಸೌಲಭ್ಯಗಳೇ ಇಲ್ಲದಿದ್ದ ಒಂದು ಕಾಲದ ಹಳ್ಳಿಗಳಲ್ಲಿನ ಜನರು ನಿರ್ವಹಿಸುತ್ತಿದ್ದ ಸುಖದ ಬದುಕನ್ನು ಕಣ್ಮುಂದೆ ತಂದು ನಿಲ್ಲಿಸುತ್ತದೆ. ಇಲ್ಲಿ ಅನ್ಯ ಕಾರಣವಿರದೆಯೇ ನಡೆದಾಡುವ ಹುಮ್ಮಸ್ಸಿಗೆ ಬೀಳುತ್ತಿದ್ದ ವಿಜಯಕಾಂತರು, ವಿನಾಕಾರಣವಾಗಿ ನಾವೆಲ್ಲ ನಿರ್ವಹಿಸುತ್ತಿರುವ ಚಲನಶೀಲ ಬದುಕಿನ ಕೆಲವಾರು ಅನಿವಾರ್ಯ ಕ್ರಿಯೆಗಳನ್ನು ಓದುಗನಿಗೆ ವ್ಯಂಗ್ಯದ ಧಾಟಿಯಲ್ಲಿ ನೆನಪಿಸುತ್ತಾರೆ. ಹಾಗೆಯೇ, ' 'ಕವಿಗಾರ' ಎಂಬ ಪಟ್ಟವೂ; 'ಕಾಕಾ' ಎಂಬ ದೋಸ್ತಿಯೂ...' ಪ್ರಬಂಧದಲ್ಲಿ ವಿಜಯಕಾಂತರು, ತಾನು ಕವಿಯಾದ ಬಗ್ಗೆ ಇರುವ ಹಿಂದಿನ ಕಾರಣಗಳನ್ನು ಹೇಳುತ್ತಲೇ ಕೂಡು ಕುಟುಂಬವೊಂದರಲ್ಲಿನ ವ್ಯಕ್ತಿಗಳ ನಡುವೆ ಇರುವ ನೆತ್ತರು ಸಂಬಂಧದೊಂದಿಗೆ ಅನೂಚಾನವಾಗಿ ಮಿಳಿತವಾಗಿರುವ ಮಾನವೀಯ ಪಾತಳಿಯ ಮೇಲಿನ ಸಮಾನತೆಯನ್ನು ಕಾಯ್ದುಕೊಂಡು ಹೋಗಲು ಕಾರಣವಾಗುವ, ನೈತಿಕ ಸಂಬಂಧ ಹೊಂದಿರಬಹುದಾದ ಆರ್ದ್ರತೆಯ ಪರಿಯನ್ನು ಅನಾವರಣ ಮಾಡುತ್ತದೆ. ಇಲ್ಲಿ, ಕಳೆದುಹೋಗಿರುವ 'ಕಾಕಾ' ಎಂಬ ಜೀವ, ಈ ಲೋಕದಲ್ಲಿನ ಎಲ್ಲ ಸೃಜನಶೀಲ ಕ್ರಿಯೆಗಳನ್ನು ಪ್ರತಿನಿಧಿಸುವ ವ್ಯಕ್ತಿಯಂತೆ ಗೋಚರಿಸುತ್ತದೆ. ಅರೆಮಲೆನಾಡು ಪರಿಸರದ ರಸವತ್ತಾದ ಚಿತ್ರಣ ಈ ಪ್ರಬಂಧದಲ್ಲಿದೆ.




ಇದಲ್ಲದೆ, 'ನನಗೂ ಪಾಪು, ನನ್ನ ಮಗನಿಗೂ ಪಾಪು' ಮತ್ತು "ಎಡವಟ್ಟು 'ಚಂಪಾ'ರಣ್ಯದೊಳಗೂ ಪ್ರೀತಿ ಕಾರುಣ್ಯದ ತೇರು" ಪ್ರಬಂಧಗಳಲ್ಲಿ ಚಂಪಾ ಮತ್ತು ಪಾಪುರಂಥ ಸಾಹಿತ್ಯ ಮತ್ತು ಸಾರ್ವಜನಿಕ ಲೋಕದ ವ್ಯಕ್ತಿಗಳ ಕುರಿತಾದ ಸಂಗತಿಗಳನ್ನು ವೈಭವೀಕರಿಸದೆ, ತಾವು ಕಂಡಂತೆಯೇ ವಸ್ತುನಿಷ್ಠವಾಗಿ ಲಘು ಹಾಸ್ಯದ ನೆಲೆಯಲ್ಲಿ ದಾಖಲಿಸಿದ್ದಾರೆ.

ಆಡುನುಡಿಯೊಳಗೆ ತಮ್ಮ ಅನುಭವಗಳನ್ನು ಮಿಳಿತಗೊಳಿಸಿ ಹೇಳುವ ಕಲೆ ವಿಜಯಕಾಂತರಿಗೆ ಸಿದ್ಧಿಸಿದೆ. ಇಲ್ಲಿ ಅವರು ಕಂಡುಂಡ ಅನುಭವಗಳಿಗೆ ತಮ್ಮದೇ ಕಲ್ಪನೆಯಲ್ಲಿ 'ಕ್ಯಾಸನೂರು' ಪರಿಸರದ ಆಡುನುಡಿಯನ್ನು ಬಳಸಿ ಹೊಸ ರೂಪು ಕೊಡುತ್ತಾರೆ. ಪ್ರಬಂಧ ಪ್ರಕಾರದ ತಂತ್ರಗಾರಿಕೆಯಲ್ಲಿನ ಹೊಸ ಸಾಧ್ಯತೆಯ ಬಗ್ಗೆ ಇರುವ ಅವರ ಆಲೋಚನಾ ಕ್ರಮಕ್ಕೆ ಕನ್ನಡಿ ಹಿಡಿಯುತ್ತದೆ.

ಈ ಪ್ರಬಂಧ ಸಂಕಲನದ ಇನ್ನೊಂದು ವಿಶೇಷವೆಂದರೆ, ಅಲ್ಲಲ್ಲಿ ಪ್ರಬಂಧಗಳೊಂದಿಗೆ 'ಬಂಧ' ಕೆಡದಂತೆ ಕವಿತೆಗಳನ್ನು ಅಳವಡಿಸಿರುವುದು. ಇಲ್ಲಿ, ಪ್ರಬಂಧದ ಇಡಿಯಾದ ಸಾರವನ್ನು ಕವಿತೆಯಲ್ಲೂ ಕಟ್ಟಿಕೊಡುವ ಪ್ರಯೋಗವನ್ನು ವಿಜಯಕಾಂತರು ಮಾಡಿರುವುದು.

**ಕಲ್ಲೇಶ್ ಕುಂಬಾರ್**
ಮಲ್ಲಿಕಾರ್ಜುನ ಹೋಟೆಲ್, ಅಂಚೆ : ಹಾರೂಗೇರಿ - ೫೯೧ ೨೨೦
ರಾಯಭಾಗ ತಾಲೂಕು, ಬೆಳಗಾವಿ ಜಿಲ್ಲೆ



# ಡಾ|| ಜಿ. ರಾಮಕೃಷ್ಣ ಅವರ
# 'ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ'

**ಜನಪರ ಚಿಂತಕರೂ, ಖ್ಯಾತ ಶಿಕ್ಷಕ ತಜ್ಞರೂ, 'ಹೊಸತು' ಪತ್ರಿಕೆಯ ಗೌರವ ಸಂಪಾದಕರೂ ಆಗಿರುವ ಡಾ|| ಜಿ. ರಾಮಕೃಷ್ಣ ಅವರು ಜುಲೈ 2013ರಿಂದ ನವೆಂಬರ್ 2015ರವರೆಗೆ 30 ತಿಂಗಳ ಕಾಲ 'ಹೊಸತು' ಪತ್ರಿಕೆಯಲ್ಲಿ ಪ್ರಕಟಿಸಿದ ಲೇಖನ ಮಾಲೆ ಇದೀಗ ಪುಸ್ತಕ ರೂಪದಲ್ಲಿ ಲಭ್ಯ.**




₹ 200

ಮಾನವನ ನಾಗರಿಕತೆಯ ಇತಿಹಾಸದಲ್ಲಿ ಋಗ್ವೇದಕ್ಕಿಂತಲೂ ಪ್ರಾಚೀನವಾದವು ಹಲವಿವೆ. ಹರಪ್ಪ–ಮೊಹೆಂಜೊದಾರೊ, ಬ್ಯಾಬಿಲೋನಿಯಾ, ಈಜಿಪ್ಟ್ ಮುಂತಾದವು ಅದಕ್ಕೆ ಉದಾಹರಣೆ. ಆದರೆ ಋಗ್ವೇದವೇ ಮಾನವ ಸಂಸ್ಕೃತಿಯಲ್ಲಿ ಆದಿಗ್ರಂಥ. ಅಷ್ಟು ವಿಪುಲವಾದ ಸಾಹಿತ್ಯವು ಆ ಕಾಲಕ್ಕೆ ಬೇರಾವುದೂ ಇರಲಿಲ್ಲ. ಅದರ ಉದಾತ್ತತೆಯನ್ನು ಗುರುತಿಸಿ, ಗೌರವಿಸಲು ನಮ್ಮಲ್ಲಿ ಅದನ್ನು 'ಅಪೌರುಷೇಯ' ಎನ್ನಲಾಗಿದೆ. ಋಗ್ವೇದವನ್ನು ಅರ್ಥೈಸುವಾಗ ಸಲ್ಲದ ಭಾವುಕತೆಯು ನಮ್ಮ ಸಂಪ್ರದಾಯದಲ್ಲಿ ಬೆಳೆದುಬಂದಿದೆ. ಕಳೆದೆರಡು ಶತಮಾನಗಳಲ್ಲಿ ಋಗ್ವೇದವನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡಿರುವ ವಿದ್ವಾಂಸರು ಅನೇಕರಿದ್ದಾರೆ. ಆ ಪೈಕಿ ಕೆಲವರು ಋಗ್ವೇದದಲ್ಲಿ ಅಗಾಧ ನಿಗೂಢತೆಯನ್ನು ಅರಸಲು ಮುಂದಾಗಿದ್ದಾರೆ, ಇನ್ನು ಕೆಲವರು ಆಧುನಿಕ ಜ್ಞಾನದ ಅನೇಕ ಪ್ರಕಾರಗಳನ್ನು ಅದರ ಮೇಲೆ ಆರೋಪಿಸುವ ಹುಮ್ಮಸ್ಸು ಪ್ರಕಟಿಸಿದ್ದಾರೆ. ನಿಜಕ್ಕೂ ಋಗ್ವೇದದ ಅಧ್ಯಯನ ನಡೆಯಬೇಕಾದ್ದು ಚಾರಿತ್ರಿಕ ಮತ್ತು ಸಾಮಾಜಿಕ ನೆಲೆಯಲ್ಲಿ. ನಮಗಿನ್ನೂ ಪೂರ್ತಿಯಾಗಿ ಅರ್ಥವಾಗಿಲ್ಲದ ಭಾಗಗಳು ಋಗ್ವೇದದಲ್ಲಿ ಇವೆಯಾದರೂ ಅಂದಿನ ಸಮಾಜದ ಚಿತ್ರಣವನ್ನು ಪಡೆಯಲು ಭೇದಿಸಲಾಗದ ಮುಗ್ಗಟ್ಟೇನೂ ಇಲ್ಲ. ದಸ್ಯುಗಳ ಅವಹೇಳನ, ಇಂದ್ರನ ಪ್ರತಾಪ, ವರುಣನ ನೈತಿಕ ಸಂಹಿತೆ, ಪಣಿಗಳ ಸಂಪತ್ತಿನ ಲೂಟಿ, ಸೂರ್ಯಾಳ ಮದುವೆಯ ರಮ್ಯತೆ, ಜಗತ್ತಿನ ವಿಸ್ಮಯಗಳನ್ನು ಕಂಡಾಗಿನ ಬೆರಗು, ದೇವತೆಗಳನ್ನು ಆತ್ಮೀಯರಂತೆ ನಡೆಸಿಕೊಳ್ಳುವುದು, ಇವೆಲ್ಲ ಅಂದಿನ ಸಮಾಜದ ಅಂತಸ್ಸಂಬಂಧ ಮತ್ತು ಘರ್ಷಣೆಗಳು, ಜ್ಞಾನತೃಷೆ, ಸಂಕೀರ್ಣ ಆಚರಣೆಗಳ ವಿಕಾಸ ಮುಂತಾದುವನ್ನು ನಮ್ಮ ಮುಂದೆ ತೆರೆದಿಡುತ್ತವೆ. ಋಗ್ವೇದದ ಕಾವ್ಯಾತ್ಮಕತೆಯಂತೂ ಅನನ್ಯವಾದ್ದು. ಸಾಮಾನ್ಯ ಓದುಗರು ಸಹ ಋಗ್ವೇದವನ್ನು ಆಪ್ತವಾಗಿಸಿಕೊಳ್ಳುವುದು ಅವಶ್ಯಕ ಮತ್ತು ಅದು ಸಾಧ್ಯವಿದೆ. 'ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ' ಆ ದಿಕ್ಕಿನಲ್ಲಿ ಒಂದು ಸ್ತುತ್ಯರ್ಹ ಪ್ರಯತ್ನವಾಗಿದೆ. ಆಕರ ಗ್ರಂಥವಾಗಿಯೂ ಅದಕ್ಕೆ ಮಹತ್ವವಿದೆ.



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

